॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೨೨

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೨



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

# ಮುನ್ನುಡಿ

ನಮ್ಮ ದೇಶದ ಸಮಸ್ತ ಮುನಿಗಳು, ಜ್ಞಾನಿಗಳು, ಕವಿಗಳು, ತಮ್ಮ ತಮ್ಮ ಗ್ರಂಥಗಳಲ್ಲಿ ಸಂಸಾರವೆಂಬುದನ್ನು ಒಂದು ದೊಡ್ಡ ಸಾಗರಕ್ಕೋ ಅಥವಾ ನರಕಲೋಕಕ್ಕೋ ಅಥವಾ ದುಷ್ಟಮೃಗಗಳಿಂದ ಭರಿತವಾದ ಮಹಾರಣ್ಯಕ್ಕೋ ಹೋಲಿಸಿ, ಅದರಿಂದ ಪಾರಾಗಲು ನಾನಾರೀತಿಯ ಉಪಾಯಗಳನ್ನು ಪ್ರತಿಪಾದಿಸಿರುವರು. ಪುರಾಣಕಾರರ ದೃಷ್ಟಿಯಿಂದ ಆಬ್ರಹ್ಮಕೀಟಪರ್ಯಂತವಾಗಿ ಎಲ್ಲರೂ ಸಂಸಾರಿಗಳೇ. ಎಲ್ಲರೂ ಸಂಸಾರದ ಕಷ್ಟಸುಖಗಳನ್ನು ಅರಿತವರೇ. ಆದರೂ ವ್ಯವಹಾರ ದೆಶೆಯಲ್ಲಿ ಎಲ್ಲರಿಗೂ ಸಂಸಾರ ಬೇಕೆನಿಸುವುದು. ದಿವ್ಯದೇಹಧಾರಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರು ಮಾತ್ರ ತಾವು ಸಂಸಾರಿಗಳಾಗಿದ್ದರೂ, ತಮ್ಮಿಷ್ಟದಂತೆ ಸಂಸಾರವನ್ನು ನಡೆಸುವರು. ಸಂಸಾರವನ್ನು ವಿಹಾರಕ್ಕೆ ತಿರುಗಿಸಿಕೊಳ್ಳುವರು. ಅವರಿಗೆ ಎಂದು ಸಾಂಸಾರಿಕ ವ್ಯವಹಾರಗಳು ಬೇಡವಾಗುವುವೋ, ಅಂದೇ ಅವರು ಪೂರ್ಣವಾಗಿ ಅದನ್ನು ತ್ಯಜಿಸಿ ನಿರ್ಲಿಪ್ತರಾಗುವರು. ಅವರಿಗೆ ಮಾತ್ರ ಆ ಸಾಮರ್ಥ್ಯವುಂಟು. ಕರ್ಮಜನ್ಯದೇಹಿಗಳಾದ ಮಾನವರಿಗೆ ಇದು ಸಾಧ್ಯವಿಲ್ಲ. ಇವರು ಸಂಸಾರವನ್ನು ಬಯಸುವರು. ಆದರೆ ಅದು ಕೊಡುವ ಕಷ್ಟಸುಖಗಳನ್ನು ಅನುಭವಿಸಲು ಸಿದ್ಧರಾಗಿರಬೇಕು. ಇಷ್ಟೇ ದೇವಮಾನುಷ ಸಂಸಾರದವರಿಗಿರುವ ವ್ಯತ್ಯಾಸ. ಅನೇಕ ಪುರಾಣಗಳು ದಿವ್ಯದೇಹಿಗಳ ಸಂಸಾರದಲ್ಲಿಯೂ ಅನೇಕ ತೊಡರುಗಳನ್ನು ತೋರ್ಪಡಿಸಿ ಅವರು ಅದನ್ನು ಪರಿಹರಿಸಿಕೊಂಡ ಮಾರ್ಗವನ್ನು ಬಹು ವಿಸ್ತಾರವಾಗಿ ಪ್ರತಿಪಾದಿಸಿರುವುವು. ಪ್ರಕೃತ ಇದೇ ಶಿವರಹಸ್ಯದ ಎಂಟನೆಯ ಅಂಶವಾದ ಈ ಭಾಗದಲ್ಲಿ ಕಶ್ಯಪರು ದಿವ್ಯಜ್ಞಾನಿಗಳಾಗಿ, ಶಮದಮವೈರಾಗ್ಯಾದಿಗಳಿಂದ ಜೀವನ್ಮುಕ್ತರಾಗಿದ್ದರೂ, ಅವರ ಪತ್ನಿಯರಾದ ಕದ್ರೂ, ಸುಪರ್ಣಾ ಇವರಿಬ್ಬರು ಸಾಮಾನ್ಯ ಮಾನವಸ್ತ್ರೀಯರಂತೆ ಸವತಿಮಾತ್ಸರ್ಯವನ್ನು ವ್ಯಕ್ತಪಡಿಸಿ ಹೊಡೆದಾಡಿರುವರು. ಸುಪರ್ಣಾತನುಜನಾದ ಗರುಡನಿಗೆ ಇವರಿಬ್ಬರನ್ನು ಸಮಾಧಾನಪಡಿಸಲು ಸಾಧ್ಯವಾಗಲಿಲ್ಲ. ಆಗ ತಂದೆಯಾದ ಕಶ್ಯಪರಲ್ಲಿಗೆ ಹೋಗಿ ತನ್ನ ಗೃಹಕೃತ್ಯದ ವಿಷಯವನ್ನು ಗರುಡನು ನಿವೇದಿಸಿದಾಗ, ಅವರು 'ಸಂಸಾರದುಃಖ ನಾಶಕವಾದ ಶಿವಮಂತ್ರಮಹಿಮೆ ಮತ್ತು ಶಿವಪೂಜಾಕ್ರಮ ಇವುಗಳನ್ನು ಸಾವಧಾನದಿಂದ ಮಗನಿಗೆ ಉಪದೇಶಿಸಿದರೆಂದಿದೆ. ಹೀಗೆ ಪ್ರಾಕರಣಿಕವಾಗಿ ಬಂದ ವಿಷಮಸಂದರ್ಭಗಳನ್ನು ಮಾನವರು ದಾಟಬೇಕಾಗಿ ಬಂದಾಗಲೆಲ್ಲಾ ಇಷ್ಟದೇವತಾ

ಧ್ಯಾನಮಾಡುವುದೊಂದೇ ಸುಗಮವಾದ ಮಾರ್ಗವೆಂಬುದನ್ನು ಪುರಾಣೇತಿಹಾಸ ಕಾರರು ಸ್ಪಷ್ಟವಾಗಿ ತಿಳಿಸುತ್ತಿರುವರು.

ಈ ಭಾಗದಲ್ಲಿ ಅನೇಕ ಉಪನಿಷದರ್ಥಪ್ರತಿಪಾದಕಗಳಾದ ಶ್ಲೋಕಗಳು ಶಿವಮಹಿಮಾನಿರೂಪಣಾವಸರದಲ್ಲಿ ಬಂದಿವೆ. ಗರುಡನ ದಿವ್ಯಶಿವಭಕ್ತಿಗೆ ವಿಷ್ಣುವೂ ಹೆದರಬೇಕಾಯಿತು; ಹಾಗೆಯೇ ಶಾಂಭವರು ಸರ್ವವನ್ನೂ ಸುಲಭವಾಗಿ ಹೊಂದ ಬಲ್ಲರು. ಪರಮ ಶಾಂಭವರೇ ಹಿಂದಿನ ಮತ್ತು ಇಂದಿನ ಮಹಾಪುರುಷರು ಇತ್ಯಾದಿ ಶಿವ ಮತ್ತು ಶಾಂಭವರ ಮಹಿಮೆಯನ್ನು ನಿರೂಪಿಸುವ ಅನೇಕ ಪ್ರಕರಣಗಳು ಅಲ್ಲಲ್ಲಿ ಕಂಡುಬರುತ್ತಿವೆ. ಎಂದಿನಂತೆ ಶಿವಸ್ತೋತ್ರಗಳು ನಾನಾರೀತಿಯ ಛಂದಸ್ಸಿನಲ್ಲಿ ಮೃದುಮಧುರಶೈಲಿಯಿಂದ ವಾಚಕರ ಮನಸ್ಸಿಗೆ ಆಹ್ಲಾದಕರಗಳಾಗಿವೆ.

ಇಂತಹ ಅಮೂಲ್ಯ ಗ್ರಂಥರತ್ನಪ್ರಕಾಶನಕ್ಕೆ ಸರ್ವಸಹಾಯವನ್ನೂ ಒದಗಿಸಿ ಆಸ್ತಿಕಮಹಾಶಯರಿಗೆ ದಿವ್ಯನಿಧಿಯನ್ನೇ ದೊರಕಿಸಿಕೊಟ್ಟಿರುವ ಶ್ರೀಮನ್ಮಹೀಶೂರದಿವ್ಯಸಂಸ್ಥಾನಾಧಿಪತಿಗಳೂ, ಪ್ರಾಚೀನ ವಿದ್ಯಾಪಕ್ಷಪಾತಿಗಳೂ ಆದ ಶ್ರೀಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೂ, ಅವರ ಕುಟುಂಬವರ್ಗಕ್ಕೂ ಜಗದೀಶ್ವರನು ಸಮಸ್ತ ಕಲ್ಯಾಣಗಳನ್ನೂ ಕರುಣಿಸಿ ಆಯುರಾರೋಗ್ಯಾದಿಗಳಿಂದ ಸಲಹುತ್ತಿರಲಿ ಎಂದು ಅನನ್ಯಭಕ್ತಿಯಿಂದ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ವಿಕೃತಿನಾಮ ಸಂವತ್ಸರದ
ಶ್ರಾವಣ ಕೃಷ್ಣ ಪಂಚಮೀ
ಶುಕ್ರವಾರ
1—9—1950

ಸಜ್ಜನವಿಧೇಯ,
ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದ ವಿಷಯಾನುಕ್ರಮಣಿಕಾ

## ಎಂಟು, ಒಂಬತ್ತು, ಹತ್ತು ಈ ಅಧ್ಯಾಯಗಳು



## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ



## ಹದಿನಾರನೆಯ ಅಧ್ಯಾಯ



## ಹದಿನೇಳನೆಯ ಅಧ್ಯಾಯ



## ಹದಿನೆಂಟನೆಯ ಅಧ್ಯಾಯ



## ಹತ್ತೊಂಬತ್ತನೆಯ ಅಧ್ಯಾಯ

## ಇಪ್ಪತ್ತನೆಯ ಅಧ್ಯಾಯ



## ಇಪ್ಪತ್ತೊಂದನೆಯ ಅಧ್ಯಾಯ



## ಇಪ್ಪತ್ತೆರಡನೆಯ ಅಧ್ಯಾಯ



## ಇಪ್ಪತ್ತುಮೂರನೆಯ ಅಧ್ಯಾಯ



## ಇಪ್ಪತ್ತುನಾಲ್ಕನೆಯ ಅಧ್ಯಾಯ



## ಇಪ್ಪತ್ತೈದನೆಯ ಅಧ್ಯಾಯ



## ಇಪ್ಪತ್ತಾರನೆಯ ಅಧ್ಯಾಯ



## ಇಪ್ಪತ್ತೇಳನೆಯ ಅಧ್ಯಾಯ



## ಇಪ್ಪತ್ತೆಂಟನೆಯ ಅಧ್ಯಾಯ

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಪ್ರಥಮೋಽಧ್ಯಾಯಃ

॥ ಓಂ ॥ ದಿಙ್ನಾಗಬೃಂದಸದೃಶಾನನನಾಗಭೂಷಂ
ಪ್ರೇಮಾಸ್ಪದಾಂಗಮಗಜಾಮುಖಪದ್ಮಮಿತ್ರಂ ।
ತಂ ನೋ ನುಮಃ ಪ್ರಣತವಿಘ್ನಹರಂ ಗಣೇಶಂ
ಈಶಾತ್ಮಜಂ ಶರವಣೋದ್ಭವವಂದ್ಯಮಾದ್ಯಂ ॥೧॥

---

ಶ್ರೀಶಿವರಹಸ್ಯದಲ್ಲಿ ಭೀಮಸಂಜ್ಞಕವಾದ ಎಂಟನೆಯ ಅಂಶವು ಆರಂಭವಾದುದು.

## ಮೊದಲನೆಯ ಅಧ್ಯಾಯ

ಅಷ್ಟದಿಗ್ಗಜಗಳ ಮುಖದಂತೆ ಆನನವುಳ್ಳವನೂ, ಸರ್ಪವನ್ನೇ ಆಭರಣವನ್ನಾಗಿ ಮಾಡಿಕೊಂಡವನೂ, ಪಾರ್ವತೀದೇವಿಯ ಮುಖಕಮಲಕ್ಕೆ ಸೂರ್ಯನಂತೆ ಆಹ್ಲಾದಕರನೂ ಆದ ಮಹಾಗಣಪತಿಯನ್ನು ಭಕ್ತಿಯಿಂದ ವಂದಿಸುವೆವು. ಹಾಗೆಯೇ ಮಹೇಶ್ವರಪುತ್ರನೆನಿಸಿ, ಶರವಣದಲ್ಲಿ ಜನಿಸಿದವನಾಗಿ ಸರ್ವರಿಗೂ ಪೂಜ್ಯನಾಗಿರುವ ಸಕಲ ದೇವಗಣಗಳಿಗೂ ನಾಯಕನಾದ ಷಣ್ಮುಖನಿಗೂ, ಸಕಲ ಕಾರ್ಯಗಳ ವಿಘ್ನನಿವಾರಣಾರ್ಥವಾಗಿ ಸರ್ವದಾ ಎರಗುವೆವು. ಎಂದು ಸೂತಮಹರ್ಷಿಗಳು ಅಂಶಾರಂಭದಲ್ಲಿ ಸ್ಕಂದಗಣಪರನ್ನು ಪ್ರಾರ್ಥಿಸಿದರು. ॥೧॥

॥ ಸೂತ ಉವಾಚ ॥

ಜೈಗೀಷವ್ಯಃ ಪ್ರಣಮ್ಯಾಸ್ಯಂ ಪ್ರಶ್ನಂ ಚಕ್ರೇ ಮುನೀಶ್ವರಾಃ ।
ಸ್ಕಂದಂ ನಂದಿತಮುಂದಾರವೃಂದಂ ಸಂಹೃತತಾರಕಂ ॥೧॥

॥ ಜೈಗೀಷವ್ಯ ಉವಾಚ ॥

ಶ್ರುತಂ ತೇ ತಾರಕಾರಾತೇ ಆನಂದವನವೈಭವಂ ।
ಸಹಸ್ರಂ ನಾಮ ಯಚ್ಛಂಭೋರ್ದಿವ್ಯಂ ರುದ್ರಸಮನ್ವಿತಂ ॥೨॥

ಕ್ಷೇತ್ರಾಣಾಂ ಮಹಿಮಾ ಶಂಭೋಃ ಶಿವಧರ್ಮಾಃ ಸನಾತನಾಃ ।
ವಿಷ್ಣೋಶ್ಚ ಪುಷ್ಪದಂ ತಸ್ಯ ಮಹಿಮ್ನಃ ಶ್ರುತಮುತ್ತಮಂ ॥೪॥

ಸಪ್ತಮಾಂಶೇ ಕಥಾಶ್ಚಿತ್ರಾಃ ಸ್ವತಃ ಶಿವತನೂಭವ ।
ಅಷ್ಟಮಾಂಶೇ ಕಥಾಶ್ಶಂಭೋರಷ್ಟಮೂರ್ತೇರ್ವದಸ್ವ ನೋ ॥೫॥

ಶೇಷೇಣ ಚ ತಪಸ್ತಪ್ತಂ ಶಿವಪಾದಾರ್ಚಕೇನ ಹಿ ।
ಸರ್ಪೈಶ್ಚ ಪೂಜಿತಶ್ಶಂಭುರಿತ್ಯುಕ್ತಂ ಪ್ರಥಮಾಂಶಕೇ ॥೬॥

---

ಆನಂತರ ಸೂತರು ಮುಂದಿನ ಶಿವರಹಸ್ಯದ ಕಥೆಯನ್ನು ಭಕ್ತಿಯಿಂದಾಲಿಸುತ್ತಿದ್ದ ಶೌನಭಾರ್ಗವಾದಿ ಮಹರ್ಷಿಗಳಿಗೆ ಈ ರೀತಿ ವಿವರಿಸಿ ಹೇಳಲಾರಂಭಿಸಿದರು. ಎಲೈ ಮುನಿವರ್ಯರೇ, ನಮ್ಮ ಗುರುವರ್ಯರಾದ ಜೈಗೀಷವ್ಯಮಹರ್ಷಿಗಳು ಸಕಲ ದೇವತೆಗಳಿಂದ ವಂದಿತನಾಗಿಯೂ, ತಾರಕಾಸುರನಾಶಕನಾಗಿಯೂ ಇರುವ ಕುಮಾರಸ್ವಾಮಿಯನ್ನು ಸ್ತುತಿಸಿ ಶಿವರಹಸ್ಯವನ್ನು ಕೇಳುವ ಕುತೂಹಲದಿಂದ ಮತ್ತೊಂದು ಪ್ರಶ್ನೆ ಮಾಡಿದರು. ॥೧॥

"ಮಹಾದೇವಪುತ್ರನೇ, ನಿನ್ನಿಂದ ನಾವು ಇಲ್ಲಿನವರೆಗೂ, ಪರಶಿವನ ಸಹಸ್ರನಾಮಗಳನ್ನೂ, ರುದ್ರಾಧ್ಯಾಯದ ಅರ್ಥವಿವರಣೆಯನ್ನೂ ಕೇಳಿ ತಿಳಿದುಕೊಂಡೆವು. ಶಿವಕ್ಷೇತ್ರಗಳ ಮಹಿಮೆಯೂ, ಅನಾದಿಯಾಗಿ ಬಂದ ಶಿವಧರ್ಮಸ್ವರೂಪವೂ ವಿಷ್ಣುವು ಕಮಲಗಳಿಂದ ಶಿವಾರ್ಚನೆ ಮಾಡಿದುದೂ, ವಿಷ್ಣುವಿಗೆ ಪರಶಿವನು ಅನುಗ್ರಹಿಸಿದ ಉಪದೇಶವೂ ನಿನ್ನಿಂದ ನಮಗೆ ಬೋಧಿತವಾದವು. ॥೨-೪॥

ಮೇಲೆ ಹೇಳಿದ ಎಲ್ಲವನ್ನೂ ಏಳನೆಯ ಅಂಶದಲ್ಲಿ ನೀನು ವಿಶದಪಡಿಸಿರುವೆ. ಹಾಗೆಯೇ ಈ ಎಂಟನೆಯ ಅಂಶದಲ್ಲಿಯೂ ಶಿವಮಹಿಮಾಪೂರಿತಗಳಾದ ಕಥೆಗಳಿ

ಕಾಲಕಾಲಕಥಾಖ್ಯಾನೈರ್ನೇಯಃ ಕಾಲೋಽಧುನಾ ಮಯಾ ।
ಕೃಪಯಾ ತ್ವತ್ಪದಾಂಭೋಜಮನುಲೋಕೇ ವದಸ್ವ ನೋ ॥೭॥

ಯಥಾ ತ್ವಯಾ ಶ್ರುತಂ ದೇವ್ಯಾ ವದನಸ್ಪಂದಿ ಸನ್ಮಧು ।
ಮಚ್ಚಿತ್ತಭ್ರಮರೋ ನಿತ್ಯಂ ಪಾತುಮಿಚ್ಛತಿ ಷಣ್ಮುಖ ॥೮॥

ಶಂಭೋಶ್ಚರಿತ್ರಂ ಪಾಪಘ್ನಂ ವದ ತಾರಕಸಂಹರ ।
ತ್ವತ್ಕೃಪಾಪಾತ್ರಭೂತೋ ಯಃ ಸ ತ್ರಿನೇತ್ರಪ್ರಿಯೋ ಭವೇತ್ ॥೯॥

ಶ್ರುತಿಶ್ರವಣಭೂತಸ್ಯ ಚರಿತ್ರಂ ಪಾತಕೌಘಭಿತ್ ।
ವದಾದ್ಯ ಶೂರಸಂಹಾರ ಮಾರಮಾರಪ್ರಿಯಾತ್ಮಜ ॥೧೦॥

॥ ಸೂತ ಉವಾಚ ॥

ತದಾನೀಂ ಶಾಂಭವಸ್ಯಾಸ್ಯ ವಚಃ ಶ್ರುತ್ವಾ ಹರಾತ್ಮಜಃ ।
ಅಕಥಿಷ್ಟೋದಂತಮೇನಂ ಶಿಪಿವಿಷ್ಟಕಥಾಶ್ರಯಂ ॥೧೧॥

---

ದ್ದರೆ ಹೇಳುವವನಾಗು. ಹಿಂದಿನ ಪ್ರಥಮಾಂಶದಲ್ಲಿ ಆದಿಶೇಷನು ತಪಸ್ಸುಮಾಡಿದು ದನ್ನೂ, ಇತರ ಸರ್ಪಗಳು ಪರಶಿವನನ್ನು ಪೂಜಿಸಿದುದನ್ನೂ ನೀನು ಹೇಳಿದೆ ಯಲ್ಲವೆ! ॥೫-೬॥

ನಾನು ನನ್ನ ಕಾಲವನ್ನೆಲ್ಲಾ ಕಾಲಕಾಲನಾದ ಮಹಾದೇವನ ಕಥಾಶ್ರವಣ ದಿಂದ ಕಳೆಯಬೇಕೆಂದಿರುವೆನು. ಆರುಮುಖವುಳ್ಳವನೇ, ನಿನಗೆ ಪಾರ್ವತಿಯಿಂದ ತಿಳಿದುಬಂದಿರುವ ಶಿವಕಥಾಮೃತವನ್ನು ಅತ್ಯಂತಾಸಕ್ತಿಯಿಂದ ಪಾನಮಾಡಲು ನನ್ನ ಮನಸ್ಸು ಈಗ ಹಾತೊರೆಯುತ್ತಿರುವುದು. ॥೭-೮॥

ಈಶ್ವರನ ಕಥೆಯು ಕೇಳುವವರ ಪಾಪರಾಶಿಯನ್ನು ನಿವಾರಿಸಬಲ್ಲುದು. ಅದಲ್ಲದೆ, ತಾರಕಾಸುರನಾಶಕನಾದ ಕುಮಾರಸ್ವಾಮಿಯೇ, ನಿನ್ನ ಅನುಗ್ರಹಕೆ ಪಾತ್ರನಾದವನು ಶಂಕರನಿಗೆ ಪ್ರಿಯನಾದಂತೆಯೇ ಸರಿ. ಪರಶಿವಪುತ್ರನೇ, ಕಿವಿಗೆ ಇಂಪಾಗಿಯೂ, ಪಾಪಪರಿಹಾರಕವಾಗಿಯೂ ಇರುವ ಶಿವಕಥಾಮೃತವನ್ನು ದಯೆ ಯಿಂದ ನಮಗೆ ಅನುಗ್ರಹಿಸು." ॥೯-೧೦॥

ಎಂದು ಪ್ರಾರ್ಥಿಸಿದ ಜೈಗೀಷವ್ಯಮಹಾಮುನಿಯ ಮಾತುಗಳನ್ನು ಕೇಳಿ ಕುಮಾರಸ್ವಾಮಿಯು ಸಂತೋಷಪಟ್ಟವನಾಗಿ, ನಾಗಲೋಕದವರು ನಾಗಭೂಷಣ

ನಾಗ್ಯೈಃ ಪ್ರಪೂಜನಂ ಶಂಭೋಃ ನಾಗಭೂಷಸ್ಯ ಈಶಿತುಃ ।
ಕದ್ರೂರ್ಸುಪರ್ಣೀಸಂವಾದಾದ್ಗರುಡೇನ ಪರಾಭವಃ ॥೧೨॥

ಶಿವಧರ್ಮಪ್ರಸಂಖ್ಯಾನಂ ಗರುಡಾಯ ದೃಢಾರ್ಥದಂ ।
ಕಶ್ಯಪಸ್ಯ ಚ ಸಂವಾದೋ ಗರುಡೇನ ಮುನೀಶ್ವರಾಃ ॥೧೩॥

ಯಥಾಪರ್ಣಾಮುಖೇಂದೂತ್ಥಂ ಶಿವೇನ ಕಥಿತಂ ರಹಃ ।
ಪುಣ್ಯಂ ಶಿವರಹಸ್ಯಾಖ್ಯಂ ಮಧು ಶೈವಾಂಗಪುಷ್ಟಿದಂ ॥೧೪॥

ಶಾಂಭವಾಃ ಷಟ್ಪದಾ ಏವ ತಜ್ಜಿಘೃಕ್ಷವ ಉತ್ತಮಾಃ ।
ಮುನಿಂ ಪ್ರಾಹ ತದಾ ಸ್ಕಂದೋ ಗಣೇಂದ್ರಾನಮುದೋತ್ತಮಾನ್ ॥೧೫॥

ನಮಸ್ಕೃತ್ಯ ಮಹಾದೇವಮಂಬಾಂ ಹೇರಂಬಮೇವ ಚ ।
ಧ್ಯಾತ್ವಾ ಚಿರಂ ಪ್ರಸನ್ನಾತ್ಮಾ ಸ್ವಹೃತ್ಪಂಕಜಸಂಸ್ಥಿತಂ ॥೧೬॥

ಪುರುಷಂ ಪರಮೈಶಾನಂ ಸರ್ವಭೂತಗುಹಾಶಯಂ ।
ವ್ಯಾಪ್ಯವ್ಯಾಪಕತಾಹೀನಂ ಕಾರಣಾನಾಂ ಚ ಕಾರಣಂ ॥೧೭॥

---

ನಾದ ಪರಶಿವನನ್ನು ಪೂಜಿಸಿದುದನ್ನೂ, ಕದ್ರೂ ಮತ್ತು ಸುಪರ್ಣಾದೇವಿಯರ ಸಂಭಾಷಣೆಯನ್ನೂ, ಗರುಡನಿಗೆ ಉಂಟಾದ ಸೋಲನ್ನೂ ವಿವರಿಸಿ ಹೇಳತೊಡಗಿದನು. ॥೧೧-೧೨॥

ಗರುಡನಿಗೆ ಕಶ್ಯಪಮಹರ್ಷಿಗಳು ಬೋಧಿಸಿದಂತಹ ಶಿವಧರ್ಮವು ನನಗೆ ಪಾರ್ವತಿಯ ಮುಖಕಮಲದಿಂದ ತಿಳಿದುಬಂದಿದೆ. ಅಂತಹ ಪುಣ್ಯಕರವೂ, ಶಿವ ಭಕ್ತಿಯುತವೂ ಆದ ಶಿವರಹಸ್ಯವನ್ನು, ಜೈಗೀಷವ್ಯನೇ, ಈಗ ನಿನಗೆ ಬೋಧಿಸುವೆನು. ॥೧೩-೧೪॥

ಎಲೈ ಜೈಗೀಷವ್ಯಾದಿಗಳೇ, ನೀವೆಲ್ಲಾ ಶಾಂಭವರು. ಶಿವರಹಸ್ಯವೆಂಬ ಅಮೃತಪಾನಕ್ಕಾಗಿ ಭ್ರಮರರೂಪದಿಂದ ನಿಂತಿರುವವರು ಎಂದು ಹೇಳುತ್ತಾ ಕುಮಾರಸ್ವಾಮಿಯು ಭಾವಪರವಶನಾಗಿ ಮೊದಲು ಪಾರ್ವತೀಪರಶಿವರನ್ನೂ, ಪ್ರಮಥಗಣನಾಯಕರನ್ನೂ ತನ್ನ ಹೃದಯಕಮಲದಲ್ಲಿ ಧ್ಯಾನಿಸತೊಡಗಿದನು. ॥೧೫-೧೬॥

ಷಣ್ಮುಖಸ್ವಾಮಿಯು, ಸಕಲೈಶ್ವರ್ಯಸಂಪನ್ನನೂ, ಸಕಲ ಪ್ರಾಣಿಗಳಿಗೂ ಆಶ್ರಯವಿತ್ತಿರುವವನೂ, ಹಿರಿದು ಕಿರಿದೆಂಬ ಭಾವವನ್ನಿಡಲು ಅಸಾಧ್ಯನಾದವನೂ,

ಪತೀನಾಂ ಪತಿಮೀಶಾನಂ ಉಮಾಪತಿಮನಾಮಯಂ ।
ಗಣಾನಾಂ ಚ ಪತಿಂ ದೇವಂ ಶಿವಂ ಗೃತ್ಸಪತಿಂ ಪ್ರಭುಂ ॥೧೮॥

ಕುಲುಂಚಾನಾಂ ಪತಿಂ ಶಂಭುಂ ಹರಂ ವ್ರಾತಪತಿಂ ವಿಭುಂ ।
ದಿಶಾಂ ಚ ಪತಿಮೀಶಾನಮುಗ್ರಂ ದೇವಂ ಕಪರ್ದಿನಂ ॥೧೯॥

ಅವಿಕೇಶಂ ಪಶುಪತಿಂ ಪಥೀನಾಂ ಪತಿಮೀಶ್ವರಂ ।
ಅನ್ನಾನಾಂ ಚ ಪತಿಂ ದೇವಂ ಬಭ್ಲುಶಂ ಮೀಢುಷಂ ಶಿವಂ ॥೨೦॥

ಭವೋದ್ಭವಂ ಮಹಾದೇವಂ ಪುಷ್ಟಾನಾಂ ಪತಿಮೀಶ್ವರಂ ।
ಜಗತಾಂ ಪತಿಮಾಶಾಸ್ಯಂ ವನಾನಾಂ ಚ ಪತಿಂ ಭವಂ ॥೨೧॥

ಕ್ಷೇತ್ರಾಣಾಂ ಚ ಪತಿಂ ಭೀಮಂ ವೃಕ್ಷಾಣಾಂ ಶರ್ವಮೀಶ್ವರಂ ।
ಕಕ್ಷಾಣಾಂ ಚ ಪತಿಂ ವ್ಯೋಮಕೇಶಂ ಕೋಶಾದಿವರ್ಜಿತಂ ॥೨೨॥

---

ಜಗತ್ತಿನಲ್ಲಿ ಸಕಲ ಕಾರಣವಸ್ತುಗಳಿಗೂ ಮೂಲಕಾರಣನೆನಿಸಿರುವವನೂ, ಸಕಲ ಸೇನಾಪತಿಗಳಿಗೂ ಪತಿಯೆನಿಸಿಕೊಂಡಿರುವವನೂ ಆದ ಉಮಾಪತಿ, ಗಣಪತಿ, ಗೃತ್ಸಪತಿಯೆಂಬ ಹೆಸರುಗಳಿಂದ ಪ್ರಸಿದ್ಧಿಪಡೆದಿರುವ ಮಹೇಶ್ವರನನ್ನು ಮನಸಾ ಸ್ಮರಿಸಿದನು. ॥೧೭,೧೮॥

ಕುಲುಂಚರಿಗೂ, (ಗೃಹಕ್ಷೇತ್ರಾದಿ ಭೂಭಾಗಗಳನ್ನು ಅಪಹರಿಸುವವರು) ವ್ರಾತರಿಗೂ, (ಭಿನ್ನಭಿನ್ನ ಜಾತೀಯರ ಸಂಘಗಳು) ದಿಕ್ಕುಗಳಿಗೂ, ಪಶುಗಳಿಗೂ, ಪಥಿಕರಿಗೂ, (ಸಮಸ್ತ ದಿಕ್ಕುಗಳಲ್ಲಿಯೂ ಸಂಚರಿಸುವವರು) ಆಹಾರವಸ್ತುಗಳಿಗೂ, ಬಭ್ಲುಶರಿಗೂ (ಎತ್ತಿನಮೇಲೆ ಕುಳಿತಿರುವವರು) ಒಡೆಯನಾಗಿ ಜಟಾಜೂಟಗಳಿಂದ ಶೋಭಿಸುತ್ತಾ, ಉಗ್ರರೂಪದಿಂದಲೂ, ಮಂಗಳಸ್ವರೂಪದಿಂದಲೂ ವಿರಾಜಿಸುವ ಪರಮೇಶ್ವರನನ್ನು ಸ್ಕಂದನು ಮನಸಾ ಧ್ಯಾನಿಸಿದನು. ॥೧೯-೨೦॥

ಸಂಸಾರಸಾಗರದಿಂದ ಉದ್ಭವಿಸುವವನೂ, ಮಹಾದೇವನೂ, ದೇಹಪುಷ್ಟಿಯಿಂದ ಬೆಳೆದವರಿಗೆಲ್ಲಾ ಒಡೆಯನಾದವನೂ, ಐಶ್ವರ್ಯಪ್ರದನೂ, ಸಕಲ ಪ್ರಪಂಚಕ್ಕೂ ಒಡೆಯನಾದವನೂ, ಭಕ್ತರಿಗೆ ಮಂಗಳವನ್ನು ಕೋರುವವನೂ, ಸಕಲವಿಧವಾದ ಜಲರಾಶಿಗೂ ಸ್ವಾಮಿಯಾದವನೂ ಆದ ಮಹಾದೇವನಿಗೆ ವಂದಿಸುವೆನು. ಸಕಲ ಕ್ಷೇತ್ರಗಳಿಗೂ, ಸಕಲ ಔಷಧಿಗಳಿಗೂ, ಕಾಳಾಳುಗಳ ಕೋಟೆಗೂ,

ಜಗತಾಂ ಚೈವ ವಿಶ್ವೇಶಮೋಷಧೀನಾಂ ಮಹೇಶ್ವರಂ ।
ಪತ್ರಿಣಾಂ ಮೇರುಧನುಷಂ ಸತ್ವಾನಾಂ ಬಾಣಧಾರಕಂ ॥೨೩॥

ಸಹಮಾನಂ ಮಹೇಶಾನಮಾವ್ಯಾಧಿಪತಿಮೀಶ್ವರಂ ।
ಸರ್ವೇಷಾಂ ತಸ್ಥುಷಾಣಾಂ ಚ ಜಂಗಮಾನಾಂ ಪತಿಂ ಪ್ರಭುಂ ॥೨೪॥

ಸರ್ವೈಶ್ವರ್ಯೇಣ ಸಂಪನ್ನಂ ನಾಮ್ನಾ ಸರ್ವೇಶ್ವರಂ ಶಿವಂ ।
ಅನಾಮರೂಪಂ ದೇವೇಶಂ ಸರ್ವಾವಾಸಂ ಚ ದೂರಗಂ ॥೨೫॥

ಸರ್ವಭೂತೇಷು ಶರಣಂ ಶರಣ್ಯಂ ಶರಣಾರ್ಥಿನಾಂ ।
ಮಹಾಕಾರುಣಿಕಂ ಸಾಂಬಂ ಭಕ್ತಾನಾಮಭಯಪ್ರದಂ ॥೨೬॥

ಸರ್ವೇಂದ್ರಿಯಾರ್ಥರಹಿತಂ ವಿಷಯಾದಿ ವಿವರ್ಜಿತಂ ।
ಸರ್ವೇಂದ್ರಿಯಗುಣಾತೀತಂ ಸರ್ವಾಧಾರಮನೌಪಮಂ ॥೨೭॥

---

ಸಕಲ ಪ್ರಾಣಿಗಳಿಗೂ ಸ್ವಾಮಿಯಾಗಿರುವವನು ಆ ಪರಮಾತ್ಮನೇ. ಆತನು ಸುಖ ಪ್ರದನು, ವ್ಯೋಮಕೇಶನು, ಅನ್ನಮಯಾದಿ ಪಂಚಕೋಶಗಳಿಂದ ದೂರನಾದವನು, ಸಕಲ ಕಷ್ಟಗಳನ್ನೂ ಸಹಿಸತಕ್ಕವನು, ಮಹೇಶ್ವರನು, ಸಕಲವಿಧವಾದ ವ್ಯಾಧಿ ಗಳಿಗೂ ಒಡೆಯನೆನಿಸಿರುವವನು, ಸ್ಥಾವರ ಮತ್ತು ಜಂಗಮವಾದ ವಸ್ತುಗಳೆಲ್ಲಕ್ಕೂ ಮೂಲಭೂತನೆನಿಸಿದವನು. ॥೨೧-೨೨-೨೩-೨೪॥

ಸಕಲವಿಧವಾದ ಐಶ್ವರ್ಯಗಳಿಂದಲೂ ಕೂಡಿರುವವನು, ಅನೇಕ ಹೆಸರು ಗಳಿಂದ ಸರ್ವಕ್ಕೂ ಒಡೆಯನಾಗಿರುವವನು, ವಾಸ್ತವವಾಗಿಯೂ ಹೆಸರು, ರೂಪು ಇವುಗಳಿಂದ ದೂರನಾದವನು, ಸಮಸ್ತ ದೇವತೆಗಳಿಗೂ ಒಡೆಯನಾದವನು, ಸಮಸ್ತ ಪ್ರಪಂಚವನ್ನೇ ಅಡಗಿಸಿಕೊಂಡಿರುವವನು, ದೂರದಲ್ಲಿ ನೆಲಸಿರುವವನು, ಆದರೂ ಸಕಲ ವಸ್ತುಗಳಿಗೂ ರಕ್ಷಕನಂತಿರುವವನು, ಮೊರೆಹೊಕ್ಕವರಿಗೆ ಆಶ್ರಯ ವನ್ನೀಯುವವನು, ದಯಾಶಾಲಿಯು, ಪಾರ್ವತೀ ಸಹಿತನಾಗಿರುವವನು, ಭಕ್ತರಿಗೆ ಧೈರ್ಯವನ್ನು ಕೊಡುವವನು. ॥೨೫-೨೬॥

ಪಂಚೇಂದ್ರಿಯವಿಷಯಗಳಿಂದಲೂ ದೂರನಾಗಿರುವವನು, ವಿಷಯಸುಖ ಗಳಿಂದ ಬಿಡುಗಡೆ ಹೊಂದಿರುವವನು, ಇಂದ್ರಿಯಗಳಿಂದಲೂ, ಷಡ್ಗುಣಗಳಿಂದಲೂ ಕೂಡದ ಸ್ವರೂಪವುಳ್ಳವನು, ಸಕಲ ವಸ್ತುಗಳಿಗೂ ಆಧಾರಭೂತನಾದವನು,

ಸರ್ವಸ್ಯ ಪ್ರಭುಮೀಶಾನಂ ನಾನ್ಯತ್ಕಿಂಚಿದಮುಂಸ್ಮ ವೈ ।
ಧ್ಯಾತ್ವಾ ಹೃತ್ಪಂಕಜೇ ದೇವಮುಮಯಾ ಸಹಿತಂ ಶಿವಂ ॥೨೮॥

ಸರ್ವೇಂದ್ರಿಯಾರ್ಥರಹಿತಂ ಮಹಾನಂದಾಂಬುಮಗ್ನಧೀಃ ।
ಅವಶೇನ ಜಗಾದೇದಂ ಸ್ಕಂದೋ ನಂದಾಂಬುಮಗ್ನಧೀಃ ॥೨೯॥

॥ ಶ್ರೀ ಸ್ಕಂದ ಉವಾಚ ॥

ಲೋಕಾನುಗ್ರಹವಿಗ್ರಹ ತ್ರಿಜಗತಾಂ ಸಂಹಾರಕೋಗ್ರ ಪ್ರಭೋ
ಗ್ರಸ್ತಂ ಮಾಮಹಿನೇವ ಸೋಮಮಗಜಾಕಾಂತೋಽರುಪಾಪಾತ್ಮನಾ।
ಭಕ್ತಂ ಚಾಪಿ ಭವಾನನುಗ್ರಮನಸಾ ಪಶ್ಯಾದ್ಯ ನಿಗ್ರಾಹ್ಯಮಸ್ಯ
ಗ್ರಾಹ್ಯಂ ಶಶಿಶೇಖರಾರ್ಚಕಮಹಂ ಗ್ರಾಹ್ಯಾಗ್ರಗಣ್ಯೋ ನ ಕಿಂ ॥೩೦॥

ಆಶಾಂಬರಶೂಲಾಢ್ಯ ಶಂಭೋ ಭವಹರ ಭಗವನ್ ರುದ್ರ ಭರ್ಗ ತ್ರಿನೇತ್ರ
ಭೀಮೋಗ್ರಾಧ್ವರದಕ್ಷಪಕ್ಷಸುರತಾನೀಕಾಪ್ತಭುಜಾಂ ಶಿಕ್ಷಕ ।

---

ಉಪಮಾರಹಿತನು, ಜಗದೊಡೆಯನು, ಈಶಾನರೂಪಿಯು, ವಾಸ್ತವಿಕವಾಗಿ ಪ್ರಪಂಚಸ್ವರೂಪವನ್ನೇ ಅರಿಯದವನು, ಹೃದಯಕಮಲದಲ್ಲಿ ಸದಾ ಪಾರ್ವತೀ ಸಹಿತವಾದ ರೂಪಿನಿಂದ ಧ್ಯಾನಕ್ಕೆ ಯೋಗ್ಯನಾದವನು. ॥೨೭-೨೮॥

ಸಮಸ್ತ ಇಂದ್ರಿಯವಿಷಯ ಸ್ವರೂಪನಲ್ಲದವನು, ಮಹಾನಂದವೆಂಬ ಸಮುದ್ರದಲ್ಲಿ ಮುಳುಗಿರುವವನು, ಇಂತಹ ಮಹಾನುಭಾವನಾದ ಪರಶಿವನನ್ನು ಕುಮಾರಸ್ವಾಮಿಯು ಧ್ಯಾನಿಸುತ್ತಾ ಕೊನೆಯಲ್ಲಿ ಹೀಗೆ ಬೇಡಿಕೊಂಡನು. "ಮಹಾದೇವನೇ, ತ್ರಿಲೋಕನಾಶಕನೇ, ನಾನು ರಾಹುವಿನಿಂದ ಹಿಡಿಯಲ್ಪಟ್ಟ ಚಂದ್ರನಂತೆ ಅನೇಕ ಪಾಪರಾಶಿಯಿಂದ ಮುಳುಗಿ ಹೋಗಿರುವೆನು. ನಿನ್ನ ಪೂರ್ಣ ದಯೆಗೆ ಪಾತ್ರನಾಗಿಯೂ, ಚಂದ್ರಶೇಖರನಾದ ನಿನ್ನನ್ನೇ ಧ್ಯಾನಿಸುವವನಾಗಿಯೂ ಇರುವ ನನ್ನನ್ನು ದಯಾದೃಷ್ಟಿಯಿಂದ ಉದ್ಧರಿಸುವವನಾಗು. ನಿಜವಾಗಿಯೂ ನಾನು ನಿನ್ನ ಭಕ್ತರಲ್ಲಿ ಶ್ರೇಷ್ಠನೆನಿಸಿಕೊಂಡಿರುವೆನಲ್ಲವೆ? ॥೨೯-೩೦॥

ಸಂಸಾರಸಾಗರದಿಂದ ಸುಲಭವಾಗಿ ದಾಟಿಸುವವನೇ, ಅಲಾದ್ಯನೇ, (ಕರ್ಮ ಫಲವನ್ನು ಅನುಭವಿಸುವ ಜೀವಸ್ವರೂಪನೇ) ಸುಖಕರನೇ, ಸಂಸಾರಸಾಗರದಿಂದ ಉದ್ಧರಿಸುವವನೇ. ಷಡ್ಗುಣೈಶ್ವರ್ಯಸಂಪನ್ನನೇ, ರುದ್ರನೇ, ಸೂರ್ಯರೂಪಿಯೇ,

**ಉಕ್ಷಾಧೀಶ್ವರವಾಹ ಕಕ್ಷವಸತೇ ಶಂಭೋ ಭಗಾಕ್ಷಿಕ್ಷಯ**
**ಧ್ವಾಂಕ್ಷಾಕ್ಷಿಪ್ರಭದಕ್ಷದೀಕ್ಷಿತಮಹಾದೀಕ್ಷಾವಿನಾಶಾವ ಮಾಂ ॥೩೧॥**

**ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಜೈಗೀಷವ್ಯಪ್ರಶ್ನೇ**
**ಸ್ಕಂದಕೃತ ಶಿವಧ್ಯಾನವರ್ಣನಂ ನಾಮ ಪ್ರಥಮೋಧ್ಯಾಯಃ**

---

ಮೂರು ಕಣ್ಣುಗಳಿಂದ ಶೋಭಿಸುವವನೇ, ಭಯಂಕರನಾದವನೇ, ದಕ್ಷಬ್ರಹ್ಮನ ಪಕ್ಷದಲ್ಲಿ ನಿಂತು ಅವನಿಂದ ಕೊಡಲ್ಪಟ್ಟ ಹವಿರ್ಭಾಗವನ್ನು ಭಕ್ಷಿಸಿದವರನ್ನೆಲ್ಲಾ ಸುಲಭವಾಗಿ ನಾಶಮಾಡಿದವನೇ, ವೃಷಭವಾಹನನೇ, ನೀನು ನನ್ನನ್ನು ರಕ್ಷಿಸು. ಶಂಭುವೇ, ನೀನು ದಕ್ಷಬ್ರಹ್ಮನ ಯಾಗದಲ್ಲಿ ಭಗದೇವತೆಯ ಕಣ್ಣುಗಳನ್ನು ನಿರ್ಮೂಲಗೊಳಿಸಿದವನಲ್ಲವೆ? ಕಾಗೆಯ ಕಣ್ಣಿನಂತೆ ವಕ್ರದೃಷ್ಟಿಯುಳ್ಳ ದಕ್ಷಬ್ರಹ್ಮನ ಯಾಗದಲ್ಲಿ ಮಹಾದೀಕ್ಷೆಯನ್ನು ಪಡೆದಿರುವವರನ್ನೆಲ್ಲಾ ನಾಶಗೊಳಿಸುವ ಸ್ವಭಾವವುಳ್ಳವನೆನಿಸಿ, ದುಷ್ಟರನ್ನೆಲ್ಲಾ ನಿಗ್ರಹಿಸಿದವನು ನೀನಲ್ಲವೆ? ಮಹಾದೇವನೇ, ನನ್ನನ್ನು ಕಾಪಾಡು" ಎಂದು ನಾನಾವಿಧವಾಗಿ ಪ್ರಾರ್ಥನೆ ಮಾಡಿದನು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಜೈಗೀಷವ್ಯನ ಪ್ರಶ್ನೆಗೆ ಉತ್ತರ ಹೇಳುವ ಕುಮಾರಸ್ವಾಮಿಯು
ಶಿವನನ್ನು ಧ್ಯಾನಿಸಿದ ಪ್ರಥಮಾಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ದ್ವಿತೀಯೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶೃಣು ತೂರ್ಣಂ ಕೃಪಾಂಭೋಧೇಃ ಕಥಾಖ್ಯಾನಂ ಮುನೀಶ್ವರ ।
ಜೈಗೀಷವ್ಯ ಮಹಾಶೈವ ಜಿತಷಡ್ವೈರಿವಿಕ್ರಮ ॥೧॥

ಪಂಚೇಷುಮತ್ತಮಾತಂಗಹರಪಂಚಾಸ್ಯವಿಕ್ರಮ ।
ಸಂಪೂರ್ಣೈವ ಮಹೇಶಸ್ಯ ಕೃಪಾಪೂರ್ಣಾರ್ಣವಸ್ಥಿರ ॥೨॥

ಅಪರ್ಣಾರಮಣಾರ್ಚಾತೋ ಭವಾನಭ್ಯರ್ಣ ಏವ ಹಿ ।
ಮಯಾ ಷಡ್ವದನಾಂಭೋಜಶ್ರವಣೈಃ ಶ್ರುತವೈಶ್ವರಂ ॥೩॥

---

## ಎರಡನೆಯ ಅಧ್ಯಾಯ

ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನೂ ಜಯಿಸಿರುವ ಜೈಗೀಷವ್ಯ ಮಹರ್ಷಿಯೇ, ನೀನು ಮನ್ಮಥನೆಂಬ ಮದ್ದಾನೆಯನ್ನು ನಾಶಗೊಳಿಸುವುದರಲ್ಲಿ ಸಿಂಹದಂತೆ (ಪರಶಿವನಂತೆ) ಪರಾಕ್ರಮವುಳ್ಳವನಾಗಿರುವೆ. ಅಲ್ಲದೆ ಪರಶಿವನ ಸಂಪೂರ್ಣವಾದ ದಯಾಸಾಗರದಲ್ಲಿ ಸ್ಥಿರವಾಗಿ ನೀನು ನಿಂತಿರುವೆ. ಇಂತಹ ನೀನು ನಾನು ಈಗ ಹೇಳುವಂತಹ ಶಿವಸಂಬಂಧವಾದ ಕಥೆಗಳನ್ನು ಲಾಲಿಸುವವನಾಗು. ॥೧-೨॥

ನೀನು ಪರಶಿವನ ಪೂಜೆಯಲ್ಲಿಯೇ ಸದಾ ನಿರತನಾಗಿರುವೆ. ನಾನಾದರೋ, ನನ್ನ ಆರು ಮುಖಗಳಲ್ಲಿರುವ ಕಿವಿಗಳಿಂದ ಈಶ್ವರಸಂಬಂಧವಾದ, ಮತ್ತು ಪರಶಿವನ ಮಹಿಮೆಯನ್ನು ಪ್ರದರ್ಶಿಸುವಂತಹ, ಹಾಗೆಯೇ ಪಾರ್ವತಿಯ ಮುಖಕಮಲದಲ್ಲಿ

ಮಾಹಾತ್ಮ್ಯಂ ಪರಮೇಶಸ್ಯ ಮಹಿಮಾನಂ ಮಹಾಘಭಿತ್ ।
ದೇವ್ಯುತ್ಫುಲ್ಲಮುಖಾಂಭೋಜಮರಂದಸ್ಪಂದಿಸುಂದರಂ ॥೪॥

ಪುಣ್ಯಂ ಶಿವರಹಸ್ಯಾಖ್ಯಂ ಮಧುಷೂತ್ತಮಮುತ್ತಮಂ ।
ಅಮೃತಾದಪಿ ವಿಪ್ರೇಂದ್ರ ಸಾರಭೂತಮಿದಂ ಧ್ರುವಂ ॥೫॥

ಕಿಂ ಚಾಮೃತಸ್ಯ ಪಾನೇನ ನೈವ ಮುಕ್ತಿರ್ಭವಿಷ್ಯತಿ ।
ಏತಚ್ಛಿವರಹಸ್ಯಾಖ್ಯಾಮೃತಪಾನಂ ವಿಮುಕ್ತಿದಂ ॥೬॥

ತ್ವಮೇವ ಪಾತ್ರಂ ವಿಪ್ರೇಷು ಶ್ರವಣೇ ತೇ ಧೃತಾ ಮತಿಃ ।
ಅಮೀ ಗಣೇಂದ್ರಾ ವಿಪ್ರೇಂದ್ರಾ ಸುರೇಂದ್ರಾಶ್ಚ ಯಥಾಸುಖಂ ॥೭॥

ಆನಂದಘನಕಂದಸ್ಯ ಮಹಿಮಾನಂ ಮಹೇಶಿತುಃ ।
ಅಸ್ಮಿನ್ನಂಶೇ ಮಹಾದೇವ್ಯೈ ಮಹೇಶೇನೋಪವರ್ಣಿತಃ ॥೮॥

ಭೀಮೋಂಶಮಾಷ್ಟಃ ಕಥಿತೋ ದೇವೇಶಸ್ಯ ಪ್ರಸಾದಕೃತ್ ।
ಭೀಮೇನ ಕಥಿತೋ ದೇವ್ಯೈ ಅಘೋರಾಸ್ಯೇನ ಶಾಂಕರ ॥೯॥

---

ಮಕರಂದದಂತೆ ಸುಂದರವಾಗಿ ಹೊಳೆಯುವ ಶಿವಕಥಾಮೃತವನ್ನು ಕೇಳಿ ಆನಂದ ಪಟ್ಟಿರುವೆನು. ॥೩-೪॥

ಈ ಶಿವರಹಸ್ಯವೆಂಬ ಶ್ರೇಷ್ಠವಾದ ಮಧುವು ಅಮೃತಕ್ಕಿಂತಲೂ ರುಚಿಕರವೂ, ಪವಿತ್ರವೂ ಆಗಿದೆ. ಅಮೃತಪಾನದಿಂದ ಆಯುರಾರೋಗ್ಯಾದಿಗಳು ಹೆಚ್ಚುವುದಾದರೂ, ಶಾಶ್ವತವಾದ ಮುಕ್ತಿಯು ಲಭಿಸಲಾರದು. ಶಿವರಹಸ್ಯವೆಂಬ ಈ ಅಮೃತವು ಕೇವಲ ಹಿತಕಾರಿಯಲ್ಲದೆ ಸ್ಥಿರಮುಕ್ತಿಯನ್ನೂ ಒದಗಿಸುವುದು. ॥೫-೬॥

ಇದನ್ನು ಕೇಳಲು ಬ್ರಾಹ್ಮಣರಲ್ಲಿ ನೀನೇ ಮುಖ್ಯಪಾತ್ರನು. ನಿನ್ನ ಕಿವಿಗಳಿಗೆ ಇದು ಆನಂದವನ್ನುಂಟುಮಾಡುವಂತೆ, ಇಲ್ಲಿ ನೆರೆದಿರುವ, ಗಣನಾಯಕರು, ವಿಪ್ರ ಶ್ರೇಷ್ಠರು ಇವರಿಗೆಲ್ಲಾ ಈ ಶಿವರಹಸ್ಯವು ಆನಂದಪ್ರದವಾಗಿದೆ. ಈ ಎಂಟನೆಯ ಅಂಶದಲ್ಲಿ ಸಾಕ್ಷಾನ್ಮಹಾದೇವನೇ ಪಾರ್ವತಿಗೆ ತನ್ನ ಅತಿಶಯವಾದ ಮಹಿಮೆಯನ್ನು ವರ್ಣಿಸಿರುವನು. ॥೭-೮॥

ಜೈಗೀಷವ್ಯನೇ, ಈ ಭೀಮಾಂಶವೆಂಬ ಹೆಸರಿನ ಎಂಟನೆಯ ಅಂಶದ ವಿಷಯವನ್ನು ಮಹಾದೇವನೇ ತನ್ನ ಅಘೋರನಾಮಕವಾದ ವದನದಿಂದ

ಶೃಣು ಕರ್ಣಸುಧಾಖ್ಯಾನಂ ಸಹೈಭಿರ್ಮುನಿಪುಂಗವೈಃ ।
ಚರಿತ್ರಂ ತತ್ತ್ರಿನೇತ್ರಸ್ಯ ಪವಿತ್ರಂ ಪಾಪನಾಶನಂ ॥೧೦॥

ವಿಚಿತ್ರಪುಣ್ಯದಂ ಸ್ವರ್ಗ್ಯಂ ಸ್ಮರಣಾದಸ್ಯ ಸತ್ತಮ ।
ಶೃಣ್ವತಾಂ ಶ್ರವಣೈಸ್ತೂರ್ಣಂ ಮುಕ್ತಿರೇವ ಭವಿಷ್ಯತಿ ॥೧೧॥

ವಿಸ್ತೀರ್ಣಃ ಸ ತು ಸಂಸಾರಾರ್ಣವೋದ್ಭವಕೃಪಾರಸೈಃ ।
ಭವಿಷ್ಯತ್ಯೇವ ಸಹಸಾ ಭೀಮಪಾದಾಂಬುಜಾಶ್ರಯಾತ್ ॥೧೨॥

ಯೋ ಮಹೇಶಕಥಾಸಿಂಧುತರಂಗಾಪ್ಲಾವಿಮಾನಸಃ ।
ಸ್ವಮನಃಪದ್ಮಸದ್ಮೋತ್ಥಸಂಫುಲ್ಲಾನಂದಮೇದುರಃ ॥೧೩॥

ಭವೇಜ್ಜನ್ಮಸಹಸ್ರೇಷು ಕಶ್ಚಿಚ್ಛಾಂಭವಸತ್ತಮಃ ।
ಭೂಶೋ ಭವಾನೀರಮಣಪದಧ್ಯಾನಹತಾಶುಭಃ ॥೧೪॥

---

ಪಾರ್ವತಿಗೆ ಸಂತೋಷವಾಗುವಂತೆ ತಿಳಿಯಪಡಿಸಿರುವನು. ಅಂತಹ ಪವಿತ್ರವೂ ಪಾಪನಾಶಕವೂ ಆದ ಶಿವಕಥಾಮೃತವನ್ನು ಈಗ ನಿನಗೆ ತಿಳಿಯಪಡಿಸುವೆನು. ಆದರದಿಂದ ಕೇಳುವವನಾಗು. ॥೯-೧೦॥

ಈ ಶಿವರಹಸ್ಯವೆಂಬ ಅಮೃತವು ಕೇವಲ ಸ್ಮರಣೆಯಿಂದಲೇ ಅತಿಶಯವಾದ ಪುಣ್ಯವನ್ನು ಕೊಡುವುದು. ಇದನ್ನು ಕೇಳುವವರಿಗಂತೂ ಶೀಘ್ರವಾಗಿಯೇ ಮುಕ್ತಿ ದೊರೆಯುವುದು. ಇದನ್ನು ಭಕ್ತಿಯಿಂದ ಶ್ರವಣಮಾಡುವವರಿಗೆ ಶಿವಪಾದದಲ್ಲಿ ಭಕ್ತಿಯುದ್ಭವಿಸಿ, ಒಡನೆಯೇ ಅವರು ಶಿವಕೃಪಾಬಲದಿಂದ ಮುಕ್ತಿಸಾಮ್ರಾಜ್ಯವನ್ನೈದುವರು. ॥೧೧-೧೨॥

ಯಾರು ಮಹಾದೇವನ ಕಥಾತರಂಗಗಳಲ್ಲಿ ತಮ್ಮ ಸ್ಥಿರಮನಸ್ಸನ್ನಿಡುವರೋ, ಯಾರು ತನ್ಮೂಲಕ ಮನಸ್ಸಿನಲ್ಲಿ ಬ್ರಹ್ಮಾನಂದಕ್ಕೆ ಎಡೆಕೊಡುವರೋ ಅಂತಹವರು ಸಾವಿರಾರು ಜನ್ಮಗಳಲ್ಲಿ ಶಾಂಭವಶ್ರೇಷ್ಠರಾಗಿಯೇ ಜನಿಸುವರು. ಅಂತಹ ಶಾಂಭವ ಶ್ರೇಷ್ಠನಾಗಿ ಜನಿಸಬೇಕಾದರೂ ಸಹಸ್ರಾರು ಜನ್ಮಗಳನ್ನೆತ್ತಿರಬೇಕು. ಆಗ ಅವನು ಭವಾನೀರಮಣನೆನಿಸಿದ ಮಹಾದೇವನ ಪಾದಪದ್ಮಧ್ಯಾನದಿಂದ ಸಕಲ ಪಾಪರಾಶಿಗಳನ್ನೂ ಕಳೆದುಕೊಳ್ಳುವನು. ॥೧೪॥

ಭವತ್ಯತ್ಯಂತಭಾಗ್ಯಾಯ ಭವನಾಶಾಯ ಕೇವಲಂ ।
ಭುಕ್ತಿಮುಕ್ತಿಪ್ರದಂ ಪುಂಸಾಂ ಏತಸ್ಯ ಶ್ರವಣಂ ಸದಾ ॥೧೫॥

ಯೋಂಽಶಸ್ಯಾಧ್ಯಾಯಪಾದಂ ವಾ ಶ್ಲೋಕಾರ್ಧಂ ಶೃಣುಯಾದ್ಯದಿ ।
ಸ ಏವ ಶಾಂಭವೋ ಲೋಕೇ ಸದಾ ಶರ್ವಪದಾಶ್ರಯಃ ॥೧೬॥

ಇದಮೇವ ಪರಂ ಶ್ರೇಯೋ ಮಂಗಳಾನಾಂ ಚ ಮಂಗಳಂ ।
ಮಂಗಳಾಪತಿಪಾದಾಬ್ಜಭಕ್ತಿದಂ ಮುಕ್ತಿಸೇತುದಂ ॥೧೭॥

ಅಮಂಗಲಹರಂ ಪುಂಸಾಂ ಪುಮರ್ಥದಮನುತ್ತಮಂ ।
ಇದಂ ಶಿವರಹಸ್ಯಾಖ್ಯಂ ಶಶಿಶೇಖರಭಾಷಿತಂ ॥೧೮॥

ದೇವ್ಯೈ ದೇವೇನ ಕಥಿತಮುಷ್ಣಮೂರ್ತಿಪ್ರಿಯಂ ಸದಾ ।
ನಾಶಂಭವೇ ಶ್ರಾವ್ಯಮೇತದ್ಭಾವ್ಯೈಃ ಶ್ರಾವ್ಯಮಿದಂ ಮುನೇ ॥೧೯॥

ಅಶಾಂಭವೇ ವದನ್ ವಿಪ್ರೋ ಶಿವದ್ರೋಹಮವಾಪ್ನುಯಾತ್ ।
ಪುರಾ ಚಿತ್ರರಥೋ ನಾಮ ಗಂಧರ್ವಾಧಿಪತಿಃ ಕಿಲ ॥೨೦॥

---

ಈ ಶಿವರಹಸ್ಯದ ವಿಷಯಗಳು ಮಾನವನ ಭಾಗ್ಯವೃದ್ಧಿಗೂ, ಸಂಸಾರ ದುಃಖನಾಶಕ್ಕೂ ಕಾರಣವಾಗುವುವು. ಮಾನವರಿಗೆ ಭುಕ್ತಿ ಮತ್ತು ಮುಕ್ತಿ ಇವುಗಳನ್ನು ಒದಗಿಸಬಲ್ಲುದು. ಯಾರು ಭಕ್ತಿಯಿಂದ ಈ ಅಂಶದ ಒಂದು ಶ್ಲೋಕವನ್ನಾಗಲಿ ಅಥವಾ ಅರ್ಧ, ಕಾಲುಭಾಗದ ಪದ್ಯವನ್ನಾಗಲಿ ಭಕ್ತಿಯಿಂದ ಕೇಳುವರೋ ಅಂತಹವರಿಗೆ ಶಿವಪಾದಾನುಗ್ರಹವು ದೊರೆತು, ಕೊನೆಗೆ ಆತನು ಶಾಂಭವನೆನಿಸಿಕೊಳ್ಳುವನು. ॥೧೫-೧೬॥

ಈ ಶಿವರಹಸ್ಯವು ಪರಮಶ್ರೇಯಸ್ಕರವಾದುದು. ಸರ್ವಮಂಗಳಪ್ರದವಾದುದು. ಮಂಗಳಾಪತಿಯಾದ ಪರಶಿವನ ಪಾದಪದ್ಮದಲ್ಲಿ ಭಕ್ತಿಯನ್ನು ಹೆಚ್ಚಿಸತಕ್ಕುದು. ಅಲ್ಲದೆ ಭಕ್ತರಿಗೆ ಆಗಾಗ ಒದಗುವ ವಿಪತ್ತುಗಳನ್ನು ಪರಿಹರಿಸಿ, ಮುಕ್ತಿ ಪ್ರಾಪ್ತಿಗೆ ಸೇತುವೆಯಂತಾಗುವುದು. ಇದು ಪೂಜ್ಯನಾದ ಚಂದ್ರಶೇಖರನ ಮಾತೇ ಅಲ್ಲವೆ! ॥೧೭-೧೮॥

ಪರಶಿವನು, ತಾನೇ ಪತ್ನಿಯಾದ ಪಾರ್ವತಿಗೆ ವಿವರಿಸಿ ಹೇಳಿರುವುದರಿಂದ ಇದು ಪರಮೇಶ್ವರನಿಗೆ ಅತ್ಯಂತ ಪ್ರಿಯವಾದುದು. ಆದ್ದರಿಂದ ಇದನ್ನು ಈಶ್ವರ

ವೀರ್ಯವಾನ್ ಬಲಸಂಪನ್ನಃ ಸದಾ ಸ್ತ್ರೀಜನವತ್ಸಲಃ ।
ತರುಣೋ ರೂಪಸಂಪನ್ನೋ ಗಾನನೃತ್ತವಿಶಾರದಃ ॥೨೧॥

ಪುಷ್ಪಕೇನ ಸದಾ ವಿಪ್ರ ಸ ಪಕ್ಷೇಣ ಮುದಾ ಸದಾ ।
ಪರ್ಯಟನ್ ಪೃಥಿವೀಂ ಚೈವ ಸುರಲೋಕೇಷು ಸತ್ತಮಃ ॥೨೨॥

ಸ ಗಂಧರ್ವಕುಲಶ್ರೇಷ್ಠೋ ದದರ್ಶಾಶ್ರಮಮುತ್ತಮಂ ।
ಮುಂಜಪೃಷ್ಠೇ ಸದಾ ರಮ್ಯಂ ಫಲಪುಷ್ಪದ್ರುಮಾಕುಲಂ ॥೨೩॥

ಲತಾವಿತಾನಬಹುಲಂ ಮೃಗಪಕ್ಷಿಗಣಾಕುಲಂ ।
ಕೌಂಡಿನ್ಯಾಮ ಮುನಿಸ್ತತ್ರ ಉವಾಸ ಶಿವಭಾವನಃ ॥೨೪॥

ಭಸ್ಮರುದ್ರಾಕ್ಷಸಂಪನ್ನ ಸ್ತ್ರಿಪುಂಡ್ರೋಜ್ಜ್ವಲಫಾಲಕಃ ।
ಧ್ಯಾನಾಕ್ಷಧ್ಯಾನನಿರತಃ ಶರ್ವಾರ್ಚನಪರಾಯಣಃ ॥೨೫॥

---

ಭಕ್ತರಲ್ಲದವರಿಗೆ ಹೇಳಬಾರದು. ಒಂದುವೇಳೆ ಅನಧಿಕಾರಿಗೆ ಇದನ್ನು ತಿಳಿಸಿದರೆ, ಆಗ ಶಿವದ್ರೋಹವೆಸಗಿದಂತಾಗುವುದು. ಇದಕ್ಕೆ ನಿದರ್ಶನವಾಗಿ ಒಂದು ಇತಿಹಾಸ ವುಂಟು. ಹಿಂದೆ ಚಿತ್ರರಥನೆಂಬ ಗಂಧರ್ವರಾಜನೊಬ್ಬನಿದ್ದನು. ॥೨೦॥

ಆತನು ಮಹಾಬಲಿಷ್ಠನಾಗಿಯೂ, ಸ್ತ್ರೀಜನರಲ್ಲಿ ವಿಶೇಷಾಸಕ್ತಿಯುಳ್ಳವನಾಗಿಯೂ, ತಾರುಣ್ಯ, ಸೌಂದರ್ಯ ಇವುಗಳಿಂದ ಕೂಡಿ, ಗಾನ, ನಾಟ್ಯ ಇವುಗಳಲ್ಲಿ ನಿರತನಾಗಿಯೂ, ಸದಾ ಪುಷ್ಪಕವಿಮಾನದಲ್ಲಿ ತನ್ನವರೊಡನೆ ಕುಳಿತು, ಸಮಸ್ತ ಪ್ರಪಂಚವನ್ನೇ ಸುತ್ತುತ್ತ ಕಾಲಕಳೆಯುತ್ತಿದ್ದನು. ॥೨೧-೨೨॥

ಅವನು ಒಂದುಸಾರಿ ಮುಂಜಾದ್ರಿಯ ತಪ್ಪಲುಭಾಗದಲ್ಲಿ ಹೂವು ಹಣ್ಣುಗಳಿಂದ ಸುಂದರವಾಗಿರುವ ವೃಕ್ಷಗಳಿಂದಲೂ, ಲತಾಮಂಟಪಗಳಿಂದಲೂ, ಮೃಗ ಪಕ್ಷಿಗಳ ಗುಂಪಿನಿಂದಲೂ, ರಂಜಿತವಾಗಿರುವ ಕೌಂಡಿಮಹರ್ಷಿಯ ಆಶ್ರಮಕ್ಕೆ ಹೋದನು. ಆಗ ಋಷಿಯಾದರೋ ಅಲ್ಲಿ ಸದಾ ಶಿವಪೂಜಾತತ್ಪರನಾಗಿ ಕಾಲ ಕಳೆಯುತ್ತಿದ್ದನು. ॥೨೩-೨೪॥

ಆತನು ಸದಾ ಭಸ್ಮರುದ್ರಾಕ್ಷಿಗಳಿಂದ ಅಲಂಕೃತನಾಗಿ, ಭಸ್ಮತ್ರಿಪುಂಡ್ರವನ್ನು ವಿಶಾಲವಾದ ಹಣೆಗಿಟ್ಟು, ಶಿವಧ್ಯಾನ, ಶಿವಾರ್ಚನೆ ಇವುಗಳನ್ನು ತಪ್ಪದೆ ನೆರವೇರಿ ಸುತ್ತಿದ್ದನು. ಅವನ ಅಕ್ಕಪಕ್ಕದಲ್ಲಿ ಸದಾ ಅವನಂತೆಯೇ ಶಿವಧ್ಯಾನತತ್ಪರರಾದ

ತಾದೃಶೈರೇವ ಮುನಿಭಿರಾವೃತೋ ಹಾರಸತ್ತಮೈಃ ।
ತಸ್ಯಾಸೀದ್ರೂಪಸಂಪನ್ನಾ ಕನ್ಯಾ ಕಮಲಲೋಚನಾ ॥೨೬॥

ರೂಪಯೌವನಸಂಪನ್ನಾ ಸದಾ ಸೌದಾಮಿನೀವ ಸಾ ।
ತಾಂ ದೃಷ್ಟ್ವಾ ರೂಪಸಂಪನ್ನಾಂ ಚಕಮೇ ಕಾಮಮೋಹಿತಃ ॥೨೭॥

ಪಿತುರ್ಲಿಂಗಾರ್ಚನಾರ್ಥಾಯ ಪುಷ್ಪಾಪಚಯತತ್ಪರಾಂ ।
ವನವಾಟೀಷು ರಮ್ಯಾಸು ರಹೋವಾಚೋರುವಿಕ್ರಮಃ ॥೨೮॥

॥ ಗಂಧರ್ವ ಉವಾಚ ॥

ಅಯಿ ರಂಭೋರು ಕಾಸಿ ತ್ವಂ ಕಸ್ಯ ಕನ್ಯಾ ವದಸ್ವ ಮಾಂ ।
ತವಾದ್ಯ ಸಂಗಮಂ ಯಾಚೇ ಫುಲ್ಲಾಸು ವನರಾಜಿಷು ॥೨೯॥

ಕುಸುಮೇಷುಶರಾರ್ತಂ ಮಾಂ ಪರಿತ್ರಾತುಮಿಹಾರ್ಹಸಿ ।
ಇತ್ಯುಕ್ತ್ವಾತ್ತವಚಃಶ್ರುತ್ವಾ ಗಂಧರ್ವಸ್ಯ ದ್ವಿಜಾತ್ಮಜಾ ॥೩೦॥

ತಮಾಹ ನಮ್ರವದನಾ ಭೀತಾ ಚಾಲೋಕಯದ್ದಿಶಃ ॥೩೧॥

---

ಋಷಿಗಳಿದ್ದರು. ಅಂತಹ ಹೌಂಡಮಹರ್ಷಿಗೆ ರೂಪಯೌವನಸಂಪನ್ನಳಾಗಿ, ವಿಶಾಲವಾದ ಕಣ್ಣುಗಳುಳ್ಳ ಒಬ್ಬಳು ಮಗಳಿದ್ದಳು. ॥೨೫-೨೬॥

ಆಕೆಯು ಸದಾ ಮಿಂಚಿನಂತೆ ರೂಪಯೌವನಗಳಿಂದ ಜನರ ಮನಸ್ಸನ್ನು ಆಕರ್ಷಿಸುತ್ತಿದ್ದಳು. ಒಂದು ಸಾರಿ ಆ ಮುನಿಕನ್ಯೆಯು ತಂದೆಯ ಶಿವಾರಾಧನೆಗಾಗಿ ರಮ್ಯವಾದ ಉದ್ಯಾನವನದಲ್ಲಿ ಹೂವು ಕೊಯ್ಯುತ್ತಿರುವಾಗ, ಅವಳನ್ನು ನೋಡಿ ಈ ಗಂಧರ್ವರಾಜನು ಕಾಮಮೋಹಿತನಾಗಿ ಗುಟ್ಟಾಗಿ ಹೋಗಿ ಅವಳೊಡನೆ ಹೀಗೆ ಮಾತನಾಡಿದನು. ॥೨೭-೨೮॥

" ಎಲೈ, ಬಾಳೆಯಕಂಬದಂತೆ ತೊಡೆಯುಳ್ಳ ಕನ್ಯೆಯೇ, ನಿನ್ನ ಜೊತೆಯಲ್ಲಿ ಈ ಮನೋಹರವಾದ ಉದ್ಯಾನದಲ್ಲಿ ಸಂಗಮಸುಖವನ್ನು ಪಡೆಯಲು ಅಪೇಕ್ಷಿಸುವೆನು. ನಾನು ಮನ್ಮಥನ ಬಾಣಗಳಿಂದ ದುಃಖಿತನಾಗಿದ್ದೇನೆ. ದಯೆಯಿಂದ ನನ್ನ ಪ್ರಾರ್ಥನೆಯನ್ನು ಸಲ್ಲಿಸಿ ನನ್ನನ್ನು ಕಾಪಾಡು." ಎಂದು ಕೇಳಿಕೊಂಡ ಆ ಗಂಧರ್ವನ ದುರಹಂಕಾರದ ಮಾತುಗಳನ್ನು ಕೇಳಿ, ಆಕೆಯು ಭಯವಿಹ್ವಲಚಿತ್ತಳಾಗಿ ಸಕಲ ದಿಕ್ಕುಗಳನ್ನೂ ನೋಡಲಾರಂಭಿಸಿದಳು. ॥೨೯-೩೦-೩೧॥

‖ ಕನ್ಯೋವಾಚ ‖

ಹೌಂಡೇರಹಂ ಶಾಂಭವಸ್ಯ ಕನ್ಯಾ ಗಂಧರ್ವಸತ್ತಮ ।
ತಮೇವ ಶರಣಂ ಗಚ್ಛ ತದಾದಿಷ್ಟಾ ತ್ವಯಾ ಸಹ ‖೩೨‖

ಸಮಂತ್ರದತ್ತಾ ಕನ್ಯಾಹಂ ತ್ವಾಂ ವರಂ ವರಯೇ ಪತಿಂ ।
ಇತ್ಯುಕ್ತಂ ಸ ತದಾ ಶ್ರುತ್ವಾ ತಾಮಾಕರ್ಷಿತುಮಾಗತಃ ‖೩೩‖

ಮೂಢೋ ದೃಢಂ ಶರೈರ್ವಿದ್ಧೋ ಮಾರಸ್ಯ ನಿತರಾಂ ಮುನೇ ।
ಸಾ ಭೀತಾ ಪ್ರಾದ್ರವದ್ವೇಗಾತ್ ತ್ಯಕ್ತ್ವಾ ಪುಷ್ಪಾಣಿ ಕನ್ಯಕಾ ‖೩೪‖

ಪಿತರಂ ಸಾಶ್ರುಪೂರ್ಣಾಕ್ಷೀ ಪ್ರಾಹ ಗಂಧರ್ವಚೇಷ್ಟಿತಂ ।
ತದಾ ಸ ಶಾಂಭವೋ ಹೌಂಡಿಃ ಶಶಾಪ ಮುನಿಸತ್ತಮಃ ‖೩೫‖

‖ ಮುನಿರುವಾಚ ‖

ಯಸ್ಮಾನ್ಮತ್ಕನ್ಯಕಾಂ ಪ್ರಾಪ ಪ್ರಾಧರ್ಷೀಃ ಕಾಮಮೋಹಿತಃ ।
ಅಪಸ್ಮಾರಗೃಹೀತಸ್ತ್ವಂ ಭವೇತಿ ಮುನಿರಾಹ ಹಿ ‖೩೬‖

---

ಮತ್ತು ಗಂಧರ್ವರಾಜನೊಡನೆ ಹೀಗೆಂದರು. ರಾಜಶ್ರೇಷ್ಠನೇ, ನಾನು ಹೌಂಡಿಮಹರ್ಷಿಯ ಪುತ್ರಿಯು ಮತ್ತು ಪರಾಧೀನಳು. ನಿನ್ನಲ್ಲಿ ನನಗೆ ಅಪೇಕ್ಷೆಯಿದ್ದರೂ ತಂದೆಯ ಅಪ್ಪಣೆಯಿಲ್ಲದೆ ನಿನ್ನನ್ನು ವರಿಸಲಾರೆ. ಆದ್ದರಿಂದ ನೀನು ನಮ್ಮ ತಂದೆಯನ್ನು ಪ್ರಾರ್ಥಿಸಿಕೊಂಡರೆ, ಮಹರ್ಷಿಯು ನನ್ನನ್ನು ಮಂತ್ರಪೂರ್ವಕವಾಗಿ ಧಾರೆಯೆರೆದುಕೊಡುವನು, ಹೀಗೆಂದ ಆ ಕನ್ಯೆಯ ಮಾತನ್ನು ಕೇಳಿ ಗಂಧರ್ವರಾಜನು ಅವಳನ್ನು ಎಳೆದು ಒಯ್ಯಲು ಪ್ರಯತ್ನಿಸಿದನು. ‖೩೨-೩೩‖

ಮದನಬಾಣಪೀಡಿತನಾದ ಆತನು ಬಲಾತ್ಕಾರದಿಂದ ಆಕೆಯನ್ನು ಎಳೆಯಲು ಯತ್ನಿಸಿದಾಗ ಆ ಮುನಿಕನ್ಯೆಯು ಹೆದರಿ ಹೂವು ಕೊಯ್ಯುವುದನ್ನು ಬಿಟ್ಟು ಭಯದಿಂದ ಅಳುತ್ತಾ ತಂದೆಯ ಸಮೀಪಕ್ಕೆ ಓಡಿಹೋಗಿ, ಗಂಧರ್ವನ ದುಶ್ಚೇಷ್ಟೆಯನ್ನೆಲ್ಲಾ ವಿವರಿಸಿದಳು. ಆಗ ಶಾಂಭವನೆನಿಸಿದ ಹೌಂಡಿಯು ಅವನಿಗೆ ಈ ರೀತಿ ಶಪಿಸಿದನು. ‖೩೪-೩೫‖

"ಎಲೈ ಪಾಪಿಯೇ, ನೀನು ನನ್ನ ಮಗಳನ್ನು ಕಾಮಮೋಹಿತನಾಗಿ ಪೀಡಿಸಲೆತ್ನಿಸಿದೆಯಾದ್ದರಿಂದ ಅಪಸ್ಮಾರರೋಗದಿಂದ ಪೀಡಿತನಾಗು." ಎಂದು ಶಾಪ

ಸ ಗಂಧರ್ವೋ ಮುನೇಶ್ಶಾಪಾನ್ಮದೋನ್ಮತ್ತೋ ವಿಚೇತನಃ ।
ಬಭ್ರಾಮ ಸ ಪಿಶಾಚಾರ್ತೋ ವದನ್ನುನ್ಮತ್ತವತ್ತದಾ ॥೩೭॥

ಸಖಾ ತಸ್ಯಾಭವದ್ವಿಪ್ರ ತುಂಬುರುಶ್ಶಿವವಲ್ಲಭಃ ।
ಕೈಲಾಸೇ ಶಂಕರಂ ನತ್ವಾ ತಸ್ಯ ನಿಷ್ಕೃತಿಮಾಹ ವೈ ॥೩೮॥

॥ ತುಂಬುರುರುವಾಚ ॥

ಶಂಭೋ ವಿಶ್ವೇಶ ವಿಶ್ವಾತ್ಮನ್ ಸಖಾ ಚಿತ್ರರಥೋ ಮಮ ।
ತೇನ ಶಾಂಭವವರ್ಯಸ್ಯ ಕನ್ಯಾಪಹೃತಚೇತಸಾ ॥೩೯॥

ಅನುಷ್ಠಿತಮಿದಂ ಶಂಭೋ ತಮುದ್ಧರ ಮಹೇಶ್ವರ ।
ಭಗವಾನಪಿ ದೇವೇಶಸ್ತುಂಬುರುಂ ಪ್ರಾಹ ಹರ್ಷಿತಃ ॥೪೦॥

॥ ಈಶ್ವರ ಉವಾಚ ॥

ಮದ್ದ್ರೋಹಶಾಂಭವದ್ರೋಹೌ ಉಭೌ ತುಲ್ಯೌ ಹಿ ತುಂಬುರೋ ।
ತಸ್ಮಾತ್ತ್ವದ್ಭಾವಿತಃ ಪ್ರೀತ್ಯಾ ತದ್ಗಂಧರ್ವವಿಮೋಚನೇ ॥೪೧॥

---

ಕೊಡಲು, ತತ್ಫಲವಾಗಿ ಆ ಗಂಧರ್ವನು ಹುಚ್ಚನಂತಾಗಿ ಪಿಶಾಚಿಯಿಂದ ಆವೃತನಾದವನಂತೆ ಸ್ವೇಚ್ಛೆಯಾಗಿ ಅಲೆದಾಡಲಾರಂಭಿಸಿದನು. ॥೩೬-೩೭॥

ಇದನ್ನು ನೋಡಿ ಗಂಧರ್ವರಾಜನ ಸ್ನೇಹಿತನಾದ ತುಂಬುರನೊಬ್ಬನು ಇವನಿಗೆ ಶಾಪವಿಮೋಚನೆ ಮಾಡಿಸಲು ಯತ್ನಿಸಿ, ಕೈಲಾಸದಲ್ಲಿ ನಿಂತು ಪರಶಿವನನ್ನು ಈ ರೀತಿ ಪ್ರಾರ್ಥಿಸಿದನು. "ವಿಶ್ವೇಶ್ವರನೇ, ಶಂಕರನೇ, ಪ್ರಪಂಚಾತ್ಮಕನೇ, ನನ್ನ ಸ್ನೇಹಿತನಾದ ಚಿತ್ರರಥನೆಂಬ ಗಂಧರ್ವನು, ಶಾಂಭವರಲ್ಲಿ ಶ್ರೇಷ್ಠನಾದ ಹೌಂಡ ಮಹರ್ಷಿಯ ಕನ್ಯೆಯನ್ನು ಬಯಸಿ, ಶಾಪಕ್ಕೊಳಗಾಗಿರುವನು. ಈಗ ಅವನನ್ನು ಉದ್ಧರಿಸಿ ಕಾಪಾಡು ಸ್ವಾಮಿ" ಈ ರೀತಿ ಬಹಳವಾಗಿ ಪ್ರಾರ್ಥಿಸಲು ಆಗ ಮಹಾದೇವನು ತುಂಬುರನನ್ನು ಕುರಿತು ಹೀಗೆಂದನು. ॥೩೮-೪೦॥

ಎಲೈ ತುಂಬುರನೇ, ನನಗೆ ದ್ರೋಹ ಬಯಸುವುದೂ, ನನ್ನ ಭಕ್ತರಿಗೆ ದ್ರೋಹ ಬಯಸುವುದೂ, ಎರಡೂ ಒಂದೇ. ಆದರೂ ನೀನು ಇಷ್ಟು ಭಕ್ತಿಯಿಂದ ಕೇಳಿಕೊಳ್ಳುವುದರಿಂದ ಆ ಗಂಧರ್ವನು ಶಾಪದಿಂದ ಮುಕ್ತನಾಗುವ ಒಂದು ಉಪಾ

ಉಪಾಯಮೇಕಂ ವಕ್ಷ್ಯಾಮಿ ಮನ್ನಾಮ್ನಾಂ ಸ್ಮೃತಿಮಾತ್ರತಃ ।
ಅಪಸ್ಮಾರಗ್ರಹಾನ್ಮುಕ್ತಃ ಸ ಭವಿಷ್ಯತಿ ತುಂಬುರೋ ॥೪೨॥

ಇತ್ಥಂ ಶಂಭೋರ್ವಚಶ್ಶ್ರುತ್ವಾ ಸ ಪ್ರಣಮ್ಯ ಮಹೇಶ್ವರಂ ।
ಯಯೌ ಚಿತ್ರರಥೋ ಯತ್ರ ಸ್ಥಿತೋಽಪಸ್ಮಾರಸಂಯುತಃ ॥೪೩॥

ಉನ್ಮತ್ತಭೂತೋ ವಿಕೃತಃ ಕರಾಲೋನ್ನತಕೇಶವಾನ್ ।
ತಂ ಬಧ್ವಾ ವಲ್ಲಕೀಹಸ್ತೋ ಜಗೌ ಕರ್ಣರಸಾಯನಂ ॥೪೪॥

॥ ತುಂಬುರುರುವಾಚ ॥

ಶರ್ವ ಗರ್ವಪರಿಪೂರಿತಕಾಮ
ಸ್ತೋಮಬಾಣವಿನಿವಾರಕ ಶಂಭೋ ।
ತ್ವತ್ಪದಾಬ್ಜಕಲನೇನ ನ ಕಾಲಃ
ಕಾಮಕಾಯದಮನಾವ್ಯಯಮೂರ್ತೇ ॥೪೫॥

---

ಯವನ್ನು ಹೇಳಿಕೊಡುವೆನು. ಆ ಗಂಧರ್ವನು ನನ್ನ ನಾಮಸ್ಮರಣೆಮಾಡಿದರೆ ಸಾಕು. ಒಡನೆಯೇ ಆತನು ಅಪಸ್ಮಾರರೂಪವಾದ ಗ್ರಹದಿಂದ ಬಿಡುಗಡೆ ಹೊಂದುವನು. ಇದು ನಿಜ. ॥೪೧-೪೨॥

ಹೀಗೆಂದ ಪರಶಿವನ ಮಾತುಗಳನ್ನು ಕೇಳಿ ತುಂಬುರನು ಮಹಾದೇವನಿಗೆ ವಂದಿಸಿ, ಚಿತ್ರರಥನಿದ್ದ ಸ್ಥಳಕ್ಕೆ ಹೋದನು. ಅಲ್ಲಿ ಚಿತ್ರರಥನು ಅಪಸ್ಮಾರಗ್ರಹ ಯುತನಾಗಿ, ಹುಚ್ಚನಂತೆ ತಲೆಯನ್ನು ಕೆದರಿಕೊಂಡು, ಓಡಾಡುತ್ತಿದ್ದನು. ಅವನನ್ನು ಒಡನೆಯೇ ಒಂದುಕಡೆ ಕಟ್ಟಿಹಾಕಿ, ತಾನು ಕೈಯಿಂದ ವೀಣೆಯನ್ನು ಹಿಡಿದು, ಈ ರೀತಿ ಅವನ ಕಿವಿಗೆ ಬೀಳುವಂತೆ ಶಿವನಾಮಭಜನೆ ಮಾಡಲಾರಂಭಿದನು. ॥೪೩-೪೪॥

ಸುಖಪ್ರದನಾದ ಮಹಾದೇವನೇ, ಮಹಾಗರ್ವದಿಂದ ಮೆರೆಯುತ್ತಿದ್ದ ಮನ್ಮಥನನ್ನು ನಾಶಮಾಡಿದ ನೀನು, ನಾಶರಹಿತನಾಗಿಯೂ, ಭಕ್ತರ ಸಕಲೇಷ್ಟಾರ್ಥಗಳನ್ನು ನೆರವೇರಿಸುವವನಾಗಿಯೂ ಇರುವೆಯಲ್ಲವೆ? ನಿನ್ನ ಪಾದಧ್ಯಾನದಿಂದ ಭಕ್ತರಿಗೆ ಯಮಬಾಧೆಯು ಸಂಪೂರ್ಣವಾಗಿ ತಪ್ಪಿಹೋಗುವುದಲ್ಲವೆ ! ॥೪೫॥

ಶ್ರೀಮತ್ತ್ರಿಯಂಬಕ ಸದಾಶಿವ ವೇದವೇದ್ಯ
ವೈದ್ಯೋತ್ತಮ ಪ್ರಮಥನಾಥ ಸುರಾಸುರೇಡ್ಯ ।
ವಿಶ್ವನಾಥ ಮಮ ನಾಥ ಪಾಹ್ಯಮುಂ
ಪಾಪತಾಪದವದಗ್ಧಮೀಶ ಶಂಭೋ ॥೪೬॥

ಸ್ವರ್ಣವರ್ಣಕೃತನೇತ್ರಕರ್ಣಜಾ
ಪಾರಹಾರ ಗಗನಾಂತರಸಂಸ್ಥ ।
ಊರ್ಣನಾಭಿರಿವ ತದ್ಗತಮೋತ
ಜ್ಞಾಗ್ರತಂ ವಿಸೃಜಸೇ ಶಿವ ತೂರ್ಣಂ ॥೪೭॥

ಶಂಕುಕರ್ಣಭರಿತಸ್ತುತಿಜಾಲೈ
ರ್ಭದ್ರಕರ್ಣಕೃತ ಶಂಖನಿನಾದೈಃ ।
ನಂದಿವಾದ್ಯಭರತಾನುಗತಾಲೈ
ರ್ನೃತ್ತರಂಗಮಪಿ ತೇ ಹೃದಯಾಂತಃ ॥೪೮॥

---

ಸಂಪದ್ಯುಕ್ತನಾಗಿಯೂ, ತ್ರಿನೇತ್ರಧಾರಿಯಾಗಿಯೂ ಇರುವ ಪರಶಿವನೇ, ವೇದಗಳಿಂದ ಪ್ರತಿಪಾದಿತವಾದ ಸ್ವರೂಪವುಳ್ಳವನೇ, ಪ್ರಮಥಗಣಗಳಿಗೆ ಒಡೆಯನೆನಿಸಿದವನೇ, ದೇವಾಸುರರಿಂದ ಪೂಜಿತನಾದವನೇ, ವಿಶ್ವೇಶ್ವರನೇ, ಪಾಪರಾಶಿಯೆಂಬ ಕಾಡನ್ನು ಧ್ವಂಸಮಾಡುವ ಶಂಭುವೇ, ನನ್ನನ್ನು ಕಾಪಾಡು. ॥೪೬॥

ಸುವರ್ಣದ ಕಾಂತಿಯಿಂದ ರಂಜಿಸುವ ಸರ್ಪವನ್ನೇ (ನೇತ್ರವನ್ನೇ ಕಿವಿಯನ್ನಾಗಿ ಉಳ್ಳದುದು ನೇತ್ರಕರ್ಣ-ಹಾವು) ಆಭರಣವನ್ನಾಗಿ ಉಳ್ಳ ಮಹಾದೇವನೇ, ನೀನು ಗಗನಮಧ್ಯದಲ್ಲಿ ಪ್ರಕಾಶಿಸುವೆ. ಜೇಡರಹುಳುವು ತನ್ನ ಲಾಲಾಜಲದಿಂದಲೇ ಗೂಡನ್ನು ಕಟ್ಟಿ, ತಾನು ಅದರಲ್ಲಿಯೇ ಅಡಗಿ, ಅದನ್ನೇ ತನ್ನಲ್ಲಿ ಅಂತರ್ಭಾವಗೊಳಿಸುವಂತೆ ಪರಮೇಶ್ವರನೆನಿಸಿದ ನೀನು ಜಗತ್ತನ್ನು ನಿರ್ಮಾಣಮಾಡಿ, ಜಗತ್ತನ್ನು ಪಾಲಿಸಿ, ಕೊನೆಗೆ ಲಯಗೊಳಿಸುವವನೂ ನೀನೇ ಆಗಿರುವೆ. ॥೪೭॥

ಮಹಾದೇವನೇ, ನಿನ್ನ ನಾಟ್ಯರಂಗದಲ್ಲಿ ಶಂಕುಕರ್ಣನು ಸ್ತೋತ್ರಪಾಠಕನಾಗಿಯೂ, ಭದ್ರಕರ್ಣನು ಶಂಖಧ್ವನಿಕೊಡುವವನಾಗಿಯೂ, ನಂದಿಯು ವಾದ್ಯವನ್ನು ತಾಲಲಯಬದ್ಧವನ್ನಾಗಿ ಮಾಡುವವನಾಗಿಯೂ ಇರುವರು. ಇಂತಹ

ಇತ್ಥಂ ಶತ್ಸ್ತುತಿಜಾತೇನ ವೀತಪಾಪೋಽಭವತ್ಕ್ಷಣಾತ್ ।
ಸ ತು ಚಿತ್ರರಥೋ ವಿಪ್ರ ಕ್ಷಣಾದ್ಗಂಧರ್ವರೂಪಧೃಕ್ ॥೪೯॥

ಏವಂ ಕಥಾಪ್ರಭಾವೇನ ನಾಮ್ನಾಂ ಶಂಭೋಃ ಪ್ರಭಾವತಃ ।
ನಂದಿ ಭೃಂಗಾದಯೋಽಪ್ಯೇವಂ ಸಮಾರಾಧ್ಯ ಮಹೇಶ್ವರಂ ॥೫೦॥

ಗಣೇಶತ್ವಂ ಚ ಸಂಪ್ರಾಪ್ಯ ಮೋದಂತಿ ಶಿವಸನ್ನಿಧೌ ।
ತಮಾಹ ವಿನಯಾನಮ್ರಂ ನಂದಿಕೇಶಂ ಮಹೇಶ್ವರಃ ॥೫೧॥

॥ ಈಶ್ವರ ಉವಾಚ ॥

ಸ್ಕಂದೋ ವಿಘ್ನಾಧಿಪೋ ವಾ ತವ ಸದೃಶಗುಣಂ ನಾಭಿನಂದಾಮಿ ನಂದಿನ್
ವಿಶ್ವಾನಂದಪ್ರದಸ್ತ್ವಂ ಮಮ ತನಯವರೋ ದೇವಸಂಘೈಕವಂದ್ಯಃ ।
ಗೌರ್ಯಾಶ್ಚಾಪಿ ಪ್ರಿಯಸ್ತ್ವಂ ತವ ಶತಯಜುಷಾ ಸಾರಜಪ್ಯೈಃ ಪ್ರಿಯಂ ಮಾಂ
ವಿದ್ಧಿ ತ್ವಯ್ಯೇವ ರಕ್ತಂ ಗಣವರವಿನುತಂ ಸತ್ಯಮದ್ಯ ಬ್ರುವೇಹಂ ॥೫೨॥

---

ನಾಟ್ಯರಂಗರೂಪವಾದ ನಿಖಿಲಜಗತ್ತನ್ನೇ ನೀನು ಹೃದಯಾಂತರಾಳದಲ್ಲಿ ಅಡಗಿಸಿ ಕೊಂಡಿರುವೆ. ॥೪೮॥

ಈರೀತಿಯಾದ ತುಂಬುರನು ಮಾಡಿದ ಶಿವಸ್ತುತಿಯನ್ನು ಕೇಳಿದೊಡನೆಯೇ ಚಿತ್ರರಥನೆಂಬ ಆ ಉನ್ಮತ್ತಗಂಧರ್ವನು ಶಾಪಮುಕ್ತನಾಗಿ, ಎಂದಿನಂತೆ ಗಂಧರ್ವರೂಪದಿಂದ ಪ್ರಕಾಶಿಸಿದನು. ಇದರಂತೆಯೇ ನಂದಿ ಭೃಂಗ್ಯಾದಿ ಸಕಲ ಗಣನಾಯಕರೂ ಮಹೇಶ್ವರನನ್ನು ಆಗಾಗ ಸ್ತುತಿಸಿ ಪ್ರಮಥಗಣಗಳ ಒಡೆತನವನ್ನು ಸಂಪಾದಿಸುವರು. ॥೪೯-೫೦॥

ಮತ್ತು ಶಿವಸನ್ನಿಧಿಯಲ್ಲಿ ಗಾಣಾಪತ್ಯಪದವಿಯಿಂದ ಸುಖಶಾಂತಿಯನ್ನು ಪಡೆದು ಸಂತೋಷದಿಂದಿರುವರು. ಒಂದು ಸಾರಿ ಮಹಾದೇವನು ವಿನಯ ಭಕ್ತಿ ವಿಶ್ವಾಸಗಳಿಂದ ನಮ್ರನಾಗಿದ್ದ ನಂದಿಕೇಶ್ವರನನ್ನು ನೋಡಿ ಹೀಗೆಂದನು. ॥೫೧॥

"ಎಲೈ ನಂದಿಯೇ, ನನ್ನ ಮಕ್ಕಳಾದ ಗುಹಗಣಪರೂ ಸಹ ನಿನ್ನಷ್ಟು ಗುಣಾಢ್ಯರಲ್ಲ. ನಿನ್ನಿಂದ ಈ ಜಗತ್ತೇ ಆನಂದವನ್ನು ಪಡೆಯುತ್ತದೆ. ದೇವತೆಗಳ ಗುಂಪಿನಿಂದಲೂ ಪೂಜಿತನಾದ ನೀನು ನನಗೆ ಪುತ್ರಸದೃಶನಾಗಿರುವೆ. ನೀನು

ಮತ್ಸಾರೂಪ್ಯಧರೋ ವಸಾತ್ರ ಹೃದಯದ್ವಾರೇ ಚ ಕೈಲಾಸಕೇ
ಕುರ್ವನ್ನೇ ಗಣಪುಂಗತಾಮಧಿಗತಃ ಸ್ವರ್ಣಾತ್ತವೇತ್ರಾಗ್ರಧೃಕ್ ।
ವಿಷ್ಣುಬ್ರಹ್ಮಮಹೇಂದ್ರಮುಖ್ಯ ಮಕುಟೇ ನೀರಾಜಿತಾಜ್ಞೋ ಭವಾನ್
ಲೋಕೇಷು ಪ್ರಚರಿಷ್ಯತಿ ಪ್ರತಿಯುಗಂ ತ್ವಂ ಮೇ ಶರೀರಂ ಪರಂ ॥೫೩॥

॥ ನಂದ್ಯುವಾಚ ॥

ಭಸ್ಮಾಭ್ಯಕ್ತತನುರ್ಭವೇ ಭಸಿತಯುಕ್ಪುಂಡ್ರಾಂಕಗಾತ್ರೋ ಭವೇ
ಭಾವೋಕ್ಷಾದಿವಿಭೂಷಿತಃ ಶಿವಮನುವ್ಯಾಹಾರಮಾತ್ರಾದರಃ ।
ರುದ್ರಾಧ್ಯಾಯಜಪಾನುರಕ್ತಹೃದಯೋ ಲಿಂಗಾರ್ಚನಾತ್ಯಾದರೋ
ಭೂಯಾಂ ಜನ್ಮಶತೇಷು ಏಷ ವಿಹಿತಸ್ತ್ವತ್ಪಾದಪದ್ಮೇಂಜಲಿಃ ॥೫೪॥

---

ನನ್ನಂತೆಯೇ ಗೌರೀದೇವಿಗೂ ಪ್ರೀತಿಪಾತ್ರನಾಗಿರುವೆ. ರುದ್ರಾಧ್ಯಾಯದಿಂದ ನನ್ನನ್ನು ಅನೇಕಸಾರಿ ಸ್ತುತಿಸಿ, ಆನಂದಪಡಿಸಿರುವೆ. ನಿನ್ನಲ್ಲಿಯೇ ಅನುರಕ್ತನಾಗಿರುವ ನಾನು ಈಗ ನಿನ್ನನ್ನೇ ಗಣಶ್ರೇಷ್ಠನನ್ನಾಗಿಯೂ ಮಹಾಮಹಿಮನನ್ನಾಗಿಯೂ ತಿಳಿದಿರುವೆನು. ॥೫೧-೫೨॥

ಎಲೈ ನಂದೀಶ್ವರನೇ, ನೀನು ಸದಾ ನನ್ನ ಸಾರೂಪ್ಯವನ್ನು ಧರಿಸಿದವನಾಗಿ ಪ್ರಪಂಚಕ್ಕೆ ಹೃದಯದಂತಿರುವ ಈ ಕೈಲಾಸಪರ್ವತದಲ್ಲಿ ಗಣಶ್ರೇಷ್ಠನೆನಿಸಿಕೊಂಡು ಸದಾ ನಿನ್ನ ಕೈಯ್ಯಲ್ಲಿ ಚಿನ್ನದ ಬೆತ್ತವನ್ನು ಹಿಡಿದು ನನ್ನ ಸಮೀಪದಲ್ಲಿಯೇ ನಿಂತಿರು. ಬ್ರಹ್ಮ ವಿಷ್ಣು ರುದ್ರಾದಿಗಳೆಲ್ಲರೂ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಡೆಸುತ್ತಿರಲಿ. ಪ್ರತಿಯುಗದಲ್ಲಿಯೂ ಪ್ರಪಂಚವು ನಿನ್ನ ಆಜ್ಞೆಯಂತೆಯೇ ಚಲಿಸುತ್ತಿರಲಿ. ನಿಜವಾಗಿಯೂ ನೀನೇ ನನ್ನ ಅಪರಶರೀರವೆನಿಸಿರುವೆ." ಎಂದು ಪರಶಿವನು ನಂದೀಶ್ವರನನ್ನು ಮನಸಾರ ಹೊಗಳಿದನು. ॥೫೩॥

ಮಹಾದೇವನೇ, ಸರ್ವದಾ ಭಸ್ಮಲಿಪ್ತನಾಗಿ, ಭಸ್ಮತ್ರಿಪುಂಡ್ರದಿಂದ ಅಲಂಕೃತನಾಗಿ ಸದಾಶಿವನಾದ ನಿನ್ನನ್ನು ರುದ್ರಾಧ್ಯಾಯಗಳಿಂದಲೂ ರುದ್ರಸೂಕ್ತಗಳಿಂದಲೂ, ಶಿವಮಂತ್ರಜಪದಿಂದಲೂ ತೃಪ್ತಿಗೊಳಿಸುತ್ತಾ, ಶಿವಲಿಂಗಾರಾಧನೆಯನ್ನು ನೆರವೇರಿಸುತ್ತಾ ನಿನ್ನ ಪಾದಪದ್ಮಗಳಿಗೆ ವಂದನೆಮಾಡುವ ಭಾಗ್ಯವು ನನಗೆ ಪ್ರತಿಜನ್ಮಗಳಲ್ಲಿಯೂ ದೊರೆಯುತ್ತಿರಲಿ. ಇದೇ ನನ್ನ ಪ್ರಾರ್ಥನೆ. ಎಂದು ನಂದಿಯು ಮತ್ತೆ ಶಂಕರನನ್ನು ಸ್ತುತಿಸಿದನು. ॥೫೪॥

ಇತ್ಥಂ ನಂದೀವಚಃಸುನಂದಿತಹೃದಾ ಸ್ಮೇರಾನನಃ ಶಂಕರಃ
ಪ್ರಾಹಾನಂದಭರೇಣ ವಾಕ್ಯಮಧುನಾ ಸಂವೀಕ್ಷ್ಯಪೂರ್ವೋದಿತಂ ।
ತನ್ಮೂರ್ಧ್ನಿ ಸ್ವಕರಾಂಬುಜಂ ಚ ವಿದಧನ್ನುಚ್ಚೈರ್ವದಂತಂ ಹರಃ
ಸರ್ವೇಷಾಮುಪಶೃಣ್ವತಾಂ ಸುರಗಣೇಂದ್ರಾಣಾಂ ಮುನೀನಾಮಪಿ ॥೫೫॥

ಏವಂ ಪ್ರದಕ್ಷಿಣವಿಧೌ ನಿರತಸ್ಸಭೃಂಗೀ
ಭೃಂಗೋಪಮೋ ರವಿರಿವೋದಯಪರ್ವತೇಂದ್ರಂ ।
ಸ್ತುತ್ವಾ ಚ ತೋಷ್ಯ ಭಗವಂತಮುಮಾಸಹಾಯಂ
ಲೇಭೇ ಗಣೇಂದ್ರಪದವೀಮದವೀಯಮನ್ಯೈಃ ॥೫೬॥

॥ ಸ್ಕಂದ ಉವಾಚ ॥

ಪುಂಸಾಂ ಪುಮರ್ಥದಮನುತ್ತಮಮೀಶಪಾದಂ
ಧ್ಯಾನಾನುರಕ್ತ ಹೃದಯೈಃ ಪರಿಸೇವನೀಯಂ ।
ಮಾಸ್ಯಂ ಚ ವರ್ಯಮಿದಮೇವ ವದಾನ್ಯಧುರ್ಯಂ
ಮಾಧುರ್ಯ ಧೈರ್ಯವಚನೈಃ ಪರಮೇವ ಸಾರಂ ॥೫೭॥

---

ಹಾಗೆ ನಂದೀಶ್ವರನು ಮನಃಪೂರ್ವಕವಾಗಿ ಸ್ತುತಿಸಿದುದನ್ನು ಕೇಳಿ ಪರಶಿವನು ಆನಂದಭರಿತನಾಗಿ ಮುಗುಳ್ನಗೆಯಿಂದ ತನ್ನ ಕೈಯನ್ನು ಅವನ ತಲೆಯ ಮೇಲಿಟ್ಟು, ಸುರಗಣಗಳೂ, ಮುನಿವೃಂದವೂ ಕೇಳುವಂತೆ, ಸಂತೋಷಸೂಚಕವಾಗಿ ಕೆಲವು ಮಾತುಗಳನ್ನು ಹೀಗೆ ಉಪದೇಶರೂಪದಲ್ಲಿ ಹೇಳತೊಡಗಿದನು.॥೫೫॥

ಹೀಗೆ ಭೃಂಗಿಯು ಸೂರ್ಯನು ಸದಾ ಉದಯಾಸ್ತಗಳಿಂದ ಮೇರುಪರ್ವತವನ್ನು ಸುತ್ತುವಂತೆ, ಶಿವನಿಗೆ ನಮಸ್ಕರಿಸುತ್ತಾ, ಶಿವಪಾದಕಮಲದಲ್ಲಿ ದುಂಬಿಯಂತೆ ಮನಸ್ಸನ್ನು ಹಾರಾಡಿಸುತ್ತಾ, ವಿಧವಿಧವಾದ ಸ್ತುತಿವಚನಗಳಿಂದ ಶಿವಮಹಾದೇವರನ್ನು ಮೆಚ್ಚಿಸಿ, ಕೊನೆಗೆ ಇತರರಿಗೆ ಬಹು ದುರ್ಲಭವಾದ ಶಿವಸಾಯುಜ್ಯವನ್ನು ಹೊಂದಿದನು. ॥೫೬॥

ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸುತ್ತಾ ಭಕ್ತರ ಕರ್ತವ್ಯವನ್ನು ಈರೀತಿ ಬೋಧಿಸಿದನು--ಮನುಷ್ಯರಿಗೆ ಧರ್ಮಾದಿ ಪುರುಷಾರ್ಥಗಳನ್ನೂ ಒದಗಿಸತಕ್ಕುದೇ ಈ ಪರಶಿವನ ಪಾದಪದ್ಮಧ್ಯಾನ. ಇದರಿಂದಲೇ ಮಾನವನು ಮೋಕ್ಷಾಂತವಾದ ಸಕಲ ಇಷ್ಟಾರ್ಥಗಳನ್ನೂ ಹೊಂದಬಲ್ಲನು.

ಪುಣ್ಯಂ ಪರಂ ಶಿವರಹಸ್ಯಮಧುಪ್ರಕೃಷ್ಟ
ಮುತ್ಕೃಷ್ಟಭಕ್ತಿಜನಕಂ ಶಿಪಿವಿಷ್ಟಪಾದೇ ।
ಕಷ್ಟಾನಿ ನಾಶಯತಿ ತುಷ್ಟಮಿದಂ ದದಾತಿ
ಪುಷ್ಟಿಂ ಪ್ರಯಚ್ಛತಿ ಸದೈವ ವಿಮುಕ್ತಿಗೃಷ್ಟಿಃ ॥೫೮॥

ಭ್ರಷ್ಟಶ್ರಿಯಾಮಪಿ ಸದೈವ ತನುಪ್ರಕೃಷ್ಟ
ಮುತ್ಕೃಷ್ಟರಾಜ್ಯತನಯಾಧಿಕಸೌಖ್ಯದಾಯೀ ।
ಕಿಂ ಭೋಗಭಾಗ್ಯನಿಕರೈರ್ವರದಂತಿಬೃಂದೈ
ರ್ವಾಜ್ಯುತ್ತಮೈರ್ವರರಥೈರ್ಧನಧಾನ್ಯಗೋಭಿಃ ॥೫೯॥

ಕಿಂ ನಶ್ವರೈರ್ವರಮಹೇಶ್ವರಭಕ್ತಿಭಾವಂ
ವಾಂಛಂತಿ ನೈವ ಸುಕೃತೈರಕೃತೈಃ ಕೃತಾರ್ಥಾಃ ॥೬೦॥

---

ಆದ್ದರಿಂದ ಅಸದೃಶ ಫಲಪ್ರದಾತೃವಾದ ಪರಮೇಶ್ವರನನ್ನು ಸರ್ವರೂ ಸದಾ ಶಿವಧ್ಯಾನದಿಂದ ಪರಿಪೂತಗೊಂಡ ಮನಸ್ಸಿನಿಂದಲೂ, ಮಾಧುರ್ಯ ಧೈರ್ಯ ಪ್ರಚೋದಕಗಳಾದ ಸ್ತುತಿವಚನಗಳಿಂದಲೂ, ಸಾರಭೂತನಾಗಿರುವ ಮಹಾದೇವ ನನ್ನು ಸರ್ವದಾ ಧ್ಯಾನಮಾಡುತ್ತಿರಬೇಕು. ॥೫೭॥

ಈ ಶಿವರಹಸ್ಯವೆಂಬ ಗ್ರಂಥವು ಬಹು ಪುಣ್ಯಪ್ರದವಾದದ್ದು. ಮಧುವಿನಂತೆ ಪ್ರೀತಿಯಿಂದ ಆಸ್ವಾದ್ಯವಾದುದು. ಪರಶಿವನ ಪಾದಭಕ್ತಿಯನ್ನು ಅತಿಶಯವಾಗಿ ವೃದ್ಧಿಹೊಂದಿಸುವುದು. ಇದನ್ನು ಸೇವಿಸುವವರ ಕಷ್ಟಗಳನ್ನೆಲ್ಲಾ ಪರಿಹರಿಸುವುದು. ಇದರ ಉಪದೇಶದಂತೆ ನಡೆದವರಿಗೆ ಸಕಲ ಪುಷ್ಟಿಯನ್ನೂ ಒದಗಿಸಿ ಕೊನೆಗೆ ಮೋಕ್ಷಹೊಂದಲು ಸಕಲ ಸಾಧನಗಳನ್ನೂ ಅಣಿಮಾಡಿಕೊಡುವುದು. ॥೫೮॥

ಅಲ್ಲದೆ ಸಕಲೈಶ್ವರ್ಯವನ್ನು ಕಳೆದುಕೊಂಡವರಿಗೂ ಮತ್ತೆ ರಾಜಭೋಗ ವನ್ನೂ, ಪುತ್ರಮಿತ್ರಾದಿಗಳಿಂದ ಸಕಲ ಸುಖವನ್ನೂ ಹೊಂದಿಸಿಕೊಡುವುದು. ಆದರೆ ಮಾನವರಿಗೆ ಸಕಲ ವಿಧವಾದ ಭೋಗಭಾಗ್ಯಗಳಿಂದಲೂ, ಗಜಾಶ್ವರಥಧನಧಾನ್ಯಾದಿ ಗಳಿಂದಲೂ ನಿಜವಾದ ಆನಂದವು ಲಭಿಸಲಾರದು. ಶಿವಪದಧ್ಯಾನವೊಂದೇ ಪ್ರಯೋಜಕವಾದುದು. ॥೫೯॥

ಇದನ್ನು ತಿಳಿದೇ ಸುಕೃತಿಗಳೂ ಧನ್ಯರೂ ಆದ ಮಹಾಮಹಿಮರು ನಶ್ವರವಾಗಿ, ದುಃಖಪ್ರದಗಳಾದ ಮೇಲೆ ಹೇಳಿದ ಸಕಲ ಭೋಗ್ಯವಸ್ತುಗಳ

## ಇತಿ ಶ್ರೀಶಿವರಹಸ್ಯೇ ಅಷ್ಟಮಾಂಶೇ ಚಿತ್ರರಥಗಂಧರ್ವಶಾಪವಿಮೋಚನಂ ನಾಮ ದ್ವಿತೀಯೋಽಧ್ಯಾಯಃ

---

ಹಂಬಲವನ್ನೇ ದೂರಮಾಡಿ ಸದಾ ಶಿವಧ್ಯಾನದಲ್ಲಿಯೇ ಕಾಲಕಳೆಯುತ್ತಾ ಮಹೇಶ್ವರನ ಪ್ರೀತಿಯನ್ನೇ ಅರಸುತ್ತಾ ಕಾಲಕಳೆಯುವರು ಎಂದು ಕುಮಾರ ಸ್ವಾಮಿಯು ಜೈಗೀಷವ್ಯಾದಿ ಸಕಲ ಭಕ್ತರಿಗೂ ಶಿವರಹಸ್ಯವನ್ನು ವಿವರಿಸಿದನು. ॥೬೦॥

ಇಲ್ಲಿಗೆ ಶ್ರೀಶಿವರಹಸ್ಯದ ಎಂಟನೆಯ ಅಂಶದಲ್ಲಿ ಚಿತ್ರರಥ ಗಂಧರ್ವ ಶಾಪಮೋಚನವೆಂಬ ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ತೃತೀಯೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಶೃಣು ತ್ವಮುಗಜಾಕಾಂತಪಾದಭಕ್ತಿವಿವರ್ಧನಂ ।
ಭವಭಕ್ತಿಕಥೋದಾರಂ ವರಂ ಮಧು ಮಹಾಘಭಿತ್ ॥೧॥

ಹೃತ್ತಮೋವಾರಣಂ ಸದ್ಯೋ ಮುಕ್ತಿಕಾರಣಮುದ್ಧೃತಂ ।
ತ್ವತ್ತೋ ನ ಪಾತ್ರಮೇತಸ್ಯ ಗ್ರಹಣೇ ಧಾರಣೇ ಮುನೇ ॥೨॥

---

## ಮೂರನೆಯ ಅಧ್ಯಾಯ

ಎಲೈ ಜೈಗೀಷವ್ಯಮಹರ್ಷಿಯೇ, ಉಮಾಪತಿಯಾದ ಪರಶಿವನ ಪಾದಭಕ್ತಿಯನ್ನು ಅಭಿವೃದ್ಧಿಗೊಳಿಸುವ ಮತ್ತು ಮಹಾಪಾಪನಿವಾರಕವಾದ ಭವಭಕ್ತಿಭರಿತಗಳಾದ ಶಿವಮಹಿಮೆಗಳನ್ನು ಈಗ ವಿವರಿಸುವೆನು. ಕೇಳುವವನಾಗು. ಮಾನವ ಹೃದಯದ ಅಜ್ಞಾನವನ್ನು ಹೋಗಲಾಡಿಸಿ ಮೋಕ್ಷಸಾಧಕವಾದ ಜ್ಞಾನವನ್ನು ಬಲಪಡಿಸುವುದರಲ್ಲಿ ಇದನ್ನು ಬಿಟ್ಟರೆ ಮತ್ತಾವುದೂ ದೊರೆಯಲಾರದು. ಇದನ್ನು ತಿಳಿಯಲು ಮತ್ತು ಇದರಂತೆ ಅನುಷ್ಠಾನಮಾಡಲು ನಿನಗಿಂತ ಧೀರನಾದವನು ನನಗೆ ದೊರೆಯಲಾರನು ಎಂದು ಮುನಿಯನ್ನು ಶ್ಲಾಘಿಸುತ್ತಾ, ಸ್ಕಂದಸ್ವಾಮಿಯು ಶಿವರಹಸ್ಯದ ಕಥೆಯನ್ನು ಮುಂದುವರಿಸಿದನು. ॥೧-೨॥

ರಹಸ್ಯಮೇತದ್ಭಗವಾನಗಜಾಪತಿರೇವ ಹಿ ।
ಕೈಲಾಸೇ ಸ್ವಾಂಕಸಂಸ್ಥಾಯೈ ಪ್ರೀತ್ಯಾಪ್ರಾಹ ಸ ಶಂಕರಃ ॥೩॥

ತದಂತಿಕಸ್ಥೇನ ಮಯಾ ಶ್ರುತಮೇತದ್ವದಾಮಿ ತೇ ।
ಅಷ್ಟಮೂರ್ತೇಃ ಪ್ರಿಯಂ ಚೈತದಷ್ಟಮಾಂಶಮಿದಂ ತವ ॥೪॥

ಕಥಯಿಷ್ಯೇ ಮುನಿಶ್ರೇಷ್ಠ ಶೃಣ್ವೇಭಿರ್ಮುನಿಪುಂಗವೈಃ ।
ಶ್ರವಣೇವಧೃತೋಽಸಿ ತ್ವಂ ಭವಾನೇವ ಮತೋದ್ಯಮೇ ॥೫॥

ಕುರು ಚಿತ್ತಮಿಹೈಕಾಗ್ರ್ಯಮುಗ್ರಾಖ್ಯಾನಂ ಮನೋಹರಂ ।
ಭಾವಾನಾಂ ಭವಶಾಂತ್ಯರ್ಥಂ ಭವೇನೈವ ಪ್ರಕಾಶಿತಂ ॥೬॥

ಭವೋದ್ಭವಚರಿತ್ರೇಷು ವಿಶ್ರಾಂತಾಃ ಕಿಲ ಶಾಂಕರಾಃ ।
ಅವಿಶ್ರಾಂತಮುಮಾಕಾಂತಕಥಯಾ ಶ್ರಾಂತಿವರ್ಜಿತಾಃ ॥೭॥

ಭವತಾಂತಾ ಅಪಿ ಸದಾ ನಿತರಾಂ ಶಾಂತಮಾನಸಾಃ ।
ಕ್ಷಣಂ ತ್ರ್ಯಕ್ಷಪ್ರಸಾದೇನ ಕುರು ಕರ್ಣೇ ಕಥಾರಸಂ ॥೮॥

---

ಮಹರ್ಷಿಯೇ, ಈ ಶಿವರಹಸ್ಯವು ಅತಿ ಗೋಪ್ಯವಾದುದು. ಪರಶಿವನೇ ಸಾಕ್ಷಾತ್ತಾಗಿ ತನ್ನ ತೊಡೆಯಮೇಲೆ ಕುಳಿತಿದ್ದ ಪಾರ್ವತಿಗೆ ಈ ರಹಸ್ಯವನ್ನು ವಿವರಿಸಿದನು. ಅಲ್ಲಿಯೇ ಸಮೀಪದಲ್ಲಿ ಕುಳಿತಿದ್ದ ನಾನು ಅದೆಲ್ಲವನ್ನೂ ಕೇಳಿ ತಿಳಿದುಕೊಂಡೆನು. ಇದರಲ್ಲಿರುವ ಹನ್ನೆರಡು ಅಂಶಗಳಲ್ಲಿ ಈ ಎಂಟನೆಯ ಅಂಶವು ಅಷ್ಟಮೂರ್ತಿಯಾದ ಪರಮೇಶ್ವರನಿಗೆ ಅತ್ಯಂತ ಪ್ರಿಯವಾದುದು. ॥೩-೪॥

ಮುನಿಶ್ರೇಷ್ಠನೇ, ಈಗ ಅದನ್ನು ನಿನಗೆ ವಿವರಿಸುವೆನು. ಈ ಮುನಿಶ್ರೇಷ್ಠರಿಂದ ಕೂಡಿ ನೀನು ಏಕಾಗ್ರಚಿತ್ತದಿಂದ ಕೇಳುವವನಾಗು. ನಿನ್ನಲ್ಲಿಯೇ ನನಗೆ ಅತ್ಯಂತ ಪ್ರೀತಿಯಿರುವುದು. ಸಂಸಾರನಾಶಕವೆನಿಸಿ, ಉಗ್ರವೆಂಬ ಹೆಸರಿನಿಂದ ಉಗ್ರಾಖ್ಯನಾದ ಪರಶಿವನಿಂದ ನಿರೂಪಿತವಾಗಿರುವ ಈ ಅಷ್ಟಮಾಂಶವನ್ನು ಪ್ರೀತಿಯಿಂದ ಲಾಲಿಸು. ಇದು ಬಹು ಮನೋಹರವಾದುದು. ॥೫-೬॥

ಈಶ್ವರಭಕ್ತರೆನಿಸಿದವರು ಶಂಕರಕಥಾಮೃತಪಾನದಲ್ಲಿಯೇ ಆಸಕ್ತರಾಗಿ, ವಿಶ್ರಾಂತಿಯಿಲ್ಲದೆ ಆ ಕಥಾಲಾಪದಲ್ಲಿಯೇ ಕಾಲಕಳೆಯುವರು. ಮಾನವರಿಗೆ ಸಾಂಸಾರಿಕವಾದ ಅನೇಕ ಕಷ್ಟನಷ್ಟಗಳಿರುವುವು. ಆದರೂ ಶಾಂತಮನಸ್ಸಿನಿಂದ

ತೂರ್ಣಮಭ್ಯರ್ಣಗಾ ಮುಕ್ತಿರ್ಭವಿಷ್ಯತಿ ಕೃಪಾವಶಾತ್ ।
ಶಂಭೋರ್ವಿಚಿತ್ರಲೀಲಸ್ಯ ಮಹೇಶಸ್ಯ ಪಿನಾಕಿನಃ ॥೯॥

ಸ ಗೌರೀಹೃದಯಾನಂದ ಆನಂದಾಂಬುನಿಧಿಶ್ಶಿವಃ ।
ಭಕ್ತಾತ್ಯಭಕ್ತೈಸ್ಸ್ತುತೋ ನಿತ್ಯಂ ವೇದವೇದ್ಯೋ ಮಹೇಶ್ವರಃ ॥೧೦॥

ದದಾತಿ ಮೋಕ್ಷಸಾಮ್ರಾಜ್ಯಂ ಪ್ರಾಜ್ಯಂ ದೇವಶಿಖಾಮಣಿಃ ।
ರಾಜ್ಯಂ ವಾ ಶಿವಭಕ್ತಾನಾಮನ್ನಮಾಜ್ಯಪ್ಲುತಂ ಸದಾ ॥೧೧॥

ವಾಣೀಪತೇರಯಂ ಪ್ರಾದಾದ್ವೇದಜಾಲಂ ಕೃಪಾವಶಾತ್ ।
ಶರ್ವಾಣೀಪತಿರೇವಾದ್ಯ ಚಾರುಚಂದ್ರಲಸಚ್ಛಿರಾಃ ॥೧೨॥

ರಮಾರಮಣತಾಮೀಶಃ ಸ ಗೌರೀರಮಣೋ ಹರಃ ।
ದದಾತ್ಯೇವ ಹಿ ಭಕ್ತೇಷು ಶಾಂಭವೇಷು ಕೃಪಾವಶಾತ್ ॥೧೩॥

ಸ ಏವ ಗೀಯತೇ ವೇದೈರ್ವೇದಾಂತೈರಪಿ ಶಂಕರಃ ।
ಸ ಏವ ಸರ್ವದೇವೇಶೋ ಮೃತ್ಯುಂಜಯ ಉಮಾಪತಿಃ ॥೧೪॥

---

ಪರಶಿವನ ಅನುಗ್ರಹವನ್ನು ಸಂಪಾದಿಸಿಕೊಂಡು ಶಿವಕಥಾರಸವನ್ನು ಕಿವಿಗೆ ಒದಗಿಸುತ್ತಾ ಈ ನಾನು ಹೇಳುವ ವಿಷಯಗಳೆಲ್ಲವನ್ನೂ ಕೇಳುವವನಾಗು. ॥೭-೮॥

ಲೀಲಾಮಯನಾದ ಪರಶಿವನ ಅನುಗ್ರಹದಿಂದ ಮೋಕ್ಷವೆಂಬುದು ಅತಿ ಸನ್ನಿಹಿತವಾಗಿ ದೊರೆಯುವುದು. ಪಿನಾಕಿಯಾದ ಮಹಾದೇವನ ಕೃಪಾಬಲವೇ ಅದು. ಪರಶಿವನು ಆನಂದಸ್ವರೂಪನು. ಪಾರ್ವತೀ ಹೃದಯಾನಂದಪ್ರದನು. ಅನೇಕ ಭಕ್ತರಿಂದಲೂ, ವೇದರಾಶಿಯಿಂದಲೂ ಸ್ತುತನಾದವನು. ॥೯-೧೦॥

ದೇವಶ್ರೇಷ್ಠನಾದ ಮಹಾದೇವನು ತನ್ನ ಭಕ್ತರಿಗೆ ಮೋಕ್ಷಸಾಮ್ರಾಜ್ಯವನ್ನೇ ಒದಗಿಸುವನಲ್ಲದೆ, ಐಹಿಕ ಸುಖವೆನಿಸಿದ ರಾಜ್ಯಕೋಶಾದಿಗಳನ್ನೂ, ಘೃತಮಿಶ್ರಿತ ವಾದ ಮಧುರಾನ್ನವನ್ನೂ ಅನುಗ್ರಹಿಸುವನು. ಬ್ರಹ್ಮನಿಗೆ ವೇದಜಾಲವನ್ನು ಕೊಟ್ಟವನೂ, ಚಂದ್ರಶೇಖರನೆನಿಸಿದ ಗೌರೀಪತಿಯೇ ಅಲ್ಲವೆ! ॥೧೧-೧೨॥

ವಿಷ್ಣುವಿಗೆ ಲಕ್ಷ್ಮೀಪತಿತ್ವವನ್ನು ಅನುಗ್ರಹಿಸಿದವನೂ ಈ ಪರಶಿವನೇ. ಮಹಾದೇವನು ತನ್ನ ಭಕ್ತರಿಗೆ ಸಕಲಾನುಗ್ರಹದಿಂದಲೂ ಸಕಲೈಶ್ವರ್ಯವನ್ನೂ

ಸ ಏವ ಭಗವಾನ್ ಶಂಭುಃ ಶ್ರುತಶ್ಚಾಥರ್ವಣೇ ಶಿವಃ ।
ಯಸ್ಯೈಶ್ವರ್ಯಸ್ಯ ನಾಂತೋಽಸ್ತಿ ಸರ್ವಗಃ ಸರ್ವದಾ ಪ್ರಭುಃ ॥೧೫॥

ಯದ್ಧ್ಯಾನೇನ ಪರಾಮುಕ್ತಿಃ ಸುಲಭಾ ಶಾಂಭವೋತ್ತಮೇ ।
ಸ ಗೌರೀರಮಣೋ ದೇವಃ ಕಾಲಕಾಮಾಂಧಕಾಶನಃ ॥೧೬॥

ಸ ತು ಮೃತ್ಯುಂಜಯೋ ನಿತ್ಯಮಪಾರವಿಭವಾಶ್ರಯಃ ।
ಯಸ್ಯ ಪ್ರಸಾದಲೇಶೇನ ವಿಷ್ಣುಬ್ರಹ್ಮೇಂದ್ರಪೂರ್ವಕಾಃ ॥೧೭॥

ನಿರ್ವೃತಾಧಿಷ್ಠಿತಾಸ್ಸರ್ವೇ ಶಿಪಿವಿಷ್ಟಪದಾರ್ಚಕಾಃ ।
ಉದಾರತರಗಂಭೀರೋ ಭವಮಾಯಾಭಯಾಪಹಃ ॥೧೮॥

ಸರ್ವದುಃಖಹರೋ ದೇವೋ ರುದ್ರೋ ವೈ ನೀಲಲೋಹಿತಃ ।
ಯ ಏನಂ ವಿದುರೀಶಾನಮಮೃತಾಸ್ತೇ ಸದಾ ಮುನೇ ॥೧೯॥

---

ಒದಗಿಸುವವನು. ವೇದ ವೇದಾಂತಗಳಿಂದಲೂ, ಸಕಲ ದೇವತೆಗಳಿಂದಲೂ ಮೃತ್ಯುಂಜಯನೆಂದೂ, ಉಮಾಪತಿಯೆಂದೂ ಇನ್ನೂ ನಾನಾವಿಧವಾದ ನಾಮಗಳಿಂದಲೂ ಸ್ತುತಿಸಲ್ಪಡುವವನು ಈ ಪರಶಿವನೇ. ॥೧೩-೧೪॥

ಅಥರ್ವಣವೇದದಲ್ಲಿ ಬಹುವಾಗಿ ಸ್ತುತನಾಗಿರುವವನೂ ಭಗವಾನ್ ಶಂಕರನೇ. ಈಶ್ವರನ ಐಶ್ವರ್ಯಕ್ಕೆ ಕೊನೆಯೇ ಇಲ್ಲ. ಆತನು ಸರ್ವವ್ಯಾಪಿಯು, ಸರ್ವರಿಗೂ ಒಡೆಯನು. ಅವನ ಧ್ಯಾನದಿಂದ ಮೋಕ್ಷವೆಂಬುದು ಅತಿಸುಲಭವಸ್ತುವೆನಿಸುವುದು. ಗೌರೀಪತಿಯಾದ ಮಹಾದೇವನೇ, ಯಮನನ್ನೂ, ಮನ್ಮಥನನ್ನೂ, ಅಂಧಕಾಸುರನನ್ನೂ ನಾಶಗೊಳಿಸಿದವನು. ॥೧೫-೧೬॥

ಮೃತ್ಯುಂಜಯನೆನಿಸಿದ ಮಹಾದೇವನು ಸಕಲ ಐಶ್ವರ್ಯಕ್ಕೂ ಆಶ್ರಯನಾದವನು. ಅವನ ಅನುಗ್ರಹದಿಂದ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದವರು ತಮ್ಮ ತಮ್ಮ ಸುಖಸ್ಥಾನವನ್ನು ನಿರ್ವಿಘ್ನವಾಗಿ ಆಶ್ರಯಿಸಿರುವರು. ಅತಿ ಉದಾರನೂ, ಅತಿ ಗಂಭೀರನೂ ಆಗಿ ಮಹಾದೇವನು ಸಂಸಾರಪ್ರದವಾದ ಮಾಯೆಗೆ ದೂರನೆನಿಸಿ ಸಕಲ ಭಕ್ತರ ಭಯವನ್ನು ನಿವಾರಿಸುವವನೂ ಆಗಿರುವನು. ॥೧೭-೧೮॥

ಮಹಾದೇವನು ಸರ್ವರ ದುಃಖಗಳನ್ನೂ ನಾಶಗೊಳಿಸುವವನು, ಭಯಂಕರನು, ನೀಲಕಂಠನು. ಸಕಲ ಜ್ಞಾನಿಗಳೂ ಈತನನ್ನು ನಾಶರಹಿತನೆಂದು ತಿಳಿಯು

ಅಥೇತರೇ ದುಃಖಮೇವ ಪ್ರಾಪ್ನುವಂತಿ ಪದೇಪದೇ ।
ಯಸ್ಯ ವಾಮಾಂಕಗಾ ದೇವೀ ಯಾ ಸಾ ಸರ್ವೇಶ್ವರೀ ಶಿವಾ ॥೨೦॥

ಯನ್ಮಾಯಾಮೋಹಿತಾ ವೈ ಬ್ರಹ್ಮೇಂದ್ರಾಶ್ಚಾಪ್ಯಧೋಕ್ಷಜಃ ।
ಯಸ್ಯಾಃ ಪ್ರಸಾದಲೇಶೇನ ವಿಜಾನಂತಿ ಮಹೇಶ್ವರಂ ॥೨೧॥

ಸ್ವಾತ್ಮಾನಂ ಸರ್ವಗಂ ಶಾಂತಂ ಸಚ್ಚಿನ್ಮಯಮಮಾಧವಂ ।
ಯಸ್ಯ ಪುತ್ರೋ ಗಣಾಧೀಶಃ ಸರ್ವವಿಘ್ನನಿವಾರಕಃ ॥೨೨॥

ಯಸ್ಯ ಪುತ್ರೋಹಮೇವಾದ್ಯ ಸಾಕ್ಷಾತ್ ಜ್ಞಾನಾತ್ಮಕೋ ಮುನೇ ।
ಯಸ್ಯನಂದ್ಯಾದಯೋ ವಿಪ್ರ ಗಣಾಃ ಶಾಂಕರಪುಂಗವಾಃ ॥೨೩॥

ಯಸ್ಯ ಧರ್ಮೋ ಮಹಾಬಾಹೋ ಯುಗಪಾದೋಮಿತದ್ಯುತಿಃ ।
ಯಸ್ಯಾಷ್ಟಮೂರ್ತಿಭಿರ್ವ್ಯಾಪ್ತಂ ಜಗದೇತಚ್ಚರಾಚರಂ ॥೨೪॥

---

ವರು. ಏತದ್ಭಿನ್ನರಾದ ಸಕಲ ದೇವತೆಗಳೂ ಆಗಾಗ ದುಃಖಭಾಗಿಗಳಾಗುವರು. ಪರಶಿವನ ವಾಮಾರ್ಧಭಾಗದಲ್ಲಿ ನೆಲಸಿರುವ ಪಾರ್ವತಿಯೂ ಸಹ ಸರ್ವಶಕ್ತಿಮಯಿಯಾಗಿ ಸರ್ವೇಶ್ವರಿಯೆನಿಸಿರುವಳು. ॥೧೬-೨೦॥

ಈ ಪರಮೇಶ್ವರೀ ಮಾಯೆಯಿಂದಲೇ ಬ್ರಹ್ಮ, ವಿಷ್ಣು, ಇಂದ್ರಾದಿಗಳು ಸದಾ ಮೋಹಪಾಶಕ್ಕೆ ಸಿಕ್ಕಿ ನರಳುತ್ತಿರುವರು. ಈ ದೇವಿಯ ಅನುಗ್ರಹವಾದರೇ ಪರಶಿವವಿಷಯಕವಾದ ಸತ್ಯಜ್ಞಾನವು ಲಭಿಸುವುದು. ಆಗಲೇ ಪರಶಿವನು ಆತ್ಮಸ್ವರೂಪನೆಂದೂ, ಸರ್ವವ್ಯಾಪಿಯೆಂದೂ, ಶಾಂತಸ್ವಭಾವದವನೆಂದೂ, ಸಚ್ಚಿದಾತ್ಮಕನೆಂದೂ ಬೋಧೆಯುಂಟಾಗುವುದು. ಪರಶಿವನ ಪುತ್ರನೆನಿಸಿ ವಿಘ್ನೇಶ್ವರನು ಸಕಲ ಭಕ್ತರ ವಿಘ್ನನಾಶಕನಾಗಿರುವನು. ॥೨೧-೨೨॥

ಅವನ ಮಗನೆನಿಸಿದ ನಾನೂ ಸಹ ಕೇವಲ ಜ್ಞಾನಸ್ವರೂಪಿಯೆಂದು ತಿಳಿ. ಪರಶಿವನ ಪ್ರಮಥಗಣಗಳೇ ಈ ನಂದಿ, ಭೃಂಗಿ ಮೊದಲಾದುವುಗಳು. ಧರ್ಮವೆಂಬುದು ಪರಶಿವನ ಆಜ್ಞಾನುಸಾರ ಒಂದೊಂದು ಪಾದ ಕಮ್ಮಿಯಾಗಿ ಚತುರ್ಯುಗಗಳಲ್ಲಿಯೂ ನೆಲಸಿರುವುದು. ಪರಶಿವನ ಅಷ್ಟಮೂರ್ತಿಗಳೆನಿಸಿದ ಸೂರ್ಯ, ಚಂದ್ರ, ಜಲ, ಅಗ್ನಿ, ಯಜಮಾನ, ಆಕಾಶ, ಭೂಮಿ, ವಾಯು ಈ ವಸ್ತುಗಳಿಂದ ಪರಶಿವನು ಜಗತ್ತನ್ನೇ ಆಕ್ರಮಿಸಿರುವನು. ॥೨೩-೨೪॥

ಯಸ್ಯ ಲಿಂಗಂ ಸದಾ ಕಾಲಂ ಪೂಜಯಂತಿ ಮರುದ್ಗಣಾಃ ।
ಬಲಪ್ರಮಥನಂ ಸಾಂಬಂ ಭಕ್ತಸಂಸಾರಮೋಚಕಂ ॥೩೫॥

ಕಾರಣಂ ಜಗತಾಮೀಶಮಾನಂದಘನಮದ್ವಯಂ ।
ಯೋ ವೈ ರುದ್ರೋ ಮಹಾದೇವೋ ಭೂತಂ ಭವ್ಯಂ ಭವಜ್ಜಗತ್ ॥೩೬॥

ಯೋ ವೈ ರುದ್ರೋ ಮಹಾದೇವೋ ಶಂಕರಃ ಶಶಿಶೇಖರಃ ।
ವಿಶ್ವಂ ಭೂತಂ ಚ ಭುವನಂ ವಿಚಿತ್ರಂ ಸಹಿ ಶಂಕರಃ ॥೩೭॥

ಭೀಮೋ ರುದ್ರೋ ಮಹೇಶಾನೋ ಗೀಯತೇ ಶ್ರುತಿಷು ಸ್ಥಿರಃ ।
ಸರ್ವಾಭಯಪ್ರದೋ ವಿಶ್ವೋ ವಿಶ್ವಾಧಿಕ ಉಮಾಸಖಃ ॥೩೮॥

ಪತಿತ್ವೇನ ಸ್ತುತೋ ವೇದೈಃ ಸರ್ವೇಷಾಮೇವ ಶಂಕರಃ ।
ಭಯಾಪಹೋಽಯಂ ಭಕ್ತೇಷು ಶಾಂಭವೇಷು ಮಹಾತ್ಮಸು ॥೩೯॥

---

ಸಕಲ ದೇವತೆಗಳೂ ಪರಶಿವಲಿಂಗವನ್ನು ಸದಾ ಪೂಜಿಸುತ್ತಿರುವರು. ಬಲಾಸುರನೇ ಮೊದಲಾದ ರಾಕ್ಷಸರನ್ನು ಕೊಂದು, ಭಕ್ತರ ಸಂಸಾರದುಃಖವನ್ನು ನಿವಾರಿಸುವ ಮಹಾದೇವನನ್ನು ಸಕಲ ಜಗತ್ತಿಗೂ ಮೂಲಕಾರಣನನ್ನಾಗಿಯೂ, ಆನಂದರೂಪಿಯನ್ನಾಗಿಯೂ, ಸಜಾತೀಯ ವಿಜಾತೀಯ ದ್ವಿತೀಯವಸ್ತು ರಹಿತ ನನ್ನಾಗಿಯೂ ತಿಳಿದಿರುವರು. ಭೂತ ಭವಿಷ್ಯದ್ವರ್ತಮಾನಕಾಲದ ಈ ಪ್ರಪಂಚ ವೆಲ್ಲವೂ ಶಂಕರಮಯವೆಂದೇ ಭಾವಿಸಿರಿ. ॥೩೫-೩೬॥

ಸರ್ವಜನ ಭಯಂಕರನೆನಿಸಿದ ಮಹಾದೇವನು ಸರ್ವಜನ ಸುಖಕರನೂ ಆಗಿರುವನು. ಚಂದ್ರಶೇಖರನೆನಿಸಿದ ಆ ಮಹಾದೇವನೇ, ಈ ವಿಚಿತ್ರವಾದ ಪ್ರಪಂಚಸ್ವರೂಪಿಯೆನಿಸಿರುವನು. ಇದೇ ಪರಶಿವವಸ್ತುವನ್ನೇ ಸಕಲ ವೇದಗಳೂ ಭೀಮನೆಂದೂ, ರುದ್ರನೆಂದೂ, ಮಹೇಶ್ವರನೆಂದೂ ಹೊಗಳುತ್ತಿರುವುವು ಪ್ರಪಂಚ ಸ್ವರೂಪಿಯೂ, ಸರ್ವರಿಗೂ ಅಭಯಪ್ರದನೂ, ವಿಶ್ವರೂಪಿಯಾಗಿದ್ದರೂ ವಿಶ್ವಾಧಿಕ ನೆನಿಸಿ ಪ್ರಕಾಶಿಸುವವನೂ ಗೌರೀಪತಿಯೇ. ॥೩೭-೩೮॥

ಶಂಕರನೇ ಸರ್ವಲೋಕದೊಡೆಯನು ಎಂದು ಸಕಲ ವೇದಗಳೂ ಸಾರು ತ್ತಿವೆ. ಮಹಾತ್ಮರೆನಿಸಿದ ಶಾಂಭವಶ್ರೇಷ್ಠರ ಸಕಲ ಭಯವನ್ನೂ ನಿವಾರಿಸುವವನು

ಸರ್ವೋಽಪಾಸ್ಯೋಽಯಮೇವಾತ್ಮಾ ಸರ್ವೇಷಾಂ ಹೃದಯಾಂತರಃ ।
ಸರ್ವಭೂತಗುಹಾವಾಸೋ ವಾಸಿತೋ ಜಗತಾಂ ತ್ರಯೇ ॥೩೦॥

ಈಶಾವಾಸ್ಯಮಿದಂ ಸರ್ವಂ ಜಗತ್ತ್ರಿಭುವನಾತ್ಮಕಂ ।
ಯಸ್ಯ ರೂಪಂ ಚ ಪೃಥಿವೀ ಸೂರ್ಯಾಚಂದ್ರಮಸೌ ಮುನೇ ॥೩೧॥

ಪೃಥಿವೀದೇವತಾಸ್ಸರ್ವಾಃ ನ ವಿದಂತಿ ಮಹೇಶ್ವರಂ ।
ಪ್ರಿಯೋಽಹಂ ಸರ್ವಭೂತೇಷು ನಾಸ್ತ್ಯಸ್ಮಾಜ್ಜಗದೇವ ಹಿ ॥೩೨॥

ಬಿಭ್ರಾಜಮಾನಮಿದಮೇತದದಭ್ರರೂಪ
ಮುದ್ಭ್ರಾಂತಚಿತ್ತಕುದೃಶಾಂ ಜಗದೇವ ಸತ್ಯಂ ।
ವಿಭ್ರಾಜತೇಽಭ್ರಚ್ಛದಿವ ಹೃದಭ್ರ
ಗೋಷ್ಠ್ಯೇನಟೇಶಚರಣಾರ್ಚನಹೀನದೃಷ್ಟೇಃ ॥೩೩॥

---

ಈ ಶಂಕರನು. ಸರ್ವರ ಹೃದಯಕುಹರಾಂತರ್ವರ್ತಿಯಾಗಿದ್ದು ಸರ್ವರಿಗೂ ಪೂಜ್ಯ ನೆನಿಸಿದ ಮಹಾದೇವನು ಜಗತ್ತ್ರಯದಲ್ಲಿಯೂ ನೆಲಸಿ ಪ್ರಕಾಶಿಸುತ್ತಿರುವನು. ॥೨೯-೩೦॥

ಸ್ವರ್ಗ ಮರ್ತ್ಯ ಪಾತಾಳಾತ್ಮಕವಾದ ಈ ಜಗತ್ತ್ರಯವೂ ಪರಶಿವನಿಂದ ಆವರಿಸಲ್ಪಟ್ಟುದೇ ಆಗಿರುವುದು. ಪೃಥಿವೀ, ಸೂರ್ಯ, ಚಂದ್ರ, ಮುಂತಾದ ಸಮಸ್ತ ದೇವತೆಗಳೂ ಪರಶಿವನ ಸ್ವರೂಪಗಳೇ. ಆದರೆ ಆ ದೇವತೆಗಳು ಮಾತ್ರ ಪರಬ್ರಹ್ಮಸ್ವರೂಪವನ್ನು ಅರಿಯಲಾರವು. ಪರಬ್ರಹ್ಮವಸ್ತುವೇ ಈ ಜಗತ್ತಾಗಿರುವುದರಿಂದ, ಏತದ್ಭಿನ್ನವಾದ ಯಾವ ವಸ್ತುವೂ ಜಗತ್ತಿನಲ್ಲಿ ಕಾಣಲಾರದು. ಇಂತಹ ಮಹಾದೇವನಿಗೆ ಅತ್ಯಂತ ಪ್ರಿಯನಾದವನು ನಾನೊಬ್ಬನೇ. ॥೩೧-೩೨॥

ಯಾರ ಹೃದಯಾಕಾಶದಲ್ಲಿ ನಾಟ್ಯಾಚಾರ್ಯನಾದ ಪರಶಿವನ ನಾಟ್ಯವು ನಡೆಯಲಾರದೋ, ಅಂದರೆ ಯಾರ ಮನಸ್ಸು ಸದಾ ಪರಶಿವನ ಲೀಲಾವಿಭೂತಿಯನ್ನು ಸ್ಮರಿಸಿಕೊಂಡು ಆನಂದಪಡಲಾರದೋ, ಅಂತಹ ಮಂದಮತಿಗಳಿಗೆ ಪ್ರತ್ಯಕ್ಷದಲ್ಲಿ ಕಂಡುಬರುವ ಈ ಜಗತ್ತೇ ಸತ್ಯವಾದದ್ದೆಂಬ ಭ್ರಾಂತಿಯೊದಗುವುದು. ನಾನಾರೂಪದಲ್ಲಿ ಅತ್ಯಧಿಕವಾಗಿ ಕಂಡುಬರುವ ಈ ಜಗತ್ತು ನಿಜವಾಗಿಯೂ ನಶ್ವರವಾದದ್ದು. ಸ್ಥಿರವಸ್ತುವಿನಂತೆ ಹೊಳೆಯುತ್ತದೆ. ಇಂತಹ ವಸ್ತುವಿನಲ್ಲಿ ಸತ್ಯತ್ವ

ನೋ ವಿಷ್ಣುರ್ನೋ ವಿಧಾತಾ ಹರಿಸುರನಿಕರಾ ಭೂಸುರಾ ಭಾಸುರಾ ಯೇ
ವೀರಾವಾಪ್ಯಸುರಾ ಸುಕಿನ್ನರವರಾಃ ಸಂಸಾರಕಾರಾಗೃಹೇ ।
ಭ್ರಾಮ್ಯಂತೋಽಪಿ ನ ಜಾನತೇ ಶಿವಪದಂ ಕಿಂ ತು ಪ್ರಸಾದಾದ್ವಿಭೋಃ
ನೋ ಬಿಭ್ಯಂತಿ ಭಯೇಷು ಶಂಕರಪದಧ್ಯಾನಾನುರಾಗಾದರಾಃ ॥೩೪॥

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ
ಶಿವಮಹಿಮಾವರ್ಣನಂ ನಾಮ ತೃತೀಯೋಽಧ್ಯಾಯಃ

---

ಬುದ್ಧಿಯನ್ನಿಟ್ಟು ಮುಂದುವರಿಯುವ ಮಾನವನು ನಿಜವಾಗಿಯೂ ಶಿವಕೃಪಾ ಬಾಹಿರನಲ್ಲವೇ? ॥೩೩॥

ಪ್ರಪಂಚದಲ್ಲಿ ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೂ, ಸುರಾಸುರಾದಿ ವೀರರೂ, ಗಂಧರ್ವ ಕಿನ್ನರಾದಿಗಳೂ ತಮ್ಮ ತಮ್ಮ ಸಂಸಾರವೆಂಬ ಬಂಧನಕ್ಕೆ ಸಿಕ್ಕಿ ನರಳುವರೇ ಆಗಿರುವರು. ಅಂತಹವರು ಎಂದಿಗೂ ಪರಶಿವನ ನಿಜಸ್ವರೂಪವನ್ನು ಅರಿಯಲಾರರು. ಹಾಗೆ ಪರಶಿವನ ಪಾದಮಹಿಮೆಯನ್ನರಿತು ಸದಾ ಅವನ ಧ್ಯಾನ ದಲ್ಲಿಯೇ ಮಗ್ನರಾದ ಶಾಂಭವರು ಎಂದಿಗೂ ಸಂಸಾರಭಯದಿಂದ ಹೆದರಲಾರರು. ಅವರಿಗೆ ಸಂಸಾರಭಯವು ಎಂದಿಗೂ ವ್ಯಾಪಿಸಲಾರದು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೩೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಚತುರ್ಥೋಽಧ್ಯಾಯಃ

॥ ಸ್ಕಂದ ಉವಾಚ ॥

ವಿಜ್ಞಾನಾತ್ಮಾ ಪರಾತ್ಮಾಯಂ ಸರ್ವಾತ್ಮಾಯಂ ಮಹೇಶ್ವರಃ ।
ಏಷೋಽಂತರ್ಹೃದಯಾರಾಮೋ ಏಷ ಭೂತಪತಿಶ್ಶಿವಃ ॥೧॥

ಸ ಏಷ ಪರಮಾನಂದರಸೋಽಯಮಮೃತೋ ಹರಃ ।
ಏಷ ವಿಪ್ರೈರ್ಮಹಾದೇವಃ ಸರ್ವದಾಭಿಷ್ಟುತೋ ಮುನೇ ॥೨॥

ಏನಮೇಕಂ ವದಂತ್ಯಗ್ನಿಂ ಬ್ರಹ್ಮಾಣಂ ಹರಿಶಕ್ರಕಂ ।
ಏಕೋ ರುದ್ರೋ ಮಹಾದೇವೋ ನ ದ್ವಿತೀಯೋಽಸ್ತಿ ಕಶ್ಚನ ॥೩॥

---

## ನಾಲ್ಕನೆಯ ಅಧ್ಯಾಯ

ಶಿವಸ್ವರೂಪವನ್ನು ವಿವರಿಸುತ್ತಾ ಕುಮಾರಸ್ವಾಮಿಯು ಜೈಗೀಷವ್ಯ ಮಹರ್ಷಿಯೊಡನೆ ಹೀಗೆಂದನು.—ಪರಶಿವನೆನಿಸಿದ ಈತನೇ ವಿಜ್ಞಾನಸ್ವರೂಪನು. ಪರಮಾತ್ಮನೆನಿಸಿದ ಈತನೇ ಸರ್ವಜಗದ್ರೂಪವಾಗಿ ಪರಿಣತನಾಗಿರುವನು. ಸಕಲ ಭೂತಪತಿಯೆನಿಸಿದ ಶಂಕರನು ಸಕಲ ಹೃದಯಾಂತರಾಳದಲ್ಲಿ ಆನಂದರೂಪದಲ್ಲಿ ನಿಲ್ಲುವನು. ಮಾನುಷಾದಿ ಸಕಲ ಆನಂದಗಳಿಗಿಂತಲೂ ಉತ್ತಮವಾದ ಆನಂದವೆನಿಸಿದ ಪರಮಾನಂದಸ್ವರೂಪಿಯೇ ಈ ಮಹಾದೇವನು. ವಿಶೇಷವಾಗಿ ಬ್ರಹ್ಮಸ್ವರೂಪವನ್ನು ತಿಳಿದವರು ಈ ಮಹಾದೇವನನ್ನು ನಾನಾರೀತಿಯಲ್ಲಿ ಸರ್ವದಾ ಹೊಗಳುತ್ತಿರುವರು. ॥೧-೨॥

ಸಜಾತೀಯ ವಿಜಾತೀಯ ದ್ವಿತೀಯ ರಹಿತನಾದ ಈ ಪರಬ್ರಹ್ಮವಸ್ತು

ಋತಂ ಸತ್ಯಂ ಪರಂ ಬ್ರಹ್ಮ ಪುರುಷಃ ಕೃಷ್ಣಪಿಂಗಳಃ ।
ಊರ್ಧ್ವರೇತೋ ವಿರೂಪಾಕ್ಷೋ ವಿಶ್ವರೂಪೋ ಮಹೇಶ್ವರಃ ॥೪॥

ಯೋ ವೇದಾದೌ ಸ್ವರಃ ಶಂಭುರ್ವೇದಾಂತೇಷು ಪ್ರತಿಷ್ಠಿತಃ ।
ಈಶಾನಃ ಸರ್ವವಿದ್ಯಾನಾಂ ಸರ್ವಭೂತಾದಿರೀಶ್ವರಃ. ॥೫॥

ಬ್ರಹ್ಮವಿಷ್ಣ್ವಾದಿದೇವಾನಾಮಧಿಪೋ ವಿಶ್ವತೋ ಮುಖಃ ।
ಜನಿತಾ ಬ್ರಹ್ಮವಿಷ್ಣೂನಾಂ ರುದ್ರೇಂದ್ರಾಣಾಂ ಮಹೇಶ್ವರಃ ॥೬॥

ಯಮಾನಿಲಾನಲಾರ್ಕಾಣಾಂ ದಿವಃ ಪೃಥ್ವ್ಯಾರ್ಮಹೇಶ್ವರಃ ।
ಯೋಂತರಾ ಪೃಥಿವೀ ದೇವಂ ಪೃಥಿವ್ಯರ್ಕೇಷು ವೇದ ನ ॥೭॥

---

ವೊಂದನ್ನೇ ಬ್ರಹ್ಮ, ವಿಷ್ಣು, ಇಂದ್ರ, ರುದ್ರ, ಮಹಾದೇವ ಎಂಬ ಹೆಸರಿನಿಂದ ಕರೆಯುತ್ತಿರುವರು. ನಿಜವಾಗಿಯೂ ಸದ್ವಸ್ತುವೆನಿಸಿದ ಪರಶಿವನಿಗೆ ಭಿನ್ನವಾದ ಮತ್ತೊಂದು ವಸ್ತುವು ಕಾಣುವುದೇ ಇಲ್ಲ. ವಾಗ್ರೂಪವಾದ ಮತ್ತು ಮನಸಾ ಸತ್ಯಸ್ವರೂಪವೆನಿಸಿದ ಈ ಪರಬ್ರಹ್ಮವಸ್ತುವೇ ಉಮಾರೂಪದಿಂದಲೂ ಮಹೇಶ್ವ ರಾಕಾರದಿಂದಲೂ ತೋರಿಬರುತ್ತಿರುವುದು. ಪುರುಷರೂಪವು ಕೃಷ್ಣರೂಪದಿಂದಲೂ, ಸ್ತ್ರೀರೂಪವು ಪಿಂಗಳವರ್ಣದಿಂದಲೂ ಶೋಭಿಸುತ್ತಿರುವುದು. ಊರ್ಧ್ವಭಾಗಕ್ಕೂ ಪ್ರವೇಶಿಸುವಂತಹ ತೇಜಸ್ಸುಳ್ಳವನಾಗಿ ಮೂರುಕಣ್ಣುಗಳಿಂದ ಶೋಭಿಸುತ್ತಾ ವಿಶ್ವರೂಪವನ್ನು ಧರಿಸಿದ ಮಹೇಶ್ವರನೆಂದರೆ ಈ ಶಂಕರನೊಬ್ಬನೇ. ॥೩-೪॥

ವೇದಗಳ ಆದಿಯಲ್ಲಿ ಪ್ರಣವಸ್ವರೂಪನಾಗಿಯೂ, ಉಪನಿಷತ್ತುಗಳಲ್ಲಿ ಶಂಭುಶಬ್ದದಿಂದ ವ್ಯವಹರಿಸಲ್ಪಡುವವನೂ, ಸರ್ವವಿಧವಾದ ಜ್ಞಾನಕ್ಕೂ ಒಡೆಯು ನೆನಿಸಿ ಸರ್ವ ಭೂತಗಳಿಗೂ ಆದಿಭೂತನೆನಿಸಿದವನು ಈ ಮಹಾತ್ಮನು. ಸರ್ವ ಮುಖಿಯಾದ ಈ ಪರಶಿವನಿಂದಲೇ ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಮುಂತಾದ ಸಕಲ ದೇವತೆಗಳೂ ಆವಿರ್ಭವಿಸಿರುವರು. ಅವರೆಲ್ಲರ ಉತ್ಪತ್ತಿಗೂ ಇವನೇ ಮೂಲಕಾರಣನೆನಿಸಿರುವನು. ॥೫-೬॥

ಯಮ, ವಾಯು, ಅಗ್ನಿ, ಸೂರ್ಯ, ಭೂಮಿ ಇವರೆಲ್ಲರಿಗೂ ಮಹಾದೇವನೇ ಉತ್ಪತ್ತಿಸ್ಥಾನನು. ಇವರಲ್ಲಿ ಪ್ರತಿಯೊಬ್ಬನೂ ಜಗದೊಡೆಯನಾದ ಮಹಾದೇವನನ್ನು ಬಿಟ್ಟು ಮತ್ತಾರನ್ನೂ ಧ್ಯಾನಿಸಲಾರರು. ವಿಶ್ವಬಾಹುವೂ, ವಿಶ್ವವ್ಯಾಪಿಯೂ,

ಬ್ರಹ್ಮಾಣಂ ವಿದಧಾತ್ಯಗ್ರೇ ತಸ್ಮೈವೇದಾನುಪಾವಿಶತ್ ।
ವಿಶ್ವತಶ್ಚಕ್ಷುರೀಶಾನೋ ವಿಶ್ವತೋ ಬಾಹುರೀಶ್ವರಃ ॥೮॥

ವಿಶ್ವತಃ ಪಾಣಿಪಾದೋಽಯಂ ಸಹಸ್ರಾಕ್ಷಃ ಸಹಸ್ರಪಾತ್ ।
ಅತ್ಯತಿಷ್ಠದಿದಂ ಸರ್ವಮೀಶಾನೋಽಯಂ ದಶಾಂಗುಲಂ ॥೯॥

ಯದ್ಭೂತಂ ಯಚ್ಚ ವೈ ಭವ್ಯಂ ವರ್ತಮಾನಂ ಮಹೇಶ್ವರಃ ।
ಏತಾವಾನಸ್ಯ ಮಹಿಮಾ ನಾತೋ ಜ್ಯಾಯಾಂಶ್ಚ ಪೂರುಷಃ ॥೧೦॥

ಭೀಷೈವ ಪವತೇ ವಾಯುರ್ಭೀಷ್ಯೈವೋದೇತಿ ಭಾನುಮಾನ್ ।
ಭೀಷೈವ ಅಗ್ನಿರಿಂದ್ರಾದ್ಯಾ ಮೃತ್ಯುರ್ಧಾವತಿ ಭೀತಿತಃ ॥೧೧॥

ಅಪಾಣಿಪಾದೋ ಜವನೋ ಗೃಹೀತಾ ಚಕ್ಷುರೀಶ್ವರಃ ।
ಸ ವೇತ್ತಿ ವೇದ್ಯಜಾತಂ ಚ ನ ತಂ ವೇತ್ತೀಹ ಕಶ್ಚನ ॥೧೨॥

---

ವಿಶ್ವಮುಖನೂ ಆದ ಮಹಾದೇವನು ಮೊದಲು ಬ್ರಹ್ಮನನ್ನು ಸೃಷ್ಟಿಮಾಡಿ, ಅವನಿಂದ ಲೋಕನಿರ್ಮಾಣಕಾರ್ಯವು ನಡೆಯುವುದಕ್ಕಾಗಿ ವೇದರಾಶಿಯನ್ನು ಅವನಿಗರ್ಪಿಸಿದನು. ॥೭-೮॥

ಅಖಂಡ ಜಗತ್ತನ್ನೇ ಆವರಿಸಿ ನಿಂತಿರುವ ಈ ಮಹಾದೇವನ ಕೈಕಾಲುಗಳು ಸರ್ವಜಗದ್ವ್ಯಾಪ್ತಗಳಾಗಿವೆ. ಸಕಲ ಪ್ರಾಣಿಗಳನ್ನೂ ವಿರಾಟ್ಪುರುಷನಾದ ಈತನು ಅಡಗಿಸಿಕೊಂಡಿರುವುದರಿಂದ ಜಗತ್ತಿನ ಸಕಲ ನೇತ್ರಗಳೂ, ಸಹಸ್ರಪಾದಗಳೂ ಇವನಲ್ಲಿಯೇ ಅಡಗಿವೆ. ಸಕಲ ಬ್ರಹ್ಮಾಂಡವನ್ನೂ ಮೀರಿ ಇವನು ನಿಂತಿರುವುದರಿಂದ ದಶಾಂಗುಲಪರಿಮಿತವಾದ ಜಗತ್ತನ್ನು ಮೀರಿದವನಾಗಿರುವನು. (ಇಲ್ಲಿ ದಶಾಂಗುಲವೆಂಬ ಪದವು ಉಪಲಕ್ಷಣವಿಧಿಯಿಂದ ಪರಬ್ರಹ್ಮವಸ್ತುವಿನಪೇಕ್ಷೆ ಈ ಜಗತ್ತು ಅಲ್ಪಪರಿಮಾಣವುಳ್ಳದ್ದು ಎಂಬರ್ಥವನ್ನು ಕೊಡುವುದು) ಅನೇಕ ಕಲ್ಪಗಳಲ್ಲಿ ಕಳೆದುಹೋದ ಸಕಲ ಜಗತ್ತೂ ಮುಂದೆ ಬರುವ ಅಖಂಡ ಬ್ರಹ್ಮಾಂಡ ಇವೆಲ್ಲವೂ ಪರಶಿವಸ್ವರೂಪಗಳೇ. ಈ ಪ್ರಪಂಚದಲ್ಲಿ ನಡೆಯುವ ಸಕಲ ಕಾರ್ಯಜಾಲವೂ ಈ ಪರಶಿವನ ಮಹಿಮೆಯೇ. ಇವನಿಗಿಂತ ಮಹಿಮೆಯಲ್ಲಿ ದೊಡ್ಡವನಾದವನು ಪ್ರಪಂಚದಲ್ಲಿ ಯಾರೂ ಇಲ್ಲ. ॥೯-೧೦॥

ಪ್ರಪಂಚರಕ್ಷಣೆಗಾಗಿ ವಾಯುವು ಬೀಸುವುದೂ, ಸೂರ್ಯಚಂದ್ರಾಗ್ನಿಗಳು ಪ್ರಕಾಶಾದಿಗಳನ್ನೊದಗಿಸುವುದೂ ಈ ಪರಶಿವನ ಮೇಲಿನ ಭಯದಿಂದಲೇ. ಪರಶಿವ

ತಮಾಹುರೇಕಂ ಪುರುಷಂ ಜ್ಯೋತಿಷಾಂ ಜ್ಯೋತಿರೀಶ್ವರಂ ।
ಹಿರಣ್ಯಬಾಹುಮೀಶಾನಂ ಸರ್ವಾಂಗೇನ ಹಿರಣ್ಮಯಂ ॥೧೩॥

ಏಕೋತ್ತರಾದಿತ್ಯಗತೋ ನೀಲಗ್ರೀವೋ ವಿಲೋಹಿತಃ ।
ಬಭ್ರುಶ್ಚಾಯಂ ಮಹಾದೇವ ಉಗ್ರೋಽಯಂ ಚ ಸುಮಂಗಲಃ ॥೧೪॥

ಯೋ ವೈ ರುದ್ರಃ ಸ ಭಗವಾನ್ ಗೀತಶ್ಚಾಥರ್ವಣೋತ್ತಮೈಃ ।
ಅನ್ನಾನಾಂ ಚ ಪತಿಶ್ಶಂಭುಃ ಕ್ಷೇತ್ರಾಧಿಪತಿರೀಶ್ವರಃ ॥೧೫॥

ಮಿತ್ರಾಧಿಪೋ ಮಹಾದೇವಸ್ತಥಾ ಧನಪತಿಶ್ಶಿವಃ ।
ಭೂಮಾನಂದಘನೋ ಹ್ಯಾತ್ಮಾ ಸಾಮ್ನಾ ಗೀತೋ ಮಹೇಶ್ವರಃ ॥೧೬॥

---

ನಾಮಸ್ಮರಣೆಯಿಂದ ಮೃತ್ಯುದೇವತೆಯೂ ಸಹ ಹೆದರಿ ಓಡುವುದು. ಮಾನವ ಧರ್ಮವನ್ನಾಶ್ರಯಿಸಿದಾಗ ಈ ಮಹಾದೇವನಿಗೆ ಕೈ, ಕಾಲು ಮುಂತಾದ ಅವಯವಗಳು ಗೋಚರವಾದರೂ ವಾಸ್ತವಿಕವಾಗಿ ಇವನಿಗೆ ಕೈ ಕಾಲುಗಳೆ ಮುಂತಾದ ಯಾವ ಅವಯುವಗಳೂ ಇಲ್ಲ. ಈ ಪರಮಾತ್ಮನು ಪ್ರಪಂಚದ ಸಕಲ ಆಗುಹೋಗುಗಳನ್ನೆಲ್ಲಾ ಅರಿತಿದ್ದರೂ ಇವನ ಸ್ವರೂಪವನ್ನು ಮಾತ್ರ ಯಾರೂ ಕಾಣರು. ॥೧೧-೧೨॥

ಪ್ರಪಂಚದಲ್ಲಿ ಕಂಡುಬರುವ ಸಕಲ ತೇಜಸ್ಸುಗಳಿಗೂ ತೇಜೋರೂಪಿಯಾಗಿರುವವನು ಈ ಪರಮಾತ್ಮನು. ಈತನೇ ಸಕಲರಿಗೂ ನಿಯಾಮಕನು. ಸುವರ್ಣಾಭರಣಗಳಿಂದ ರಂಜಿತವಾದ ಬಾಹುದ್ವಯವುಳ್ಳವನು. ಸರ್ವಾಂಗಗಳಲ್ಲಿಯೂ ಹಿರಣ್ಯವನ್ನು ಧರಿಸಿರುವವನು. ಈತನು ಸೂರ್ಯಮಂಡಲಾಂತರ್ವರ್ತಿಯಾಗಿಯೂ ವಿಷಪಾನದಿಂದ ನೀಲವರ್ಣವಿಶಿಷ್ಟವಾದ ಕಂಠವುಳ್ಳವನಾಗಿಯೂ, ವಿಶೇಷವಾಗಿ ರಕ್ತವರ್ಣದಿಂದ ರಂಜಿಸುವವನಾಗಿಯೂ ಕಂಡುಬರುವನು. ಕೆಲವು ಕಾಲದಲ್ಲಿ ಬೂದುವರ್ಣದಿಂದ ರಂಜಿಸುವವನು ಮತ್ತು ನಾನಾ ವರ್ಣಗಳಿಂದ ವಿರಾಜಿಸುವವನು. ಮಹಾದೇವನು ಉಗ್ರಸ್ವರೂಪಿಯು. ॥೧೩-೧೪॥

ಷಡ್ಗುಣೈಶ್ವರ್ಯಸಂಪನ್ನನಾದ ಈ ರುದ್ರನು ಅಥರ್ವಣವೇದದಿಂದ ಅತಿಯಾಗಿ ಸ್ತುತಿಸಲ್ಪಡುವವನು. ಸಕಲವಿಧವಾದ ಆಹಾರವಸ್ತುಗಳಿಗೂ, ಆಹಾರ ಧಾನ್ಯಗಳನ್ನು ಒದಗಿಸುವ ಸಕಲ ಕ್ಷೇತ್ರಗಳಿಗೂ ಈತನೇ ಒಡೆಯನೆನಿಸಿದವನು. ಸೂರ್ಯನಿಗೂ, ಸಕಲವಿಧವಾದ ಐಶ್ವರ್ಯಗಳಿಗೂ ಈತನೇ ಅಧಿಪತಿಯು.

ಏಷ ಬ್ರಹ್ಮೈಷ ಏವೇಂದ್ರೋ ಋಗ್ಭಿರ್ಗೀತೋ ಹರೋವ್ಯಯಃ ।
ನಮಸ್ತೇ ರುದ್ರ ಇತ್ಯಾದಿ ವಾಕ್ಯೈಶ್ಚ ಯಜುಷೋದ್ಭವೈಃ ॥೧೭॥

ಇತಿಹಾಸಪುರಾಣೇಷು ಈಶೋ ಗೀತಃ ಪುರಾತನೈಃ ।
ಮಹೋಪನಿಷದಾಂ ಸಾರೈರಯಮೇವ ಹಿ ಗೀಯತೇ ॥೧೮॥

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಹೃತ್ತಮೋ ನಾಶನಂ ತಸ್ಯ ಜ್ಞಾನಾದೇವ ಹಿ ಜಾಯತೇ ॥೧೯॥

ನ ಪ್ರಾಣೋ ನ ಮನಶ್ಚಾಯಂ ಅಸಂಗಃ ಸಂಗವತ್ ಸ್ಥಿತಃ ।
ಸಹೈವ ಸಂತಮಪ್ಯೇನಂ ನ ದೇವಾ ನ ಮಹರ್ಷಯಃ ॥೨೦॥

---

ಅತಿಶಯವಾದ ಆನಂದರಾಶಿಸ್ವರೂಪನು ಮತ್ತು ಸಾಮಗಾನದಿಂದ ವಿಶೇಷವಾಗಿ ಗಾನಮಾಡಲ್ಪಟ್ಟವನು. ಸಕಲರಿಗೂ ಒಡೆಯನೆನಿಸಿದವನು. ॥೧೫-೧೬॥

ಈತನೇ ಬ್ರಹ್ಮನು. ಇಂದ್ರನೆಂದು ಹೇಳಿಸಿಕೊಳ್ಳುವವನೂ ಇವನೇ. ಋಗ್ವೇದದಿಂದ ಸಂಪೂರ್ಣವಾಗಿ ಸ್ತುತ್ಯನಾಗಿರುವವನೂ ಇವನೇ. ನಾಶರಹಿತನೆನಿಸಿ ಸರ್ವರ ಪಾಪಹರನಾಗಿ, ನಮಸ್ತೇ ರುದ್ರಮನ್ಯವೆ ಮುಂತಾದ ಯಾಜುಷವಾದ ರುದ್ರಾಧ್ಯಾಯದಿಂದ ಸ್ತುತಿಸಲ್ಪಡುವವನೂ ಇವನೇ. ಈ ಸದಾಶಿವನನ್ನು ಪುರಾತನ ಮಹರ್ಷಿಗಳು, ಇತಿಹಾಸ ಪುರಾಣಾದಿಗಳಲ್ಲಿ ಈಶ್ವರನೆಂದು ಬಹಳವಾಗಿ ವರ್ಣಿಸಿರುವರು. ಸಕಲ ಉಪನಿಷತ್ತುಗಳ ಸಾರಭೂತನಾದ ಇವನನ್ನು ವೇದವೇದಾಂತಗಳೆಲ್ಲವೂ ನಾನಾರೀತಿಯಲ್ಲಿ ಸ್ತೋತ್ರಗೈಯ್ಯುತ್ತಿರುವುವು. ॥೧೭-೧೮॥

ಈ ಪರಶಿವನ ನೈಜಸ್ವರೂಪವನ್ನು ತಿಳಿಯುವ ಜ್ಞಾನಿಗೆ ಹೃದಯಕುಹರದಲ್ಲಿ ಪರಮಾತ್ಮ ಜ್ಞಾನವಿಷಯಕವಾದ ಆನಂದವು ಹೆಚ್ಚಿ ಅನಾದಿಕಾಲದಿಂದ ಪ್ರವೃತ್ತವಾಗಿರುವ .ದೃಢತರವಾಸನಾಪ್ರಚಯವು ನಾಶವಾಗುವುದು. ಅವನಿಗೆ ಬರುವ ಸಕಲ ಸಂಶಯಗಳೂ ನಿವಾರಣೆಹೊಂದುವುವು. ಮನೋಗತವಾದ ಸಕಲ ತಾಮಸ ಗುಣಗಳೂ ನಾಶವಾಗುವುವು. ನಿಜವಾಗಿಯೂ ಈ ಮಹಾದೇವನು ಪ್ರಾಣರೂಪಿಯಾಗಲಿ, ಮನೋರೂಪಿಯಾಗಲಿ ಅಲ್ಲ. ಸರ್ವಸಂಗವು ಇವನಲ್ಲಿ ಕಂಡುಬಂದರೂ ನಿಜವಾಗಿಯೂ ಯಾವ ವಸ್ತುವಿನ ಸಂಬಂಧವೂ ಇವನಿಗಿರುವುದಿಲ್ಲ. ಸದ್ವಸ್ತುವಾಗಿದ್ದರೂ (ನಾಶವಿಲ್ಲದ ವಸ್ತು) ಇವನನ್ನು ಯಾವ ದೇವತೆಗಳೇ ಆಗಲಿ, ಮಹರ್ಷಿಗಳೇ ಆಗಲಿ ಪೂರ್ಣವಾಗಿ ಅರಿಯಲಾರರು. ॥೧೯-೨೦॥

ನ ವಿದುರ್ಬ್ರಹ್ಮವಿಷ್ಣ್ವಾದ್ಯಾಃ ಸೇಂದ್ರರುದ್ರಾರ್ಕವಾಯವಃ ।
ಯತಃ ಪ್ರಸೂಯತೇ ವಿಶ್ವಂ ಬ್ರಹ್ಮವಿಷ್ಣ್ವೀಶಪೂರ್ವಕಂ ॥೨೧॥

ಸ ಧ್ಯೇಯಃ ಪರಮೇಶಾನೋ ಆಕಾಶೇ ದಹರೇ ಹರಃ ।
ಸರ್ವೇ ಭೀತಾಃ ಪ್ರಮುಹ್ಯಂತಿ ದೃಷ್ಟ್ವಾ ಭೂವ್ಯೋರ್ಯ ಆಂತರಃ ॥೨೨॥

ಅನಂತೋಹ್ಯವ್ಯಯಾತ್ಮಾಯಂ ಪುರುಷಃ ಪ್ರಕೃತೇಃ ಪರಃ ।
ಯಮಜ್ಞಾತ್ವಾ ಮಹಾದೇವಂ ಮೋಹಿತಾಸ್ಸಸುರಾಸುರಾಃ ॥೨೩॥

ಆತ್ಮಾನಂ ಮನ್ಯತೇ ಸರ್ವೇ ದೇಹಾಹಂಕಾರಸಂವೃತಾಃ ।
ಮಾಯಯಾ ದೇವದೇವಸ್ಯ ಚಿತ್ರಲೀಲಸ್ಯ ವರ್ತಿನಃ ॥೨೪॥

ಜಿತಮಾಯಃ ಸ ಏವೇಶಃ ಸ ಕಾರಣಮುಮಾಪತಿಃ ।
ಸ ನಿತ್ಯೋಽನಿತ್ಯಭೂತಾನಾಂ ಚೇತನಾನಾಂ ಸ ಚೇತನಃ ॥೨೫॥

---

ಬ್ರಹ್ಮ, ವಿಷ್ಣು, ಇಂದ್ರ, ರುದ್ರ, ಅರ್ಕ, ವಾಯು ಇವರೇ ಮೊದಲಾದ ಯಾವ ದೇವತೆಗಳೂ ಇವನ ಸ್ವರೂಪವನ್ನು ಪೂರ್ಣವಾಗಿ ಅರಿಯಲಾರರು. ಏಕೆಂದರೆ ಇವರೆಲ್ಲರೂ ಇವನಿಂದ ಉತ್ಪನ್ನರಾದವರೇ. ಇವನು ಸರ್ವದಾ ಭೂವ್ಯಂತರಿಕ್ಷಗಳ ಮಧ್ಯದಲ್ಲಿ, ಆಕಾಶಮಧ್ಯೆ ವ್ಯಾಪಿಸಿರುವನೆಂದು ಸರ್ವದಾ ಧ್ಯಾನಮಾಡಬೇಕು. ಇವನನ್ನು ನೋಡಿದೊಡನೆಯೇ ಈ ದೇವತೆಗಳೆಲ್ಲರೂ ಹೆದರಿ ಓಡಿಹೋಗ ತೊಡಗುವರು. ॥೨೧-೨೨॥

ಈ ಮಹಾದೇವನಿಗೆ ಆದ್ಯಂತಗಳಿಲ್ಲ. ಪ್ರಕೃತಿಗಿಂತ ಪ್ರತ್ಯೇಕವಾಗಿ ಕಾಣುವ ಪುರುಷನೇ ಈತನು. ಇವನ ಸ್ವರೂಪವನ್ನು ಅರಿಯಲಾರದೆ ಸಕಲ ದೇವರಾಕ್ಷಸರೂ ಮೋಹಗ್ರಸ್ತರಾಗಿರುವರು. ಮಾಯಾವಿಶಿಷ್ಟನಾಗಿ ಚಿತ್ರವಿಚಿತ್ರವಾದ ಲೀಲೆಗಳಿಂದ ಪ್ರಪಂಚರೂಪದಿಂದ ತೋರಿಬರುವ ಈತನ ಸ್ವರೂಪವನ್ನು ಅರಿಯದೆ ಮಮಕಾರ ದಿಂದ ಮುಂದುವರಿಯುವ ಅಜ್ಞಾನಿಗಳು ಈ ಮಹಾದೇವನನ್ನು ಪ್ರಪಂಚಾತಿರಿಕ್ತ ವಾಗಿರುವ ಆತ್ಮವಸ್ತುವೆಂದು ತಿಳಿಯುವರು. ॥೨೩-೨೪॥

ಪ್ರಪಂಚದಲ್ಲಿ ಮಾಯಾವಸ್ತುವನ್ನು ಜಯಿಸಿದವನು ಇವನೊಬ್ಬನೇ. ಉಪಾಧಿಭೇದದಿಂದ ಕಾರಣವಸ್ತುಗಳುಳ್ಳವನಾಗಿ ಕಂಡುಬರುವವನೂ, ಗೌರೀಪತಿ ಯೆಂದು ಹೇಳಿಸಿಕೊಳ್ಳುವವನೂ ಈ ಪರಶಿವನೇ. ಪ್ರಪಂಚರಚನೆಗೆ ಮುಖ್ಯ

ಸ ಕಾರಣಂ ಕಾರಣಾನಾಂ ಪತ್ತೀನಾಂ ಪತಿರೀಶ್ವರಃ ।
ಜಗತಃ ಕಾಲರೂಪಸ್ಯ ಕಾಲಕಾಲೋ ಮಹೇಶ್ವರಃ ॥೨೬॥

ಮಹಾಗ್ರಾಸೋಽಯಮೀಶಾನೋ ಯಸ್ಯೋದನಮಹರ್ನಿಶಂ ।
ಬ್ರಹ್ಮಕ್ಷತ್ರಾತ್ಮಕಂ ವಿಶ್ವಂ ಮೃತ್ಯುರ್ಯಸ್ಯೋಪಸೇಚನಂ ॥೨೭॥

ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನುಷಾಃ ।
ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥೨೮॥

ಯದಾ ತಮೋಽಸ್ತಂ ನ ದಿವಾ ನ ರಾತ್ರಿಃ
ನಾಸನ್ನ ಸನ್ನಿವಸ್ಸ್ವಯಂ ।
ಸ ಚಾಕ್ಷರೋ ನಿತ್ಯಮಲುಪ್ತಶಕ್ತಿಃ
ಧಾತಾ ವಿಧಾತಾ ಪರಮೋಽಥ ಸಂದೃಕ್ ॥೨೯॥

---

ಕಾರಣವಾಗಿರುವ ಸಕಲ ವಸ್ತುಗಳಿಗೂ ಈತನೇ ಮೂಲಕಾರಣನು. ಸಕಲ ಸೈನ್ಯಗಳಿಗೂ ಸಮಸ್ತ ಜಗತ್ತಿಗೂ ಒಡೆಯನೆನಿಸಿ ಮಹಾದೇವನು ಮೃತ್ಯುವಿಗೂ ಮೃತ್ಯುವಿನಂತೆ ತೋರಿಬರುವನು. ॥೨೫-೨೬॥

ಸರ್ವವನ್ನೂ ಕಬಳಿಸುವ ಪರಶಿವನಿಗೆ ಬ್ರಹ್ಮಕ್ಷತ್ರಾತ್ಮಕವಾದ ಈ ಜಗತ್ತೇ ಪ್ರತಿನಿತ್ಯದ ಭೋಜನವಸ್ತುವಾಗುವುದು. ಮೃತ್ಯುದೇವತೆಯು ಉಪಸೇಚನ (ನೆಂಚಿಕೊಳ್ಳುವ ವಸ್ತು) ವೆನಿಸುವುದು. ಆಕಾಶಾಂತರ್ಗತವಾದ ಚತುರ್ದಶ ಲೋಕಗಳಲ್ಲಿರುವ ಜನರು ಚರ್ಮದಿಂದ ಆವೃತವಾದ ವಸ್ತುವಿನಂತೆ ಗೂಢವಾಗಿರುವ ಈ ಪರಶಿವವಸ್ತುವನ್ನು ಕಾಣದೆ, ಸದಾ ದುಃಖರಾಶಿಯಲ್ಲಿ ಬಿದ್ದು ಒದ್ದಾಡುತ್ತಿರುವರು. ॥೨೭-೨೮॥

ಪರಬ್ರಹ್ಮವಸ್ತುವಿಗೆ ಕಾಲದೇಶವಸ್ತುಗಳಿರುವುದಿಲ್ಲ. ಕತ್ತಲೆ, ಬೆಳಕು, ಹಗಲು, ರಾತ್ರಿ ಎಂಬ ಔಪಾಧಿಕವಾದ ಯಾವ ಪರಿಚ್ಛಿನ್ನಕಾಲವೂ ಆತ್ಮನಿಗಿಲ್ಲ. ಆತ್ಮನಿಲ್ಲ. ಇರಲಿಲ್ಲ. ಇರುವುದಿಲ್ಲ ಎಂಬ ವ್ಯವಹಾರವೇ ಎಂದಿಗೂ ನಡೆಯಲಾರದು. ನಾಶರಹಿತನಾಗಿಯೂ ಸ್ವಯಂಶುದ್ಧನಾಗಿಯೂ ಧಾತೃ, ವಿಧಾತೃ, ಜ್ಞಾನಿ ಎಂಬ ವ್ಯವಹಾರಗಳಿಗೆ ದೊರೆಯುವವನಾಗಿಯೂ ಇರುವ ಆತ್ಮವಸ್ತುವನ್ನು ಜ್ಞಾನಿಗಳು ಸದಾ ಸಾಕ್ಷಾತ್ಕರಿಸುತ್ತಲಿರುವರು. ಆತ್ಮನೇ ಉಪಾಧಿಭೇದದಿಂದ ನಾನಾ ಆಕಾರ

ಪ್ರಪಂಚಪಂಚೀಕರಣೇ ನಿರತಾ ಯೇ ಶಿವಂ ವಿನಾ ।
ತೇ ವಂಚಿತಾ ಮಹೇಶೇನ ಸರ್ವೇ ಚೈವ ಸುರಾಸುರಾಃ ॥೩೦॥

ಪರಿವಂಚಕ ಈಶಾನೋ ದೇವದೇವಸ್ತ್ರಿಶೂಲಭೃತ್ ।
ಯ ಏನಂ ವಿದುರೀಶಾನಮಮೃತಾಸ್ತೇ ಭವಂತಿ ವೈ ॥೩೧॥

ಅಥೇತರೇ ದುಃಖಸಂಯುಕ್ತಾಃ ಸಂಸಾರವಶವರ್ತಿನಃ ।
ಜರಾಮರಣಸಂಯುಕ್ತಾಃ ಷಡೂರ್ಮಿಪರಿಮೋಹಿತಾಃ ॥೩೨॥

ದೇಹಾತ್ಮವಾದಿನಸ್ಸರ್ವೇ ಈಷಣಾಭಿರ್ವಿಮೋಹಿತಾಃ ।
ತಾಪತ್ರಿತಯಮಧ್ಯಸ್ಥಾಃ ಸ್ವಸ್ಥಾ ಭ್ರಾಂತಿಸಮಾಕುಲಾಃ ॥೩೩॥

---

ಗಳನ್ನೂ ಭಿನ್ನಭಿನ್ನವಾದ ಅವಸ್ಥೆಗಳನ್ನೂ ಪಡೆದು ಪ್ರಪಂಚರೂಪದಲ್ಲಿ ಕಂಡುಬರುತ್ತಿರುವನು. ॥೨೯॥

ಲೋಕದಲ್ಲಿ ಯಾವ ಜನರು ಶಿವಾರಾಧನೆಯಿಲ್ಲದೆ ಶಿವಜ್ಞಾನದ ಅರಿವಿಲ್ಲದೇ ಕೇವಲ ಲೌಕಿಕವ್ಯಾಪಾರವಲ್ಲಿಯೇ ನಿರತರಾಗುವರೋ ಅಂತಹವರು ಶಿವಮಾಯೆಗೆ ಸಿಕ್ಕಿದವರೆಂದು ತಿಳಿಯಬೇಕು. ಸರ್ವವಸ್ತುಗಳಲ್ಲಿಯೂ ಮಾಯೆಯನ್ನೊಡ್ಡುವವನೇ ಪರಿವಂಚಕನು. ಹಾಗಿದ್ದೂ ದೇವದೇವನೆನಿಸಿ, ತ್ರಿಶೂಲಧಾರಿಯಾಗಿರುವ ಪರಶಿವನನ್ನು ಯಾರು ಸಂಪೂರ್ಣವಾಗಿ ಅರಿಯುವರೋ ಅವರು ಅಮೃತರಾಗುವರು ಅಂದರೆ ಮರಣರಹಿತರಾಗಿ ದೇವತೆಗಳೆನಿಸುವರು. ॥೩೦-೩೧॥

ಯಾರು ಶಿವಜ್ಞಾನಬಾಹಿರರಾಗುವರೋ, ಅವರು ಸಂಸಾರದ ಕಷ್ಟ ಸುಖಗಳಿಗೆ ಮೈಕೊಟ್ಟು ಜರಾಮರಣಗಳಿಗೆ ಸಿಕ್ಕಿ, ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮೃತ್ಯುಗಳೆಂಬ ಷಡೂರ್ಮಿಗಳಿಂದ ಬಳಲಿ ವಿಶೇಷವಾಗಿ ಪರಿತಪಿಸುವರು. ಮತ್ತು ತಮ್ಮ ದೇಹವನ್ನೇ ಆತ್ಮವೆಂದು ವಾದಿಸುವ ಮನುಷ್ಯರು, ಸರ್ವದಾ ಆತುರ ಮತ್ತು ಕ್ಲೇಶಗಳಿಗೆ ಸಿಕ್ಕಿ, ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ತಾಪತ್ರಯಗಳಿಂದ ಪರಿತಪಿಸುತ್ತಾ ಸರ್ವದಾ ಭ್ರಾಂತಚಿತ್ತರಾಗಿ ಗೋಳಾಡುವರು. ॥೩೨-೩೩॥

ಜಾಯಂತೇ ಚ ಮ್ರಿಯಂತೇ ಚ ಕೀಟಾ ಇವ ಸುರಾ ನರಾಃ ।
ವಾನರಾ ಇವ ಸರ್ವೇಽಪಿ ಪಾಮರಾ ದುಃಖಭಾಗಿನಃ ॥೩೪॥

ಯಸ್ಯ ರೂಪಂ ಮುನೇ ಸರ್ವಂ ಜಗದೇತಚ್ಚರಾಚರಂ ।
ಭೂಮಿರಾಪೋಽನಲೋ ವಾಯುರಾಕಾಶವ್ಯೋಮಕೇಶಭಾಕ್ ॥೩೫॥

ಕೋ ಹಿ ತದ್ವೇದ ದೇವಸ್ಯ ಮಹಿಮಾನಂ ಪಿನಾಕಿನಃ ।
ಯಜಂತಿ ಯಾಗೈರ್ನಿಯತಾ ಯಜಮಾನಾ ಮಹೇಶ್ವರಂ ॥೩೬॥

ಭಿಕ್ಷವಃ ಕಕ್ಷವಃ ಸಂತಿ ವೇದಾಂತೈಶ್ಚ ವಿಜಾನತೇ ।
ಯೋಗಿನೋ ಯುಂಜತೇ ಯೋಗಂ ಯದ್ವಿಜ್ಞಾನಾರ್ಥಮೇವ ಹಿ॥೩೭॥

ನಾನಾವರ್ಣಾಶ್ರಮೈರ್ಧರ್ಮೈರಿಷ್ಟಾಪೂರ್ತೈರುಪಾಸತೇ ।
ಮಂತ್ರೈರ್ಮಂತ್ರವಿದಃ ಸಾಂಬಮುಪಾಸಂತೇ ಮಹೇಶ್ವರಂ ॥೩೮॥

ಲೇಭಿರೇ ಸ್ವಪದಾನ್ಯೇವ ಯಸ್ಯ ಲಿಂಗಾರ್ಚನೇನ ಹಿ ।
ಬ್ರಹ್ಮವಿಷ್ಣ್ವಾದಯೋ ರುದ್ರಾ ಮುನಯೋ ಮನವಃ ಸುರಾಃ ॥೩೯॥

---

ಲೋಕದಲ್ಲಿ ಮನುಷ್ಯರು ಮತ್ತು ದೇವತೆಗಳು ಸದಾ ಕೋತಿಗಳಂತೆ ಜನನ ಮರಣಾದಿಗಳಿಗೆ ಸಿಕ್ಕಿ ದುಃಖಪಟ್ಟು ಹುಟ್ಟಿ ಸಾಯುತ್ತಿರುವರು. ಎಲೈ ಜೈಗೀಷವ್ಯನೇ, ಈ ಪರಶಿವನ ಆಕಾರವೇ ಈ ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳಾಗಿ ಪ್ರಸರಿಸಿ ಚರಾಚರಾತ್ಮಕವಾದ ಜಗದ್ರೂಪವನ್ನು ತಾಳಿದೆ ॥೩೪-೩೫॥

ದೇವದೇವನೆನಿಸಿದ ಮಹೇಶ್ವರನ ಸಂಪೂರ್ಣ ಮಹಿಮೆಯನ್ನು ಅರಿಯುವವರು ಯಾರು? ಅನೇಕರು ಈಗಲೂ ಶಿವಪ್ರೀತಿಕರಗಳಾದ ಯಾಗಾದಿಗಳನ್ನು ನೆರವೇರಿಸಿ ಮಹಾದೇವನನ್ನು ಅರ್ಚಿಸುತ್ತಿರುವರು. ಭಿಕ್ಷುಗಳೂ, ಯೋಗಿಗಳೂ ಸದಾ ಮಹೇಶಸ್ವರೂಪ ಜಿಜ್ಞಾಸುಗಳಾಗಿ, ಉಪನಿಷತ್ತುಗಳನ್ನೂ, ಯೋಗಾಭ್ಯಾಸಗಳನ್ನೂ ಅಭ್ಯಾಸಮಾಡುತ್ತಿರುವರು. ॥೩೬-೩೭॥

ಬ್ರಹ್ಮಕ್ಷತ್ರಾದಿ ವರ್ಣಾಶ್ರಮಧರ್ಮಗಳನ್ನು ಪರಿಪಾಲಿಸುತ್ತಾ, ಮಂತ್ರಜ್ಞರಾಗಿ ಅನೇಕ ಜನ ಆಸ್ತಿಕರು ತಮ್ಮ ಇಷ್ಟಾರ್ಥಪ್ರಾಪ್ತಿಗಾಗಿ ಸರ್ವದಾ ಸಾಂಬನನ್ನೇ ಪೂಜಿಸುವರು. ಹಿಂದೆ ಬ್ರಹ್ಮ, ವಿಷ್ಣು, ರುದ್ರ ಮುಂತಾದ ದೇವತೆಗಳೂ, ಮುನಿ

ಅಸುರಾ ನೃಪವರ್ಯಾಶ್ಚ ಗಂಧರ್ವಾಪ್ಸರಸೋರಗಾಃ ।
ವಿಪದ್ಭಿರ್ನೋಚಿತಾ ಏವ ಸಂಪದ್ಭಿಶ್ಚ ನಿಯೋಜಿತಾಃ ॥೪೦॥

ಸರ್ವಂ ವಿಶ್ವಾಧಿಕಸ್ಯೈವ ನಿಶ್ವಾಸಾಜ್ಜಾಯತೇ ಜಗತ್ ।
ಜಾತಂ ಚ ವರ್ಧತೇ ನಿತ್ಯಂ ಸ್ಥೀಯತೇ ಲೀಯತೇಽಸ್ತಿ ಚ ॥೪೧॥

ಯಸ್ಯಾಷ್ಟಮೂರ್ತಿಭಿರ್ವ್ಯಾಪ್ತಂ ಜಗದೇತತ್ರಿಶೂಲಿನಃ ।
ಅಗ್ನಿಶ್ಚೈವ ಉಮಾ ಸೋಮೋ ಆಭ್ಯಾಂ ವ್ಯಾಪ್ತಂ ಜಗತ್ರಯಂ ॥೪೨॥

ಅಗ್ನೀಷೋಮಾತ್ಮಕಂ ವಿಶ್ವಂ ಜಾನಂತಿ ಪರಮರ್ಷಯಃ ।
ನ ದೇವಾಂಕಯುತಂ ಚೈವ ಭಗಲಿಂಗಾಂಕಿತಂ ಸದಾ ॥೪೩॥

ಪುಂಪ್ರಕೃತ್ಯೋರಿದಂ ರೂಪಂ ತಸ್ಮಾಚ್ಛಿವಮಯಂ ಜಗತ್ ।
ಅನಂಗಮಾತಂಗಹರೋ ಹಾರಾಣಾಂ ಹೃದಯೇ ಸ್ಥಿತಃ ॥೪೪॥

---

ಜನರೂ, ಮನುಗಳೂ ಶಿವಲಿಂಗಾರ್ಚನೆ ಮಾಡಿಯೇ ತಮ್ಮ ತಮ್ಮ ಸ್ಥಾನಗಳನ್ನು ಪಡೆದು ಅದನ್ನು ರಕ್ಷಿಸಿಕೊಂಡಿರುವರು. ॥೩೮-೩೯॥

ರಾಕ್ಷಸರೂ, ಅನೇಕ ರಾಜಶ್ರೇಷ್ಠರೂ, ಗಂಧರ್ವಾಪ್ಸರಸ್ಸುಗಳೂ ಶಿವಲಿಂಗಾರ್ಚನೆ ಮಾಡಿ, ತಮ್ಮ ಕಷ್ಟಗಳಿಂದ ಪಾರಾಗಿ ಸಂಪದ್ವಿಶಿಷ್ಟರಾಗಿರುವರು. ಪ್ರಪಂಚಕ್ಕೆ ದೂರನಾಗಿರುವ ಪರಶಿವನ ನಿಶ್ವಾಸವೇ ಈ ಜಗತ್ತು. ಈ ಜಗತ್ತಿನ ಉತ್ಪತ್ತಿಯು ಪರಶಿವನ ನಿಶ್ವಾಸದಿಂದ ನಡೆದಂತೆಯೇ, ರಕ್ಷಣೆಯೂ ಹಾಗೆಯೇ ಲಯವೂ ಪರಶಿವಾನುಗ್ರಹದಿಂದ ನಡೆದುಹೋಗುವುದು. ॥೪೦-೪೧॥

ಪರಮೇಶ್ವರನ ಜಲಾದಿ ಅಷ್ಟಮೂರ್ತಿಗಳಿಂದಲೇ ಈ ಜಗತ್ತು ಪರಿಪೂರ್ಣವಾಗಿದೆ. ಶಿವನು ಅಗ್ನಿರೂಪದಿಂದಲೂ, ಪಾರ್ವತಿಯು ಸೋಮ (ಚಂದ್ರ) ರೂಪದಿಂದಲೂ ಜಗತ್ರಯವನ್ನೂ ವ್ಯಾಪಿಸಿರುವರು. ಆದರಿಂದಲೇ ಈ ಜಗತ್ತು ಅಗ್ನೀಷೋಮಾತ್ಮಕವೆಂದು ಮಹರ್ಷಿಗಳು ತಿಳಿದಿರುವರು. ಇಂತಹ ಪ್ರಪಂಚವು ಕೇವಲ ಭಗ ಮತ್ತು ಲಿಂಗಗಳಿಂದ ಅಭಿವೃದ್ಧವಾಗುತ್ತಿರುವುದೇ ಹೊರತು ಮತ್ತಾವ ದೇವರ ಗುರುತುಗಳಿಂದಲೂ ಇದು ಗುರುತಿಸಲ್ಪಟ್ಟಿಲ್ಲ. ॥೪೨-೪೩॥

ಸಾಂಖ್ಯರು ಹೇಳುವ ಪ್ರಕೃತಿ ಮತ್ತು ಪುರುಷ ಇವರಿಬ್ಬರೂ ಈ ಪರಶಿವನ ರೂಪುಗಳೇ. ಮನ್ಮಥನೆಂಬ ಮದ್ದಾನೆಯನ್ನು ನಾಶಪಡಿಸಿ, ಅವರ ಹೃದಯಕುಹರ

ಸ ಪರಃ ಪುರುಷಃ ಪ್ರಾಣಃ ಪರಮಾತ್ಮಾ ಶಿವಸ್ಸ್ವಯಂ ।
ಅದ್ವೈತೋಽಯಂ ಚತುರ್ಥೋಽಯಂ ಪಂಚಕೋಶಾತಿಗೋಹ್ಯಯಂ॥೪೫॥

ಯಸ್ಮಾದ್ಬ್ರಹ್ಮಾ ತಥಾ ರುದ್ರೋ ವಿಷ್ಣುರ್ವಿಶ್ವಂ ಪ್ರಜಾಯತೇ ।
ಸರ್ವಮನ್ಯತ್ಪರಿತ್ಯಜ್ಯ ಧ್ಯೇಯಸ್ಸಾಂಬಸ್ತ್ರಿಲೋಚನಃ ॥೪೬॥

ಉಮಾಸಹಾಯೋ ಭಗವಾನ್ ಮಾಯಯಾ ಮಾಯಿನಾ ಸ ಈಶ್ವರಃ ।
ಮಂಗಳಾಪತಿರೀಶಾನೋ ಭಕ್ತಾನಾಂ ಮಂಗಲಪ್ರದಃ ॥೪೭॥

ಅಮಂಗಲಹರಸ್ಯೈವ ಭಕ್ತ್ಯಾ ಭಕ್ತೈರುಪಾಸಿತಃ ।
ಸರ್ವೇಶ್ವರೋ ಮಹಾದೇವಃ ಸರ್ವೈಶ್ವರ್ಯಸಮನ್ವಿತಃ ॥೪೮॥

ಜಿತಮಾಯೋ ಮಹಾದೇವಸ್ತಸ್ಯ ಮಾಯಾಜಿತಾಸ್ಸುರಾಃ ।
ಕ್ಷೇತ್ರಾಣಾಂ ಚ ಪತಿರ್ದೇವಃ ಪಶುಪಾಶವಿನಾಶಕಃ ॥೪೯॥

---

ದಲ್ಲಿ ಸ್ಥಿರವಾಗಿ ನಿಲ್ಲುವವನು ಈ ಮಹಾದೇವನೇ. ಪ್ರಕೃತಿಭಿನ್ನನಾದ ಪುರುಷನಿಗಿಂತಲೂ ಪ್ರತ್ಯೇಕನಾಗಿರುವವನೂ, ಪ್ರಾಣರೂಪದಿಂದಲೂ, ಪರಮಾತ್ಮರೂಪದಿಂದಲೂ ವಿಹರಿಸುವವನು ಈ ಶಿವನೇ. ದ್ವಿತೀಯವಸ್ತುರಹಿತನಾಗಿ, ಸ್ಥೂಲ ಸೂಕ್ಷ್ಮ ಕಾರಣಾತಿರಿಕ್ತವಾದ ಅವಸ್ಥೆಯಲ್ಲಿ ಅನ್ನಮಯಾದಿ ಪಂಚಕೋಶಗಳಿಂದ ಆವೃತನಾಗದೆ ಕೇವಲ ಆನಂದರೂಪದಿಂದಿರುವವನೆಂದರೆ ಈ ಪರಶಿವನೇ. ||೪೪-೪೫||

ಪರಮೇಶ್ವರನಿಂದಲೇ ಬ್ರಹ್ಮ, ರುದ್ರ, ವಿಷ್ಣು, ಅಖಂಡವಾದ ಈ ಪ್ರಪಂಚ ಇವೆಲ್ಲವೂ ಉತ್ಪನ್ನವಾಗಿವೆ. ಆದ್ದರಿಂದಲೇ ಸರ್ವರೂ ಸಕಲ ದೇವತೆಗಳನ್ನೂ ಬಿಟ್ಟು ತ್ರಿಲೋಚನನಾದ ಪರಶಿವನನ್ನೇ ಧ್ಯಾನಿಸಬೇಕು. ಪಾರ್ವತೀಪತಿಯಾಗಿದು ಕಲ್ಯಾಣಗುಣಪರಿಪೂರ್ಣನಾಗಿ, ಮಾಯಾರೂಪದಿಂದಲೂ, ಮಾಯಾಸಹಿತನಾಗಿ ಪ್ರಪಂಚರೂಪದಿಂದಲೂ, ಈ ಪರಶಿವನು ವ್ಯವಹಾರಯೋಗ್ಯನಾಗಿರುವನು. ಮಂಗಳಾಪತಿಯಾದ ಶಂಕರನು ತನ್ನ ಭಕ್ತರಿಗೆ ಸರ್ವದಾ ಮಂಗಳಪ್ರದನಾಗಿಯೇ ಕಂಡುಬರುವನು. ||೪೬-೪೭||

ಭಕ್ತರು ಭಕ್ತಿಯಿಂದ ಪರಶಿವನನ್ನು ಪೂಜಿಸುವುದು ಕೇವಲ ಅಮಂಗಳ ಪರಿಹಾರಕ್ಕಾಗಿಯೇ. ಸರ್ವೇಶ್ವರನಾದ ಮಹಾದೇವನು ಸಕಲ ಐಶ್ವರ್ಯಗಳಿಂದಲೂ ಕೂಡಿದವನಾಗಿ ಭಕ್ತರನ್ನು ಕಾಪಾಡುವನು. ತಾನು ಮಾಯೆಯನ್ನು ಜಯಿಸಿ,

ಮಾಯಾಪಾಶೈರ್ನಿಬಧ್ನಾತಿ ಜಗತ್ಸಾಸುರಮಾನುಷಂ ।
ಮೋಚಯೇದಂಬಿಕಾನಾಥಃ ಪಾಶೇಭ್ಯಃ ಸಸುರಾಸುರಂ ॥೫೦॥

ಭಕ್ತ್ಯಾ ಪ್ರಸಾದಿತೋ ದೇವಃ ಸಾಕ್ಷಾತ್ಪಶುಪತಿಶ್ಶಿವಃ ।
ಯಸ್ಯ ನಿಶ್ವಾಸಪವನಾ ವೇದಾ ಮಾನಂ ಮುನೀಶ್ವರಾಃ ॥೫೧॥

ಯಸ್ಸೋಮಭಾಗೈರಿಜ್ಯೇತ ಸೋಮಃ ಸೋಮಾರ್ಧಶೇಖರಃ ।
ಪಾರ್ವತೀನಾಯಕೋ ನೇತಾ ಸ್ಥಾವರಸ್ಯ ಚರಸ್ಯ ಚ ॥೫೨॥

ಯಸ್ಯಾಂಶಲೇಶೋ ಹಿ ಜಗದ್ಭೂತಂ ಭಾವಿ ಭವತ್ತಥಾ ।
ಸರ್ವಂ ಶಿವಮಯಂ ವಿಶ್ವಂ ನಾಶಿವಂ ವಿದ್ಯತೇ ಮುನೇ ॥೫೩॥

---

ಮಾಯಾವಶನಾಗದೆ, ಅದೇ ಮಾಯೆಯಿಂದ ಸಕಲ ದೇವತೆಗಳನ್ನೂ ವಶವರ್ತಿಗಳನ್ನಾಗಿ ಮಾಡಿಕೊಂಡಿರುವನು. ಸಕಲಜಾತಿಯ ಕ್ಷೇತ್ರಗಳಿಗೂ ತಾನು ಒಡೆಯನೆನಿಸಿ ಪಶುಗಳೆನಿಸಿದ (ಶೈವಸಿದ್ಧಾಂತದಲ್ಲಿ) ಸಕಲ ಜೀವಜಂತುಗಳಿಗೆ ಆಗಾಗ ಒದಗುವ ಸಕಲ ಪಾಶಗಳನ್ನೂ ನಾಶಗೊಳಿಸುವನು. ॥೪೮-೪೯॥

ದೇವಮಾನುಷರಾಕ್ಷಸರಿಂದ ನಿಬಿಡವಾದ ಈ ಸಕಲ ಪ್ರಪಂಚವನ್ನೂ ಮಾಯಾಪಾಶದಿಂದ ಬಂಧಿಸುವುದಕ್ಕೂ, ಹಾಗೆಯೇ ಅದೇ ಪಾಶಗಳಿಂದ ಬಿಡಿಸುವುದಕ್ಕೂ ಸಮರ್ಥನಾಗಿರುವನು. ಪಶುಪತಿಯೆನಿಸಿದ ಪರಶಿವನು ಭಕ್ತರ ಭಕ್ತಿಯಿಂದ ತೃಪ್ತನಾಗುವನು. ಸಕಲ ವೇದಗಳೂ ಪರಶಿವನ ಕೇವಲ ಉಸಿರುಗಳೆನಿಸಿವೆ. ॥೫೦-೫೧॥

ಚಂದ್ರಶೇಖರನೆನಿಸಿದ ಮಹಾದೇವನು ಸೋಮಭಾಗದಿಂದ ಯಾಗದಲ್ಲಿ ತೃಪ್ತಿಹೊಂದುವ ಪ್ರಧಾನದೇವನಾಗುವನು. ಪ್ರಪಂಚದಲ್ಲಿರುವ ಚರಾಚರವಸ್ತುಗಳಿಗೆಲ್ಲಾ ಪಾರ್ವತೀಪತಿಯಾಗಿರುವ ಪರಶಿವನೇ ಯಜಮಾನನು. ಹಿಂದೆ ಕಳೆದು ಹೋದ, ಮುಂದೆ ಆಗಾಗ ಬರುವ ಸಕಲ ಪ್ರಪಂಚಜಾತಿಗಳೂ ಈ ಪರಶಿವನ ಒಂದೊಂದು ಅಂಶವೆಂದೇ ತಿಳಿಯಬೇಕು. ಈ ಪ್ರಪಂಚವೆಲ್ಲವೂ ಶಿವಮಯವಾದದ್ದೇ. ಶಿವಭಿನ್ನವಾದ ವಸ್ತುವೇ ಜಗತ್ತಿನಲ್ಲಿಲ್ಲವೆಂದು ತಿಳಿಯಬೇಕು ॥೫೨-೫೩॥

ಸರ್ವಂ ಶಿವಾತ್ಮಕತಯಾ ಪ್ರತಿಭಾತಿ ವಿಶ್ವಂ
ವಿಶ್ವಾಧಿಕಸ್ಯ ಕೃಪಯಾ ಖಲು ಸರ್ವಮೇತತ್ ।
ಜಾನೀಹಿ ಶಂಭುಕೃಪಯಾ ಪರಿವರ್ತತೇದಂ
ಭೂಮ್ಯಬ್ಧಿಕಾನನಸುರಾಸುರಮಾನವಂ ಚ ॥೫೪॥

ನಾನ್ಯದ್ಭೂತಭವಂ ಜಗತ್ಸುರವರಂ ಕ್ಷ್ಮಾಕೃತೇಜವಾಯ್ವಾದಿಖಂ
ಜ್ಯೋತಿರ್ಜಾಲಜಲಂ ಜಡಾಜಡಜಗದ್ದ್ಯಾವಾಪೃಥಿವ್ಯೋಂತರಾ ।
ಈಶಾವಾಸ್ಯಮಿದಂ ತದೇವ ವಿಹಿತಂ ವ್ಯಾಪ್ತಂ ವ್ಯಯಂ ವ್ಯಾಪಕಂ
ಚೈಕಾನೇಕಪರಂಪರಾಪ್ರಮುದಿತಂ ಜಾನೀಷ್ವ ಸರ್ವಂ ಶಿವಂ ॥೫೫॥

ಇತಿ ಶ್ರೀಶಿವರಹಸ್ಯೇ ಅಷ್ಟಮಾಂಶೇ ಶಿವಮಹಿಮಾವರ್ಣನಂ ನಾಮ
ಚತುರ್ಥೋಽಧ್ಯಾಯಃ

---

ನಮ್ಮ ಕಣ್ಣಿಗೆ ಗೋಚರಿಸುವ ಈ ಪ್ರಪಂಚವೆಲ್ಲವೂ ಕೇವಲ ಶಿವಾತ್ಮಕವಾದದ್ದೆ. ವಿಶ್ವೇಶ್ವರನೆನಿಸಿದ ಮಹಾದೇವನ ಕೃಪೆಯಿಂದಲೇ ಈ ಜಗತ್ತು ಚಲಿಸುತ್ತಿರುವುದು. ಈ ಭೂಮಿ, ಸಮುದ್ರ, ಕಾಡು, ದೇವಮಾನುಷರಾಕ್ಷಸರು ಇವರೆಲ್ಲರೂ ಈಶ್ವರೇಚ್ಛೆಯಿಂದಲೇ ವೃದ್ಧಿ ಹ್ರಾಸಗಳನ್ನು ಪಡೆಯುತ್ತಾ ಬದಲಾವಣೆ ಹೊಂದುತ್ತಿರುವರು. ॥೫೪॥

ಭೂಮಿ, ಅಗ್ನಿ, ವಾಯು, ಆಕಾಶ ಮೊದಲಾದ ಮೂರ್ತಾಮೂರ್ತದ್ರವ್ಯಗಳೂ, ದ್ಯಾವಾಪೃಥಿವೀ ಮಧ್ಯವರ್ತಿಗಳಾದ ಸರ್ವಾಕಾಶವೂ, ಇತರ ಜಡಾಜಡವಸ್ತುಗಳೂ ಪ್ರಪಂಚದಲ್ಲಿ ಅಡಕಗಳಾಗಿವೆಯಷ್ಟೆ. ಅವೆಲ್ಲವೂ ಪರಶಿವನಿಂದಲೇ ಉತ್ಪನ್ನವಾದವುಗಳು. ಈ ಅಖಂಡ ಪ್ರಪಂಚವು ಈಶ್ವರನಲ್ಲಿಯೇ ಸದಾ ನೆಲಸಿರುವುದು. ಒಂದೇ ಸರ್ವವಸ್ತುವೆನಿಸಿ ಪ್ರಪಂಚವನ್ನು ವ್ಯಾಪಿಸಿದ್ದರೂ, ಉಪಾಧಿಭೇದದಿಂದ ನಾನಾರೂಪದಲ್ಲಿ ವ್ಯವಹಾರ್ಯವಸ್ತುವೆನಿಸಿ ಅಖಂಡ ಪ್ರಪಂಚಾತ್ಮಕವಾಗಿ ನಿಂತಿರುವುದೆಂಬುದನ್ನು ಸರ್ವರೂ ತಿಳಿಯಬೇಕು ಎಂದು ಕುಮಾರಸ್ವಾಮಿಯು ಜೈಗೀಷವ್ಯ ಮಹರ್ಷಿಗೆ ತಿಳಿಸಿದನು. ॥೫೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮಾಖ್ಯವೆಂಬ ಎಂಟನೆಯ ಅಂಶದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಪಂಚಮೋಽಧ್ಯಾಯಃ

॥ ಜೈಗೀಷವ್ಯ ಉವಾಚ ॥

ಧನ್ಯೋಽಸ್ಮ್ಯಹಂ ತಾರಕಾರೇ ಶ್ರುತಂ ಸರ್ವಾತ್ಮ್ಯನೀಶಿತುಃ ।
ತಂ ತ್ವೌಪನಿಷದಂ ಸೋಮಂ ಪೃಚ್ಛಾಮಿ ಪುರುಷಂ ಪುನಃ ॥೧॥

ಕಥಮೀಶಸ್ಯ ಚರಿತಂ ವಿಸ್ಮಯಾವಹಮುತ್ತಮಂ ।
ಸರ್ವೇ ನರಾಸ್ಸುರಾಸ್ಸರ್ವೇ ಮುನಯಶ್ಚ ತಪೋಧನಾಃ ॥೨॥

ಚಿತ್ರಲೀಲಸ್ಯ ದೇವಸ್ಯ ವಿಶ್ವೇಶಸ್ಯ ಕೃಪಾವಶಾತ್ ।
ತರಂತಿ ದುಸ್ತರಂ ಸ್ಕಂದ ಸುಘೋರಂ ಭವಸಾಗರಂ ॥೩॥

---

## ಐದನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯು ಸ್ಕಂದನಿಂದ ಪ್ರೋಕ್ತವಾದ ಶಿವಸ್ವರೂಪವನ್ನು ಮನಸಾ ಸ್ಮರಿಸುತ್ತಾ ಮತ್ತೆ ಕುಮಾರಸ್ವಾಮಿಯನ್ನು ಕುರಿತು " ಸ್ಕಂದಸ್ವಾಮಿಯೇ, ತಾರಕಾಸುರನಾಶಕನೇ, ನೀನು ಇಲ್ಲಿನವರೆಗೂ ಉಪನಿಷತ್ಪ್ರತಿಪಾದ್ಯನೂ, ಉಮಾ ಸಹಿತನೂ, ಪುರಾಣಪುರುಷನೂ ಆದ ಪರಮೇಶ್ವರನ ಸರ್ವಮಹಿಮೆಯನ್ನೂ ವಿವರಿಸಿರುವೆ. ಮತ್ತೂ ಮತ್ತೂ ಪ್ರಶ್ನಿಸಿ ಅದನ್ನು ತಿಳಿಯಬೇಕೆಂಬ ಕುತೂಹಲ ನನಗುಂಟಾಗಿದೆ. ಈ ಪರಶಿವನ ಚರಿತ್ರೆಯು ಎಷ್ಟು ಆಶ್ಚರ್ಯಾಧಾಯಕವಾಗಿ ಉತ್ತಮೋತ್ತಮವೆನಿಸಿದೆ? ವಿಚಿತ್ರ ಲೀಲೆಯುಳ್ಳ ಈ ಮಹಾಮಹಿಮನ ಸ್ವರೂಪ ಜ್ಞಾನದಿಂದಲೂ ಮಹಾದೇವನ ಕರುಣಾಬಲದಿಂದಲೂ ಸುರರು, ನರರು, ಮಹರ್ಷಿ

ಯತ್ಕೃಪಾಲೇಶಸಂಭೂತಂ ಜಗದೇತಚ್ಚರಾಚರಂ।
ಮಹಾಕಾರುಣಿಕಶ್ಯಂಭುಃ ಸ ಸರ್ವೇಷಾಂ ಪ್ರಸಾದಕೃತ್ ॥೪॥

ಕಥಂ ದೇವಸ್ಯ ಚರಿತಂ ವದ ಮಹ್ಯಂ ಕೃಪಾವಶಾತ್ ।
ನೂನಂ ಮೇ ವಿಸ್ಮಯಪ್ರಾಪ್ತಿಹೇತುದಂ ಭಕ್ತಿವರ್ಧನಂ ॥೫॥

ಉಮಾಪತಿಪದಾಂಭೋಜಂ ಭಕ್ತಿದಂ ಮುಕ್ತಿದಂ ಮಮ ।
ವದ ತ್ವಂ ತಾರಕಾರಾತೇ ಕಥಾಂ ಕಥಯ ಮಾಂ ಶುಭಾಂ ॥೬॥

ಸಹೈಭಿರ್ಮುನಿಭಿಶ್ಚೈವ ಗಣೇಂದ್ರೈಸ್ಸುರಸತ್ತಮೈಃ ।
ಶ್ರೋತುಮುತ್ಕಂಠಿತಂ ಚೇತಸ್ತನ್ಮಹ್ಯಂ ಕೃಪಯಾ ವದ ॥೭॥

॥ ಸೂತ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಮುನಿಂ ಸ್ಕಂದೋಽಭ್ಯುವಾಚ ಹಿ ।
ಮಹೇಶ್ವರಸ್ಯ ಚರಿತಂ ಶೃಣ್ವತಾಮಘನಾಶನಂ ॥೮॥

---

ಗಳು ತಮ್ಮ ಅತ್ಯಗಾಧವಾದ ಸಂಸಾರಸಾಗರದಿಂದ ಪಾರಾದ ವಿಷಯಗಳು ಏನಾದರೂ ಇದ್ದರೆ ಅದನ್ನು ಈಗ ನನಗೆ ವಿವರಿಸುವವನಾಗು. ॥೧-೨-೩॥

ಈ ಚರಾಚರಾತ್ಮಕವಾದ ಜಗತ್ತೆಲ್ಲವೂ ಪರಶಿವನ ಕೃಪಾಲೇಶದಿಂದಲೇ ಉತ್ಪನ್ನವಾದುದಲ್ಲವೆ! ದಯಾನಿಧಿಯಾದ ಶಂಕರನು ಸರ್ವದಾ ತನ್ನ ಭಕ್ತರಿಗೆ ಅನುಗ್ರಹಮಾಡುತ್ತಲೇ ಇರುವನಲ್ಲವೆ? ಇಂತಹ ದೇವದೇವನ ಮಹಿಮಾಪೂರ್ಣವಾದ ಇತಿಹಾಸವನ್ನು ನನಗೆ ಇನ್ನೂ ವಿವರಿಸಿ ಹೇಳುವವನಾಗು. ಇದು ನನಗೆ ಈಶ್ವರಭಕ್ತಿಯನ್ನೂ ತನ್ಮೂಲಕ ಶಾಶ್ವತ ಮುಕ್ತಿಯನ್ನೂ ಒದಗಿಸಬಲ್ಲುದಲ್ಲವೆ! ॥೪-೫॥

ತಾರಕಾರಾತಿಯೇ, ಪರಶಿವನ ಪಾದಕಮಲವು ನನಗೆ ಭಕ್ತಿಯನ್ನೂ ಮುಕ್ತಿಯನ್ನೂ ಕೊಡಬಲ್ಲುದು. ಅಂತಹ ಶಿವೇತಿಹಾಸಗಳನ್ನು ನನಗೆ ದಯೆಯಿಂದ ತಿಳಿಸುವವನಾಗು. ಆ ಪುಣ್ಯಪೂರಿತಗಳಾದ ಈಶ್ವರಚರಿತೆಗಳನ್ನು ಕೇಳುವುದರಲ್ಲಿ ಇಲ್ಲಿ ನೆರೆದಿರುವ ಋಷಿಜನರೊಡನೆ ನನ್ನ ಮನಸ್ಸು ಹಾತೊರೆಯುತ್ತಿರುವುದು. ಶಿವಕಥೆಗಳನ್ನು ದಯೆಯಿಂದ ಮುಂದುವರಿಸುವವನಾಗು" ॥೬-೭॥

ಎಂದು ಪ್ರಾರ್ಥಿಸಲು ಕುಮಾರಸ್ವಾಮಿಯು ಪಾಪನಾಶಕವೂ, ಋಷಿಜನರಿಂದ ಆದರಣೀಯವೂ ಆದ ಪರಶಿವಕಥೆಗಳನ್ನು ಹೇಳಲು ಇಷ್ಟವುಳ್ಳವನಾಗಿ, ತನ್ನ ಆರು

ಸ ತು ಷಡ್ವದನಾಂಭೋಜಷಂಭವೈರ್ಲೋಚನೋತ್ಪಲೈಃ ।
ಕೃಪಾವಲೋಕನೇನೈವ ವೀಕ್ಷ್ಯ ಶಾಂಭವಪುಂಗವಂ ॥೯॥

ಗಣೇಂದ್ರಾನಮರೇಂದ್ರಾಂಶ್ಚ ಪ್ರಶಸ್ಯಾಹ ಪ್ರಸನ್ನವಾಕ್ ॥೧೦॥

॥ ಸ್ಕಂದ ಉವಾಚ ॥

ಭವತ್ಸು ನೈವ ಗೋಪ್ಯಂ ಮೇ ಶಾಂಭವೇಷು ಮಹಾತ್ಮಸು ।
ಶಾಂಗಾಂಗಸಂಗೋ ಭಂಗಾಯ ದುಃಖಾನಾಮೇವ ಕೇವಲಂ ॥೧೧॥

ಭವತೀಶಪ್ರಸಾದೇನ ಭವನಾಶೋ ಮಹಾಮುನೇ ।
ಶಂಭೋಃ ಕಥಾಕರ್ಣನೇನ ಕರ್ಣೋ ಧನ್ಯತರೋ ತವ ॥೧೨॥

ಮಮ ವಕ್ತ್ರಾಣಿ ಧನ್ಯಾನಿ ಲೋಚನಾವಳಿರೇವ ಮೇ ।
ಶಿವಲಿಂಗಾಲೋಕನೇನ ಕೈಲಾಸೇ ಶಂಕರಾಲಯೇ ॥೧೩॥

ತೂರ್ಣಮಭ್ಯರ್ಣಗಾ ಮುಕ್ತಿರಪರ್ಣಾಪತಿಪೂಜಯಾ ।
ಪಾಪಾರಣ್ಯಮಹಾದಾವಂ ಶಂಕರಸ್ಯೈವ ಪೂಜನಂ ॥೧೪॥

---

ಮುಖಗಳಲ್ಲಿಯೂ ಇರುವ ಹನ್ನೆರಡು ಕಣ್ಣುಗಳಿಂದಲೂ ಆ ಋಷಿಜನರನ್ನು ನೋಡುತ್ತಾ ಶಿವಮಹಿಮೆಯನ್ನು ವಿವರಿಸಲು ಆರಂಭಿಸಿದನು. ಎಂದು ಸೂತ ಮಹರ್ಷಿಗಳು ವಾಜಶ್ರವಸಾದಿ ಋಷಿಗಳಿಗೆ ತಿಳಿಯಹೇಳಿದರು. ಕುಮಾರಸ್ವಾಮಿ ಯಾದರೋ ತನ್ನ ಎದುರಿನಲ್ಲಿ ಕುಳಿತಿದ್ದ ಗಣನಾಯಕರನ್ನೂ, ದೇವತೆಗಳನ್ನೂ ಕುರಿತು ಪ್ರಸನ್ನಹೃದಯನಾಗಿ ಈ ರೀತಿ ಹೇಳತೊಡಗಿದನು. ॥೮-೯-೧೦॥

"ಎಲೈ ಮಹಾತ್ಮರಾದ ಈಶ್ವರಭಕ್ತಾಗ್ರಣಿಗಳೇ, ನಿಮ್ಮ ವಿಷಯದಲ್ಲಿ ನಾನು ಯಾವ ರಹಸ್ಯಾಂಶವನ್ನೂ ಮುಚ್ಚಿಡುವವನಲ್ಲ. ನಿಮ್ಮಂತಹ ಈಶ್ವರ ಭಕ್ತರ ಅಂಗಸ್ಪರ್ಶದಿಂದ ಮಾನವರ ಸಮಸ್ತ ಸಾಂಸಾರಿಕ ದುಃಖಗಳೂ ನಿವಾರಣೆ ಯಾಗುವುವು. ಈಶ್ವರಾನುಗ್ರಹದಿಂದ ನಿಜವಾಗಿಯೂ ಸಂಸಾರದುಃಖವು ನಿರ್ನಾಮ ವಾಗುವುದು. ಜೈಗೀಷವ್ಯಮಹರ್ಷಿಯೇ, ಈಶ್ವರಕಥೆಯನ್ನು ಕೇಳುವುದರಿಂದ ನಿನ್ನ ಕಿವಿಯು ಈಗ ಅತಿ ಪವಿತ್ರವೆನಿಸಿಕೊಂಡಿದೆ. ॥೧೧-೧೨॥

ಕೈಲಾಸಪರ್ವತದಲ್ಲಿರುವ ಶಿವಾಲಯಸ್ಥವಾದ ಶಿವಲಿಂಗಗಳ ದರ್ಶನದಿಂದ ನನ್ನ ಕಣ್ಣುಗಳೂ, ಶಿವಕಥಾಕಥನದಿಂದ ನನ್ನ ಮುಖಗಳೂ ಧನ್ಯಗಳೆನಿಸಿವೆ.

ನ ವಿನಾ ಶಂಕರಸ್ಯಾರ್ಚಾಂ ಸಂಸಾರೋತ್ತಾರಣಂ ಭವೇತ್ ।
ಭಸ್ಮಾಂಗರಾಗೋ ಯೋ ಭೂಯಾದ್ಭಾವೋ ಭವಪದಾರ್ಚಕಃ ॥೧೫॥

ಭವಾಭಾವಂ ಭಜತ್ಯೇವ ಭಾವ ಏವ ಹಿ ಭಾಗ್ಯವಾನ್ ।
ಶಂಗಲಿಂಗಾರ್ಚನೇನೈವ ಪಾಪಭಂಗಃ ಪ್ರಜಾಯತೇ ॥೧೬॥

ಅನಂಗಮಾತಂಗಹರ ಪದಾರ್ಚನಜನಪ್ರಿಯಃ ।
ಭವತ್ಯೇವ ವಿಶೇಷೇಣ ಶಾಂಭವೋ ಭೂರಿಭಾಗ್ಯವಾನ್ ॥೧೭॥

ಮಹಾದೇವಸ್ಮೃತಿಸ್ಸದ್ಯೋ ವಿದ್ಯೋತಯತಿ ತಂ ನರಂ ।
ಸುರಂ ವಾ ಕಿನ್ನರಂ ಉರಗಂ ಯಕ್ಷಮೇವ ಚ ॥೧೮॥

ಗಂಧರ್ವಗರುಡಂ ವಾಪಿ ಕೀಟಂ ಪತಗಮೇವ ವಾ ।
ಕರೋತಿ ಶಂಕರಕೃಪಾ ಮೋಕ್ಷಾಯೈವ ನ ಸಂಶಯಃ ॥೧೯॥

---

ಪಾರ್ವತೀಪತಿಯಾದ ಪರಶಿವನ ಆರಾಧನೆಯಿಂದ ಮುಕ್ತಿಯು ಕರಗತವಾಗುವುದು. ॥೧೩-೧೪॥

ಈಶ್ವರಾರಾಧನೆಯಿಲ್ಲದೆ ಸಂಸಾರಗತವಾದ ದುಃಖದಿಂದ ಪಾರಾಗಲು ಸಾಧ್ಯವಿಲ್ಲ. ಯಾವನು ಶಿವಪಾದಗಳನ್ನು ಅರ್ಚಿಸುತ್ತಾ, ಭವನಲ್ಲಿಯೇ ಭಕ್ತಿಯಿಟ್ಟು ಭಸ್ಮಭೂಷಿತನಾಗುವನೋ, ಅಂತಹವನು ಸಂಸಾರದುಃಖಕ್ಕೆ ಎಂದಿಗೂ ಸಿಗುವುದಿಲ್ಲ. ಈಶ್ವರವಿಷಯಕವಾದ ದೃಢಭಕ್ತಿಯೇ ಮಾನವರಿಗೆ ಒಂದು ಭಾಗ್ಯ. ಶಿವಲಿಂಗಾರ್ಚನೆಯಿಂದ ನಿಜವಾಗಿಯೂ ಪಾಪಭಂಗವುಂಟಾಗುವುದು. ॥೧೫-೧೬॥

ಮದ್ದಾನೆಯಂತಿದ್ದ ಮನ್ಮಥನನ್ನು ನಾಶಪಡಿಸಿದ ಮಹಾದೇವನ ಪಾದಪೂಜೆಯಲ್ಲಿ ಸದಾ ನಿರತನಾಗಿರುವ ಶಾಂಭವನನ್ನೇ ಮಹಾಭಾಗ್ಯಶಾಲಿಯೆಂದು ತಿಳಿಯಬೇಕು. ಸುರನಾಗಲಿ, ಕಿನ್ನರನಾಗಲಿ, ಯಕ್ಷನಾಗಲಿ, ಮಾನವನೇ ಆಗಲಿ, ಮಹಾದೇವನ ಸ್ಮರಣೆಮಾಡುವುದರಿಂದಲೇ ಅವರೆಲ್ಲರೂ ಮಹಾಮಹಿಮರಾಗಿ ಪ್ರಕಾಶಿಸುವರು. ॥೧೭-೧೮॥

ಈಶ್ವರಾನುಗ್ರಹಕ್ಕೆ ಪಾತ್ರರಾದವರು ಗಂಧರ್ವರೇ ಆಗಲಿ, ಗರುಡನೇ ಆಗಲಿ, ಕ್ರಿಮಿಕೀಟಗಳಾಗಲಿ, ಪಶುಪಕ್ಷಿಗಳೇ ಆಗಲಿ ಸುಲಭವಾಗಿ ಮುಕ್ತಿಯನ್ನು ಪಡೆಯು

ನ ಕಿಂ ದದಾತಿ ಸಾಮ್ರಾಜ್ಯಂ ಪ್ರಾಜ್ಯಂ ಭಕ್ತೇಷು ಕೇವಲಂ ।
ಯದುದಾರಕಥಾಸಾರಸಾರಸಾನಾಂ ಮಹಾತ್ಮನಾಂ ॥೨೦॥

ಭವಂತಿ ಸಂಪದೋ ನಿತ್ಯಂ ಸರ್ವೇಷು ಸುಖಹೇತವೇ ।
ಭಾವೈಕಸುಲಭೋ ದೇವೋ ಭಕ್ತವಶ್ಯೋ ಭಯಾಪಹಃ ॥೨೧॥

ಭಾವಗ್ರಾಹ್ಯೋಽಹ್ಯನೀಡಾಖ್ಯ ಇತ್ಯಾಹಾಥರ್ವಣೀ ಶ್ರುತಿಃ ।
ತೇನೈವ ಸರ್ವಮುಕ್ತ್ಯರ್ಥಂ ಸೃಷ್ಟಂ ಶಂಕರಪೂಜನಂ ॥೨೨॥

ನಾಸ್ತ್ಯನ್ಯತ್ತಾರಣಂ ನೃಣಾಂ ವಿನಾ ವಿಶ್ವೇಶಪೂಜನಂ ।
ಕಃ ಸಂತರೇತ ಭವದಾಮಸಾರಾಸಾರವಾಸನಾಂ ॥೨೩॥

ತಾಂ ಮೃತ್ಯುಂಜಯಪೂಜಾರ್ಥಮುಪಯುಜ್ಯ ಸುಖೀ ಭವೇತ್ ।
ನ ವಿನಾನ್ಯತ್ರ ಧರ್ಮೇಜ್ಯಾಕರಣೇ ನಾಶ್ನುತೇ ಪದಂ ॥೨೪॥

---

ವರು. ತನ್ನ ಭಕ್ತರಿಗೆ ಮಹಾದೇವನು ಅತ್ಯಂತ ಶ್ರೇಷ್ಠವಾದ ಮುಕ್ತಿಸಾಮ್ರಾಜ್ಯವನ್ನೇ ಅನುಗ್ರಹಿಸುವನು. ಮಹಾದೇವನ ದಿವ್ಯಕಥಾಸಾರದಲ್ಲಿ ಅತ್ಯಾಸಕ್ತರಾದ ಮಹಾತ್ಮರಿಗೆ ಪರಶಿವನು ನಿತ್ಯಸಂಪತ್ತುಗಳನ್ನು ಕರುಣಿಸುತ್ತಾ ರಕ್ಷಿಸುವನು. ||೧೯-೨೦||

ಭಕ್ತರಲ್ಲಿ ವಿಶೇಷಾಭಿಮಾನವುಳ್ಳ ಈ ಮಹಾದೇವನು ಯಾರು ತನ್ನನ್ನು ಸದ್ಭಾವನೆಯಿಂದ ಉಪಾಸನೆಮಾಡುವರೋ, ಅಂತಹವರಿಗೆ ವಶನಾಗಿ ಅವರ ಸರ್ವ ಭಯಗಳನ್ನೂ ನಿವಾರಿಸುವನು. ಸರ್ವವ್ಯಾಪಿಯಾದ ಮಹಾದೇವನು ಸರ್ವದಾ ಸದ್ಭಾವನೆಗೆ ವಶನಾಗತಕ್ಕವನು. ಭಕ್ತಿಗೆ ಸುಲಭವಾಗಿ ದೊರೆಯತಕ್ಕವನು ಎಂದು ಅಥರ್ವಣವೇದವು ಸದಾ ಹೊಗಳುತ್ತಿರುವುದು. ಆದ್ದರಿಂದಲೇ ಸಕಲರಿಗೂ ಸುಲಭವಾಗಿ ಮುಕ್ತಿಯನ್ನು ಒದಗಿಸಲು ಲೋಕದಲ್ಲಿ ಈಶ್ವರಪೂಜೆಯೆಂಬ ಕರ್ಮವೊಂದು ಸೃಷ್ಟವಾಗಿರುವುದು. ||೨೧-೨೨||

ವಿಶ್ವೇಶ್ವರನ ಆರಾಧನೆಯೊಂದನ್ನು ಬಿಟ್ಟರೆ ಮಾನವರಿಗೆ ಮತ್ತಾವ ಭವಸಂತರಣಸಾಧನವೂ ದೊರೆಯಲಾರದು. ಸಂಸಾರದುಃಖವೆಂಬುದು ಅನಾದಿವಾಸನಾಲಬ್ಧ ಗುಣವಾಗಿರುವುದು. ಅಂತಹ ಅಪರಿಹಾರ್ಯದುಃಖಪ್ರಾಪ್ತಿಯನ್ನು ತಡೆಗಟ್ಟಲು ಮೃತ್ಯುಂಜಯಾರಾಧನೆಯನ್ನು ಬಿಟ್ಟರೆ ಮತ್ತಾವುದೂ ಲಭಿಸಲಾರದು. ಧರ್ಮಕಾರ್ಯಗಳು, ಯಾಗಾದ್ಯನುಷ್ಠಾನಗಳು ಇವುಗಳಿಂದ ಮಾನವನು ಎಂದಿಗೂ

ಶ್ರೀ ಮೃತ್ಯುಂಜಯಪೂಜೈವ ಸುಲಭಾ ಮೋಕ್ಷದಾಯಿನೀ ।
ನ ಪೂಜಾ ಪೂಜಕೋವಾಸ್ಯ ಸ್ವತಂತ್ರಸ್ಯೇಶ್ವರಸ್ಯ ಹಿ ॥೨೫॥

ಕಿಂ ತು ಸರ್ವಾರ್ಥಭಯಾರ್ಥಂ ಹಿ ಸೃಷ್ಟಂ ವೈ ಲಿಂಗಪೂಜನಂ ।
ಲಿಂಗೇಽರ್ಚಿತೋ ಮಹಾದೇವೋ ದದಾತಿ ವಿಪುಲಾಂ ಶ್ರಿಯಂ ॥೨೬॥

ವಿಮುಕ್ತಿಜನಕಂ ಜ್ಞಾನಂ ದದಾತ್ಯೇವ ಮಹೇಶ್ವರಃ ।
ಯಃ ಸಕೃದ್ಬಿಲ್ವಪತ್ರೇಣ ದ್ವಿತ್ರ್ಯೈರ್ವಾ ಭಾವಪೂಜಿತಃ ॥೨೭॥

ಭವೋ ಭವಹರೋ ಭೂಯಾದ್ಭಾವಾನಾಂ ನಾತ್ರ ಸಂಶಯಃ ।
ಯಸ್ಯ ಸಂಪೂಜನಾದೇವ ಬ್ರಹ್ಮವಿಷ್ಣ್ವಾದಯಸ್ಸುರಾಃ ॥೨೮॥

ಸೇಂದ್ರಾಃ ಸವರುಣಾ ದೇವಾ ನಿವಸಂತಿ ತ್ರಿವಿಷ್ಟಪೇ ।
ಅಸುರಾ ಯಕ್ಷರಕ್ಷಾಂಸಿ ಮುನಯೋ ಮನವಸ್ತಥಾ ॥೨೯॥

---

ಸಂಸಾರದುಃಖದಿಂದ ಪಾರಾಗಲಾರನು ಮತ್ತು ಮುಕ್ತಿಯನ್ನು ಹೊಂದಲಾರನು. ॥೨೩-೨೪॥

ಸುಲಭವಾಗಿ ಸರ್ವರಿಗೂ ಮೋಕ್ಷವನ್ನು ಕೊಡುವುದೆಂದರೆ ಶ್ರೀಮಹಾದೇವನ ಪೂಜೆಯೊಂದೇ. ಸರ್ವತಂತ್ರಸ್ವತಂತ್ರನಾದ ಮಹಾದೇವನಿಗೆ ಪೂಜೆಯಾಗಲಿ, ಪೂಜಕನಾಗಲಿ ಬೇಕಿಲ್ಲ. ಆದರೂ ಭಕ್ತರ ಉದ್ಧಾರಕ್ಕಾಗಿ ಮಹಾದೇವನೇ ಶಿವಲಿಂಗ ಪೂಜೆಯೆಂಬುದನ್ನು ಸೃಷ್ಟಿಮಾಡಿರುವನು. ಶಿವಲಿಂಗದಲ್ಲಿ ಮಾಡಿದ ಪೂಜೆಯೇ ಸರ್ವಶ್ರೇಷ್ಠವಾದುದು ಮತ್ತು ಶಿವಪ್ರೀತಿಕರವಾದುದು. ಆದರಿಂದ ಆರಾಧಕನು ಸಕಲೈಶ್ವರ್ಯವನ್ನೂ ಪಡೆಯಬಲ್ಲನು. ॥೨೫-೨೬॥

ಮೋಕ್ಷಪ್ರಾಪ್ತಿಗೆ ಮುಖ್ಯಸಾಧನವಾದ ಜ್ಞಾನವನ್ನು ಒದಗಿಸುವವನೂ ಪರಮೇಶ್ವರನೇ. ಇಂತಹ ದೇವದೇವನನ್ನು ಭಕ್ತರು ಅತಿಭಕ್ತಿಯಿಂದ ಎರಡೋ ಅಥವಾ ಮೂರು ಬಿಲ್ವದಳಗಳಿಂದ ಪೂಜಿಸಿದರೂ ಸಾಕು. ಆದರಿಂದ ತೃಪ್ತನಾದ ಪರಮೇಶ್ವರನು ಆ ಭಕ್ತರಿಗೆ ಸಕಲೇಷ್ಟಾರ್ಥಗಳನ್ನೂ ನೆರವೇರಿಸಿ ಅವರ ಸಂಸಾರ ಬಂಧನಗಳನ್ನೆಲ್ಲಾ ಬಿಡಿಸಿಬಿಡುವನು. ಈ ಮಹಾದೇವನನ್ನು ಪೂಜಿಸಿದ್ದರಿಂದಲೇ ಬ್ರಹ್ಮ, ವಿಷ್ಣು, ಇಂದ್ರ, ವರುಣ ಮುಂತಾದ ದೇವತೆಗಳೊಡನೆ ಸಕಲದೇವತೆಗಳೂ ಇಂದು ಸ್ವರ್ಗಲೋಕದಲ್ಲಿ ವಾಸಮಾಡುತ್ತಿರುವರು. ದೇವತೆಗಳೂ, ಯಕ್ಷರೂ,

ಪ್ರಿಯಂ ಲಿಂಗಾರ್ಚನಂ ಶಂಭೋರ್ನಾನ್ಯತ್ಕಿಂಚಿನ್ಮನೀಶ್ವರ ।
ನ ದಾನೇ ನೈವ ತಪಸಾ ನ ವರ್ಣಾಶ್ರಮಧರ್ಮತಃ ॥೩೦॥

ಏತದ್ಧಿ ಸಾರ್ಥಕಂ ಶ್ರೌತಂ ಶ್ರೀಮಹಾದೇವಪೂಜನಂ ।
ವಿಶ್ವೇಶ್ವರಪೂಜಯಾ ವಿಶ್ವಂ ಸರ್ವಂ ಸಂಪೂಜಿತಂ ಭವೇತ್ ॥೩೧॥

ವಿಶ್ವಾಧಿಕೋ ಮಹಾದೇವಃ ಸರ್ವವೇದಾಂತಸಂಸ್ತುತಃ ।
ಸ್ಮೃತಸ್ಸಂಪೂಜಿತೋ ನಿತ್ಯಂ ಧ್ಯಾತೋ ವಾ ಮುಕ್ತಿದಾಯಕಃ ॥೩೨॥

ದರ್ಶನಂ ಸ್ಪರ್ಶನಂ ಲಿಂಗೇ ಅಯಂ ಮೇ ಇತಿ ಮಂತ್ರಕಃ ।
ಸರ್ವಪಾಪಕ್ಷಯಾಯೈವ ಮುಕ್ತಯೇ ಭವತೇ ನೃಣಾಂ ॥೩೩॥

ಯೋ ಮಹೇಶಂ ಸಕೃದ್ಧ್ಯಾತ್ವಾ ಸ್ವಹೃದಂಭೋಜಮಧ್ಯಮೇ ।
ಉಮಾಸಹಾಯಂ ತ್ರ್ಯಕ್ಷಂ ಚ ನೀಲಕಂಠಂ ಸ ಧನ್ಯಭಾಕ್ ॥೩೪॥

---

ರಾಕ್ಷಸರೂ, ಮುನಿಗಳೂ, ಮನುಗಳೂ ಸಹ ಈ ಪರಶಿವನನ್ನು ಆರಾಧಿಸಿ ತಮ್ಮ ತಮ್ಮ ಸ್ಥಾನಗಳಲ್ಲಿ ಮಾನ್ಯರಾಗಿ ನಿಂತಿರುವರು. ॥೨೭-೨೮-೨೯॥

ಶಿವಲಿಂಗಪೂಜೆಯೊಂದರಿಂದಲೇ ಶಂಕರನು ತೃಪ್ತಿಪಡುವನು. ಶಂಕರನನ್ನು ತೃಪ್ತಿಪಡಿಸಬೇಕಾದರೆ ಯಾವ ದಾನಗಳಾಗಲಿ, ತಪಸ್ಸಾಗಲಿ, ವರ್ಣಾಶ್ರಮಧರ್ಮ ಪಾಲನೆಯಾಗಲಿ ಸಹಕಾರಿಗಳಾಗಲಾರವು. ಈ ಮಹಾದೇವಪೂಜೆಯು ಶ್ರುತ್ಯುಕ್ತ ವಾಗಿ ಫಲಪ್ರದವಾಗಿರುವುದರಿಂದ ಶ್ರೌತಕರ್ಮವೆನಿಸಿಕೊಂಡಿದೆ. ವಿಶ್ವೇಶ್ವರನನ್ನು ಪೂಜಿಸುವುದರಿಂದ ವಿಶ್ವವನ್ನೇ ಪೂಜಿಸಿದಂತಾಗುವುದು. ಇದರಲ್ಲಿ ಸಂಶಯವಿಲ್ಲ. ॥೩೦-೩೧॥

ಪ್ರಪಂಚಕ್ಕೆ ದೊಡ್ಡವನೆನಿಸಿದ ಮಹಾದೇವನು ಸಕಲ ಉಪನಿಷತ್ತುಗಳಿಂದಲೂ ಸ್ತುತ್ಯನಾಗಿರುವನು. ಆದೇರೀತಿ ನಿತ್ಯವೂ ಧ್ಯಾನಮಾಡುವವರಿಗೆ ಮುಕ್ತಿಪ್ರದನಾಗಿ ನಿಲ್ಲುವನು. "ಅಯಂ ಮೇ ಹಸ್ತೋ ಭಗವಾನ್" ಎಂಬ ಮಂತ್ರಪುರಶ್ಚರಣೆ ಮಾಡುತ್ತಾ ಶಿವಲಿಂಗವನ್ನು ದರ್ಶನ ಸ್ಪರ್ಶನಾದಿಗಳಿಂದ ಅನುಸಂಧಾನ ಮಾಡುವ ವರಿಗೆ ಸಕಲ ಪಾಪರಾಶಿಯನ್ನೂ ನಿರ್ಮೂಲಮಾಡಿ ಸ್ಥಿರಮುಕ್ತಿಯನ್ನು ಅನುಗ್ರಹಿ ಸುವನು. ॥೩೨-೩೩॥

ಯಾವನು ತನ್ನ ಹೃದಯಕಮಲದಲ್ಲಿ, ಪರಶಿವನು ಉಮಾಸಹಿತನಾಗಿಯೂ, ನೇತ್ರತ್ರಯಗಳಿಂದಲೂ, ನೀಲವರ್ಣದ ಕತ್ತಿನಿಂದಲೂ ಕೂಡಿ ರಂಜಿಸುತ್ತಿರುವ

ಮಾನ್ಯಸ್ಸುರಾಣಾಂ ಸರ್ವೇಷಾಂ ಮುನೀನಾಮಪಿ ವೈ ಮುನೇ ।
ಮನ್ಯೇ ಮಹಾಮನ್ಯುಸಮೋ ನ ದೇವಃ ಕರುಣಾಕರಃ ॥೩೫॥

ಅಪರಾಧಿಷು ಭಕ್ತೇಷು ಸಹಮಾನಸ್ಸ ಏವ ಹಿ ।
ಚುಲುಕಂ ಜಲಮಾತ್ರಂ ವಾ ತ್ರುಟಿತಂ ಬಿಲ್ವಜಂ ದಳಂ ॥೩೬॥

ದದಾತಿ ನಿಯಮಾದ್ಯೋ ವೈ ತಸ್ಮೈ ಮುಕ್ತಿಂ ಪ್ರಯಚ್ಛತಿ ।
ಬ್ರಹ್ಮಾದಿದುರ್ಲಭಂ ಜ್ಞಾನಂ ದದಾತ್ಯೇವ ಮಹೇಶ್ವರಃ ॥೩೭॥

ವಿಶ್ವನಾಥೋ ಹ್ಯನಾಥಂ ತಂ ಸನಾಥಂ ಕುರುತೇ ನರಂ ।
ಸ್ವಭಕ್ತಂ ಮನ್ಮಥಾರಾತಿರನಾಥಜನವತ್ಸಲಃ ॥೩೮॥

ತಸ್ಯೈವ ಭಕ್ತ್ಯಾ ಸುಲಭೋ ಮೋಕ್ಷೋ ನೋ ಧರ್ಮಕೋಟಿಭಿಃ ।
ತಸ್ಯೇಶಸ್ಯ ಪ್ರಸಾದಾರ್ಥಂ ಸೃಷ್ಟಾ ಹಿ ವಿವಿಧಾಃ ಕ್ರಿಯಾಃ ॥೩೯॥

---

ನೆಂಬುದಾಗಿಯೂ ಭಾವಿಸುವನೋ ಅವನೇ ಅತ್ಯಂತ ಧನ್ಯನು. ಅವನೇ ಸಕಲ ದೇವತೆಗಳಿಗೂ, ಋಷಿಗಳಿಗೂ ಮಾನ್ಯನೆನಿಸುವನು. ಮುಕ್ತಿಯನ್ನು ಅನುಗ್ರಹಿಸುವುದರಲ್ಲಿ ಯಾವ ದೊಡ್ಡದೊಡ್ಡ ಯಾಗಗಳೂ ಸಹ ಪರಶಿವನಿಗೆ ಸಮನಾಗಲಾರವು. ॥೩೪-೩೫॥

ಒಂದುವೇಳೆ ತನ್ನ ಭಕ್ತರು ಅಪರಾಧಿಗಳಾದರೂ, ಅವರ ತಪ್ಪುಗಳನ್ನು ಸಹಿಸುವಷ್ಟು ತಾಳ್ಮೆ ಪರಶಿವನಿಗುಂಟು. ಯಾವನು ಒಂದು ಬೊಗಸೆ (ಅಂಗೈಮಧ್ಯೆ ನಿಲ್ಲುವಷ್ಟು) ನೀರನ್ನಾಗಲಿ, ಹರಿದು, ಮುರಿದುಹೋಗಿರುವ ಬಿಲ್ವದಳಗಳನ್ನಾಗಲಿ ಭಕ್ತಿಯಿಂದ ಪರಶಿವಲಿಂಗಕ್ಕೆ ಅರ್ಪಿಸುವನೋ, ಅವನಿಗೆ ಮಹೇಶ್ವರನು ಬ್ರಹ್ಮಾದಿ ದೇವತೆಗಳಿಗೂ ದುರ್ಲಭವಾದ ಜ್ಞಾನವನ್ನು ಅನುಗ್ರಹಿಸುವನು. ॥೩೬-೩೭॥

ಅನಾಥಜನರಕ್ಷಕನೂ, ಮನ್ಮಥವಿಧ್ವಂಸಕನೂ ಆದ ಮಹಾದೇವನು ತನ್ನ ಭಕ್ತನು ಅನಾಥನಾಗಿದ್ದರೆ ಅವನನ್ನು ಕೂಡಲೆ ಸನಾಥನನ್ನಾಗಿ ಮಾಡಿಬಿಡುವನು. ಅವನಲ್ಲಿ ಭಕ್ತಿಯಿಡುವುದರಿಂದ ಮೋಕ್ಷವು ಸುಲಭವಾಗಿ ದೊರೆಯುವಂತೆ, ಮತ್ತಾವ ಕೋಟಿಸಂಖ್ಯೆಯ ಧರ್ಮಾಚರಣೆಯಿಂದಲೂ ಮೋಕ್ಷವು ಲಭಿಸಲಾರದು. ಆ ಮಹಾದೇವನ ಪ್ರಸಾದವನ್ನು ಸಂಪಾದಿಸುವವರಿಗೇ ಮಹಾದೇವ ಪ್ರೀತಿಜನಕಗಳಾದ ಅನೇಕ ಕರ್ಮಗಳು ಲೋಕದಲ್ಲಿ ಸೃಷ್ಟವಾಗಿವೆ. ॥೩೮-೩೯॥

ಜಪಹೋಮಾರ್ಚನಧ್ಯಾನವ್ರತಂ ಕೃಚ್ಛ್ರಾಣಿ ಸತ್ತಮ ।
ಯೋಗಂ ಸಾಂಖ್ಯಂ ಚ ತಂತ್ರಾಣಿ ಸ್ಮೃತಯೋ ನಿಗಮಾ ಅಪಿ॥೪೦॥

ಆಗಮಾಶ್ಚಾಪಿ ವಿವಿಧಾಃ ಯಂತ್ರತಂತ್ರಪರಾಣಿ ಚ ।
ಶ್ರುತಯಃ ಸ್ಮೃತಯಃ ಸರ್ವಾ ವರ್ಣಾಶ್ರಮನಿಬಂಧನಾಃ ॥೪೧॥

ಬಂಧನಾಯೈವ ಸರ್ವೇಷಾಂ ನ ಮುಕ್ತ್ಯೈ ಕಾರಣಂ ಭವೇತ್ ।
ಪ್ರಸಾದಕರಣಾನ್ಯೇವ ನ ಪ್ರಸಾದೋ ಭವೇದ್ಧಿ ತೈಃ ॥೪೨॥

ಪ್ರಸಾದಕಾರಣಂ ಶಂಭೋರ್ಭಕ್ತಿರ್ಯಾ ನಿಶ್ಚಲಾ ಶಿವೇ ।
ಭಕ್ತ್ಯೈವ ಭವಪಾಶೇಭ್ಯೋ ಮೋಚನಂ ಜಾಯತೇ ನೃಣಾಂ ॥೪೩॥

ಭಕ್ತ್ಯಾ ತರತಿ ದುರ್ಗಾಣಿ ಭಕ್ತ್ಯಾ ಭದ್ರಾಣಿ ಪಶ್ಯತಿ ।
ಭಕ್ತಿರೇವ ವಿರೂಪಾಕ್ಷೇ ಸದಾ ಕಾರ್ಯಾ ಮುನೀಶ್ವರ ॥೪೪॥

---

ಜಪ, ಹೋಮ, ಇತರ ದೇವತಾರ್ಚನೆ, ಇತರ ದೇವತಾಧ್ಯಾನ, ಇತರ ದೇವತಾ ವ್ರತಗಳು, ಕೃಚ್ಛ್ರರೂಪವಾದ ಪ್ರಾಯಶ್ಚಿತ್ತಕರ್ಮಗಳು, ಯೋಗಶಾಸ್ತ್ರ, ಸಾಂಖ್ಯದರ್ಶನ, ತಂತ್ರಕರ್ಮಗಳು, ಸ್ಮೃತಿಗಳೂ, ವೇದಗಳೂ, ಆಗಮಗಳೂ, ವಿವಿಧವಾದ ಯಂತ್ರತಂತ್ರಗಳೂ, ಧರ್ಮಶಾಸ್ತ್ರಾದಿ ನಿಬಂಧನಗ್ರಂಥಗಳೂ, ವರ್ಣಾಶ್ರಮಧರ್ಮಪ್ರಚೋದಕಗಳಾದ ಗ್ರಂಥಗಳೂ, ಇವೆಲ್ಲವೂ ಮಾನವವರ್ಗವನ್ನು ಸಂಸಾರಬಂಧನದಲ್ಲಿ ಮುಳುಗಿಸುವುದಕ್ಕೆ ಹೊರತು, ಸಾಕ್ಷಾನ್ಮುಕ್ತಿಸಾಧಕಗಳಲ್ಲ. ಶಿವಾನುಗ್ರಹ ಸಂಪಾದನೆಗೆ ಇವೆಲ್ಲಾ ಸಾಧನಗಳೇ ಹೊರತು ಇವುಗಳೇ ಶಿವಾನುಗ್ರಹವನ್ನು ಒದಗಿಸಲಾರವು. ॥೪೦-೪೧-೪೨॥

ಪರಶಿವನಲ್ಲಿ ಅಚಲವಾದ ಭಕ್ತಿಯನ್ನಿಟ್ಟು ಧ್ಯಾನಿಸುವುದೇ ಶಿವಾನುಗ್ರಹ ಪ್ರಾಪ್ತಿಗೆ ಮುಖ್ಯಸಾಧನ. ಆದರಿಂದ ಮಾನವರ ಸಕಲ ಬಂಧನಗಳೂ ಒಡನೆಯೇ ನಾಶವಾಗುವುವು. ಭಕ್ತರಾದವರು ತಮ್ಮ ನಿಶ್ಚಲವಾದ ಭಕ್ತಿಯ ಸಹಾಯದಿಂದ ಕಷ್ಟಗಳನ್ನು ದಾಟಬಲ್ಲರು; ಸನ್ಮಂಗಳಗಳನ್ನು ಪಡೆಯಬಲ್ಲರು. ಆದ್ದರಿಂದ ಎಲ್ಲರೂ ಮಹಾದೇವನಲ್ಲಿ ಸ್ಥಿರವಾದ ಭಕ್ತಿಯನ್ನಿಟ್ಟು ಮುಂದುವರಿಯಬೇಕು. ॥೪೩-೪೪॥

ಭಸ್ಮಾಭ್ಯಕ್ತತನುರ್ಧ್ಯಾಯೋ ಭವಲಿಂಗಂ ಸಮರ್ಚಯೇತ್ ।
ಕಾಲಭೀತ್ಯಾಪಿ ಮುಚ್ಯೇತ ಸಂಸಾರೋದ್ಧತಸರ್ಪತಃ ॥೪೫॥

ರುದ್ರಾಕ್ಷಮಾಲಾಭರಣೋ ರುದ್ರಸೂಕ್ತಜಪಾದರಃ ।
ಪಂಚಾಕ್ಷರಜಪೋ ನಿತ್ಯಂ ಸರ್ವದಾ ಶಿವಪೂಜಕಃ ॥೪೬॥

ಸ ಏವ ಮುಕ್ತಿಕಾಂತಾಯಾಃ ಪತಿರೀಶೇನ ಕಲ್ಪಿತಃ ।
ರುದ್ರಕ್ಷೇತ್ರಾದಿನಿರತೋ ವಿರತೋ ಭವಸಾಗರಾತ್ ॥೪೭॥

ಜಾಗರೂಕಃ ಸದಾ ತಂದ್ರೋ ಭವತೀಶ್ವರಚಿಂತಕಃ ।
ಜರಾಮೃತ್ಯುಜಗಜ್ಜನ್ಮಸುಖದುಃಖಾಕುಲಂ ಜಗತ್ ॥೪೮॥

ಪಶ್ಯನ್ಮಾ ಪ್ರಮದೋ ಭೂಯಾದ್ವಿಶ್ವೇಶಪದಪೂಜನೇ ।
ಆಯುರ್ಯಾತ್ಯೇವ ನಿಯತಪಾಮಕುಂಭೇ ಯಥಾ ಪಯಃ ॥೪೯॥

ಸಂಪದೋ ವಿಪದಸ್ತಾ ಹಿ ಸ್ವರ್ಗೇ ಧರ್ಮೇ ತು ನಶ್ವರಾಃ ।
ಶೋಕಮೋಹಸಮಾಕ್ರಾಂತಾಃ ಸಸುರಾಸುರಮಾನವಾಃ ॥೫೦॥

---

ಭಸ್ಮದಿಂದ ಬಳಿಯಲ್ಪಟ್ಟ ದೇಹವುಳ್ಳವನಾಗಿ, ಸದಾ ಪರಶಿವನನ್ನೇ ಧ್ಯಾನಿಸುತ್ತಾ ಶಿವಲಿಂಗವನ್ನು ಪೂಜಿಸುವವನಿಗೆ ಯಮಬಾಧೆಯೂ, ಸಂಸಾರವೆಂಬ ಮಹಾಸರ್ಪಭಯವೂ ನಿವಾರಣೆಯಾಗುವುದು. ಶಿವಪೂಜಕನಾದವನು ರುದ್ರಾಕ್ಷ ಮಾಲೆಯನ್ನು ಧರಿಸಿಕೊಂಡು, ರುದ್ರಸೂಕ್ತವನ್ನು ಪಠಿಸುತ್ತಾ, ಶಿವಪಂಚಾಕ್ಷರ ವನ್ನು ಜಪಿಸುತ್ತಾ ಸರ್ವದಾ ಶಿವಾರಾಧನೆ ಮಾಡುತ್ತಿರುವನು. ॥೪೫-೪೬॥

ಶಿವಾರಾಧಕನನ್ನೇ ಪರಶಿವನು ಮುಕ್ತಿಕಾಂತೆಗೆ ಪತಿಯನ್ನಾಗಿ ಮಾಡುವನು. ಆದ್ದರಿಂದ ಎಲೈ ಜೈಗೀಷವ್ಯಮಹರ್ಷಿಯೇ, ನೀನು ರುದ್ರಕ್ಷೇತ್ರಗಳಲ್ಲಿ ಸಂಚರಿಸುತ್ತಾ ವೈರಾಗ್ಯದಿಂದ ಭವಸಾಗರವನ್ನು ದಾಟುವವನಾಗು. ಈ ಪ್ರಪಂಚವೆಂಬುದು ಮೃತ್ಯು, ಮುಪ್ಪು, ಜನನ, ಮರಣ, ಸುಖ, ದುಃಖ ಇವುಗಳಿಂದ ಕೂಡಿದುದು. ಇಂತಹ ಪ್ರಪಂಚದಿಂದ ತಪ್ಪಿಸಿಕೊಂಡು, ಮೋಕ್ಷವನ್ನು ಸಂಪಾದಿಸಲು ಸದಾ ಈಶ್ವರನನ್ನು ಆರಾಧಿಸುತ್ತಿರಬೇಕು. ॥೪೭-೪೮॥

ಯಾವಾಗಲೂ ಈಶ್ವರನ ಪಾದಪೂಜೆಯಲ್ಲಿ ಉದಾಸೀನಮಾಡಬಾರದು. ಏಕೆಂದರೆ ಮಾನವರ ಆಯುಸ್ಸು ಹಸಿಯಮಡಕೆಯಲ್ಲಿ ನೀರು ಜಿನುಗಿಹೋಗುವಂತೆ

ಧನಂ ಕ್ಷಯಾಂತಂ ಸರ್ವೇಷಾಂ ಪ್ರಿಯಾಣಾಂ ವಿಪ್ರಯೋಗಿತಾ ।
ಪರೀಕ್ಷ್ಯ ಸರ್ವದುಃಖಾಂತಂ ವಿರಜ್ಯೇತೇತಿ ಹಿ ಶ್ರುತಿಃ ॥೫೧॥

ನಾಯುರಾಯಾಸನೀಯಂ ಹಿ ಧರ್ಮಾರ್ಥಾದ್ಯನುಚಿಂತನೈಃ ।
ಸ್ವಸ್ಥೋ ಹೃತ್ಸ್ಥಂ ಶಿವಂ ಧ್ಯಾಯೇತ್ತೇನ ದುಃಖೈರ್ವಿಮುಚ್ಯತೇ॥೫೨॥

॥ ಸೂತ ಉವಾಚ ॥

ಆಸ್ಸಂತರೇತ ಭವಮೇತದಸಾರಸಾರಂ
ಮೂಢಾತ್ಮನಾಂ ಮೃಗದೃಶಾ ಪರಿಚಿಂತಿತಂ ಯತ್ ।
ದುಃಖಾಯ ತದ್ಭ್ರಮುಪತಾಂ ಪರಿಧಾವಿತಂ ಯತ್
ತೃಷ್ಣಾಹರಂ ಭವತಿ ಕಿಂ ಮರುಗಂ ಯಥಾಪಃ ॥೫೩॥

---

ಕ್ಷಯಿಸಿಹೋಗುತ್ತಿರುವುದು. ಸಂಪತ್ತುಗಳಾಗಲಿ, ವಿಪತ್ತುಗಳಾಗಿ ನಶ್ವರವಾದವುಗಳು. ಸ್ವರ್ಗದಲ್ಲಿ ವಾಸಿಸುವ ದೇವತೆಗಳಿಗೂ, ಇತರ ಕಡೆಗಳಲ್ಲಿ ನೆಲಸಿರುವ ರಾಕ್ಷಸಾದಿ ಗಳಿಗೂ ಸಹ ದುಃಖ ಮತ್ತು ಅಜ್ಞಾನಗಳು ಎಂದಿಗೂ ತಪ್ಪಿದ್ದಲ್ಲ. ॥೪೯-೫೦॥

ಮಾನವರ ಸಕಲೈಶ್ವರ್ಯವೂ ಅವರು ಬದುಕಿರುವ ವರೆಗೆ ಮಾತ್ರ. ಯಾರು ಪ್ರೀತಿಪಾತ್ರರಾಗಿ ಕಂಡುಬರುವರೋ, ಅವರೆಲ್ಲರೂ ಒಂದು ದಿವಸ ದೂರವಾಗ ತಕ್ಕವರೇ. ಆದ್ದರಿಂದ ಕೇವಲ ಧರ್ಮಾದ್ಯರ್ಥಗಳನ್ನು ಯೋಚಿಸುತ್ತಲೇ ಇದ್ದು ತಮ್ಮ ಆಯುಸ್ಸನ್ನು ಕಳೆಯಬಾರದು. ಎಲ್ಲ ವಸ್ತುಗಳೂ ದುಃಖಪ್ರದವಾದವು ಗಳೆಂದು ತಿಳಿದು ಸರ್ವದಾ ತನ್ನ ಹೃದಯಕಮಲದಲ್ಲಿ ಪರಶಿವನನ್ನೇ ಧ್ಯಾನಿಸುತ್ತಾ ವೈರಾಗ್ಯಶಾಲಿಯಾಗಬೇಕೆಂದು ಶ್ರುತಿಯು ಸರ್ವದಾ ಬೋಧಿಸುತ್ತಿರುವುದು. ಆದ್ದರಿಂದ ಮಾನವರು ತಮ್ಮ ದುಃಖಪರಿಹಾರಕ್ಕಾಗಿ ಸರ್ವದಾ ಈಶ್ವರಪೂಜೆ ಮಾಡುತ್ತಿರಬೇಕು. ॥೫೧-೫೨॥

ಹೀಗೆ ಕುಮಾರಸ್ವಾಮಿಯು ಜೈಗೀಷವ್ಯನಿಗೆ ಬೋಧಿಸಿದ ಉಪದೇಶಾ ಮೃತವನ್ನು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ತಿಳಿಸಿ ಕೊನೆಯಲ್ಲಿ ಹೀಗೆಂದರು. ಈ ಸಂಸಾರವೆಂಬುದು ಕೇವಲ ಅಸಾರವಾದುದು. ನೋಡುವುದಕ್ಕೆ ಮಾತ್ರ ಇದೇ ಸಾರವೆಂಬ ಭ್ರಾಂತಿ ಎಲ್ಲರಿಗೂ ಬರುವುದು. ಚಂಚಲದೃಷ್ಟಿಯಿಂದ ಸದಾ ಸಂಸಾರದಲ್ಲಿ ಸುಖಭ್ರಾಂತಿಯನ್ನಿಟ್ಟು ಮುಂದುವರಿಯುವ ಮೂಢಾತ್ಮರಲ್ಲಿ ಯಾವನೊಬ್ಬನೂ ಇದರಿಂದ ಉತ್ತೀರ್ಣನಾಗಲಾರನು. ಶಾಶ್ವತ ಸುಖವನ್ನು

ತದ್ವದ್ಭ್ರಮೇಣ ಶಿವಪಾದಯುಗಂ ವಿಹಾಯ
ಪದ್ಮಾಸನಾಬ್ಜನಯನಾನ್ ಪರಿಶೀಲಯಂತಿ ।
ಪಾತಾಂತಧರ್ಮನಿಚಯಾನ್ಮರಣೋತ್ತರೇಽಪಿ
ಕಾರುಣ್ಯತೋ ಭವತಿ ಚೋದಿತ ಏಷ ಧರ್ಮಃ ॥೫೪॥

॥ ಸ್ಕಂದ ಉವಾಚ ॥

ಪ್ರಕಾಶ್ಯೋ ನೈವಾಯಂ ವಿಧಿರಪಿ ಕದಾಚಿದ್ದ್ವಿಜಪತೌ
ಪ್ರದೇಯೋಽಯಂ ಶಾಂತೇಷ್ವಸಮಭವಭಕ್ತೇಷು ನಿಯತಂ ।
ಶಿವಂ ಸ್ಪೃಷ್ಟ್ವೈತಾವದ್ಗದಿತಮಿದಮೇವಾದ್ಯ ಮಧುರಂ
ಶೃಣುತ್ವಂ ಭಕ್ತ್ಯೈವ ಶ್ರುತಿಗತಮಿದಂ ಜ್ಞಾನಮಧುನಾ ॥೫೫॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ಭೀಮಾಖ್ಯೇ
ಶಿವಲಿಂಗಪೂಜಾಮಹಿಮಾನುವರ್ಣನಂನಾಮ ಪಂಚಮೋಽಧ್ಯಾಯಃ

---

ಕಾಣಲಾರನು. ಜಲಭ್ರಾಂತಿಯನ್ನುಂಟುಮಾಡುವ ಬಿಸಿಲ್ಗುದುರೆಯು ಎಂದಾದರೂ ಬಾಯಾರಿಕೆಯನ್ನಪಹರಿಸೀತೆ ? ಅದರಂತೆಯೇ ಸಂಸಾರಸುಖದಲ್ಲಿ ಮುಳುಗಿದವರಿಗೆ ಚಿರಶಾಂತಿಯು ದೊರಕಲಾರದು. ॥೫೩॥

ಅಜ್ಞಾನಿಗಳಾದವರು ಪರಶಿವನು ಕರುಣೆಯಿಂದ ಉಪದೇಶಮಾಡಿರುವ ಶಿವಧರ್ಮವನ್ನುಲ್ಲಂಘಿಸಿ, ಅದನ್ನನುಸರಿಸದೇ, ಭ್ರಾಂತಿಯಿಂದ ಶಿವಪೂಜೆಯನ್ನು ಬಿಟ್ಟು, ಬ್ರಹ್ಮವಿಷ್ಣ್ವಾದಿ ಸಾಮಾನ್ಯ ದೇವತೆಗಳ ಅರ್ಚನೆಯಲ್ಲಿ ಮುಂದುವರಿಯುವರು. ಇದು ಕೇವಲ ಅಜ್ಞಾನ. ಶಿವಪೂಜೆಯೊಂದನ್ನು ಬಿಟ್ಟು ಉಳಿದ ಧರ್ಮಕಾರ್ಯಗಳೆಲ್ಲವೂ ವಿಧ್ವಂಸಿಯಾಗುವ ಸುಕೃತವನ್ನು ಕೊಡುವುವುಗಳೇ ಹೊರತು, ಸ್ಥಿರಶಾಂತಿಯನ್ನೊದಗಿಸಲಾರವು. ॥೫೪॥

ಎಂದು ಹೇಳುತ್ತಾ ಸೂತಮಹರ್ಷಿಗಳು, ಕುಮಾರಸ್ವಾಮಿಯು ಜೈಗೀಷವ್ಯ ಮಹರ್ಷಿಗೆ ಹೇಳಿದ ರಹಸ್ಯೋಕ್ತಿಯನ್ನು ಹೀಗೆ ವಿವರಿಸಿದರು :— ಈ ಶಿವಧರ್ಮವು ಅತಿ ರಹಸ್ಯವಾದದ್ದು. ಅಜ್ಞಾನಿಗಳಾದ ದ್ವಿಜರಿಗೂ ಇದನ್ನು ಸುಲಭವಾಗಿ ಉಪದೇಶಿಸಬಾರದು. ಯಾವನು ಶಾಂತಸ್ವಭಾವದವನೋ ಅಸದೃಶವಾದ ಶಿವಭಕ್ತಿಯನ್ನು ಹೊಂದಿರುವನೋ, ಅಂತಹವನಿಗೆ ಮಾತ್ರ ಇದು ಉಪದೇಶಾರ್ಹವಾದುದು.

ಈ ಅರ್ಪಣೆಯನ್ನು ನಾನು ಶಿವಸ್ಪರ್ಶಮಾಡುತ್ತಾ ಪ್ರಮಾಣಪೂರ್ವಕವಾಗಿ ಹೇಳಬಯಸುವೆನು. ಇಲ್ಲಿನವರೆಗೂ ನಾನು ಹೇಳಿದುದು ಶ್ರುತಿಗತವಾದ ಧರ್ಮವೆಂದು ತಿಳಿ. ಇದರಿಂದ ಶಿವಭಕ್ತಿಯ ಪ್ರಭಾವವನ್ನು ನೀನು ಮುಂದೆ ಅರಿಯುವೆ ಎಂದು ಬೋಧಿಸಿದನು. ||೫೫||

ಇಲ್ಲಿಗೆ ಶ್ರೀ ಶಿವರಹಸ್ಯದ ಎಂಟನೆಯ ಅಂಶದಲ್ಲಿ ಶಿವಲಿಂಗಪೂಜೆಯ ಮಹಿಮೆಯನ್ನು ವಿವರಿಸುವ ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಷಷ್ಠೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ವಕ್ಷ್ಯಾಮ್ಯದ್ಯ ಮುನಿಶ್ರೇಷ್ಠ ನಾಗಾನಾಂ ತಪಸಃ ಕ್ರಿಯಾಂ ।
ಅಪರ್ಣಾಪತಿಪಾದಾಬ್ಜಧ್ಯಾನಾಸಕ್ತಾ ಸುಪರ್ಣಜಂ ॥೧॥

ಭಯಂ ತ್ಯಕ್ತ್ವಾ ವಿಜಹ್ರುಸ್ತೇ ಆಕಲ್ಪಂ ಸ್ವಭವನ್ತಿವೇ ।
ಇಮಮರ್ಥಂ ಪುರಾ ದೇವೀ ಕೈಲಾಸೇ ಪ್ರಾಹ ಶಂಕರಂ ॥೨॥

ವಿಸ್ಮಿತಾತೀವ ಸಾ ವೀಕ್ಷ್ಯ ಭೀತಾ ಪನ್ನಗಸತ್ತಮಾನ್ ॥೩॥

---

## ಆರನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳೊಡನೆ ಹಿಂದೆ ನಾಗಲೋಕದ ಸರ್ಪಗಳು ಅತಿಶಯವಾಗಿ ತಪಸ್ಸುಮಾಡಿ ಈಶ್ವರನನ್ನು ಮೆಚ್ಚಿಸಿ ಗರುಡನಿಂದ ಒದಗಿದ ಭಯವನ್ನು ಕಳೆದುಕೊಂಡು, ಕೊನೆಗೆ ಪರಶಿವನಿಗೆ ಅಲಂಕಾರ ವಸ್ತುವಾದ ವಿಷಯವನ್ನು ತಿಳಿಸಲಿಚ್ಛಿಸಿ ಹೀಗೆಂದನು. “ ಎಲೈ ಜೈಗೀಷವ್ಯಾದಿಗಳೇ, ನಾಗ ಲೋಕದ ಸರ್ಪಗಳು, ಪರಶಿವನಿಗೆ ಅಲಂಕಾರಸಾಮಗ್ರಿಗಳಾದ ಪರಿಯನ್ನೂ, ಗರುಡಭಯವನ್ನು ಕಳೆದುಕೊಂಡ ಸನ್ನಿವೇಶವನ್ನೂ ತಿಳಿಸಬೇಕೆಂದು, ಒಂದು ಸಾರಿ ಪಾರ್ವತೀದೇವಿಯೇ ಪರಶಿವನೊಡನೆ ಪ್ರಾರ್ಥಿಸಿಕೊಂಡಳು. ಆಗ ಪಾರ್ವತೀದೇವಿಯು ಭಯಂಕರವಾದ ಸರ್ಪಗಳಿಗೆ ಹೆದರಿ ಈ ಮಾತನ್ನಾಡಿದಳು. ॥೧-೨-೩॥

॥ ಶ್ರೀ ದೇವ್ಯುವಾಚ ॥

ನಾಗೈರೇತೈರ್ಮಹಾದೇವ ದೇವದೇವ ಜಗತ್ಪತೇ ।
ತವಾಂಗಸಂಗಜನಕಂ ಪುಣ್ಯಂ ಚ ಕಿಮುಪಾರ್ಜಿತಂ ॥೪॥

ಕಿಮೇಭಿಃ ಶಂಗಲಿಂಗಾರ್ಚಾ ಭುಜಂಗೈಃ ಕಿಂ ಕೃತಾ ಶಿವ ।
ತನ್ಮೇ ವದ ವಿಶೇಷೇಣ ಕರುಣಾಕರ ಶಂಕರ ॥೫॥

ಇತ್ಥಂ ಗೌರ್ಯಾ ಹರಃ ಪೃಷ್ಟೋ ತದುದಂತಮುವಾಚ ಹ ॥೬॥

॥ ಶಿವ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ನಾಗಾನಾಂ ಪೂಜನಂ ಮಯಿ ।
ಆಕಲ್ಪಾಹ್ಯಭವನ್ಮೇದ್ಯ ತೇ ಸರ್ಪಾ ಭಾಗ್ಯಗೌರವೈಃ ॥೭॥

ಮಮ ಪ್ರಿಯತರಾಸ್ಸರ್ವೇ ಕಂದರ್ಪಾರಾತಿಪೂಜಯಾ ।
ಕದ್ರೂಃ ಸುಪರ್ಣೀ ಚ ಪುರಾ ವಿವದೇತೇ ಶಿವೇ ಕಿಲ ॥೮॥

ಅಶ್ವವಾಲಾಂಸ್ತತಃ ಕೃಷ್ಣಾಂಶ್ಚಕಾರ ಕುಟಿಲೇನ ಹಿ ।
ಆಶೀವಿಷವಿಷೇಣೈವ ಪಣಿತಾ ಸಾನ್ಯಯಾ ಸಹ ॥೯॥

---

" ಮಹಾದೇವನೇ, ಭಯಂಕರವಾದ ಈ ಸರ್ಪಗಳು ಈ ದೇಹಸ್ಪರ್ಶವನ್ನು ಪಡೆದು ಅಲಂಕಾರವಸ್ತುಗಳಾಗಿವೆಯಷ್ಟೆ. ಈ ಭಾಗ್ಯವು ಅವುಗಳಿಗೆ ಹೇಗೆ ಸಂಭವಿಸಿತು ? ನಿನ್ನ ಲಿಂಗಾರ್ಚನೆಯನ್ನು ಆ ನಾಗಗಳು ಯಾವ ರೀತಿ ಯಾವಾಗ ನೆರವೇರಿಸಿದುವು ? ಈ ಎಲ್ಲ ವಿಷಯವನ್ನೂ ನನಗೆ ವಿಸ್ತಾರವಾಗಿ ತಿಳಿಸಬೇಕೆಂದು" ಪ್ರಾರ್ಥಿಸಲು, ॥೪-೫॥

ಗೌರೀದೇವಿಯ ಆ ಮಾತುಗಳನ್ನು ಕೇಳಿ ಅದೇ ವಿಷಯವಾಗಿ ಶಂಕರನು ಈರೀತಿ ಮಾತನಾಡತೊಡಗಿದನು. " ಎಲೌ ದೇವಿಯೇ, ನಾಗಗಳು ಹಿಂದೆ ನನ್ನನ್ನು ವಿಶೇಷವಾಗಿ ಪೂಜಿಸಿ, ನನಗೆ ಅಲಂಕಾರವಸ್ತುಗಳಾದ ವಿಷಯವನ್ನು ಈಗ ವಿವರಿಸಿ ಹೇಳುವೆನು ಕೇಳು. ಹಿಂದೆಯೇ ಈ ನಾಗಗಳು ನನ್ನನ್ನು ಬಹಳವಾಗಿ ಪೂಜಿಸಿ ನನ್ನ ಮೆಚ್ಚುಗೆಯನ್ನು ಪಡೆದಿದ್ದುವು. ಕದ್ರೂದೇವೀ, ಸುಪರ್ಣೀ ದೇವಿಯರೆಂಬ ಇಬ್ಬರು ಸವತಿಯರು ಪರಸ್ಪರವಾಗಿ ಒಂದು ದಿವಸ ಒಂದು ಚರ್ಚೆಗಾರಂಭಿಸಿದರು. ॥೬-೭-೮॥

ದೇವಲೋಕದ ಕುದುರೆಯ ಬಾಲವು ಕಪ್ಪಾಗಿದೆ ಎಂದು ಕದ್ರೂದೇವಿಯೂ, ಬೆಳ್ಳಗಿದೆಯೆಂದು ಸುಪರ್ಣಿಯೂ, ಹಟವಾದ ಮಾಡಿದರು. ಇದನ್ನು ತಿಳಿದ

ವ್ರೀಡಾಯುತಾ ಸಪತ್ನೀ ಸಾ ಸುಪರ್ಣೀ ದಾಸ್ಯಭಾವತಃ ।
ಸಾ ದುಃಖಿತಾ ಸುತಂ ಪ್ರಾಹ ಸ್ವಸ್ಯ ದಾಸ್ಯವಿಮೋಕ್ಷಣೇ ॥೧೦॥

ಅಮೃತಾಹರಣಾರ್ಥಾಯ ಗರುತ್ಮಂತಂ ತದಾ ಮುನೇ ॥೧೧॥

॥ ಸುಪರ್ಣ್ಯುವಾಚ ॥

ಕದ್ರೂಕೌಟಿಲ್ಯತಃ ಪುತ್ರ ತತ್ಪುತ್ರೈಶ್ಚ ವಿಷೋಲ್ಬಣೈಃ ।
ಫಣಿತೇನ ಮಯಾ ಪೂರ್ವಂ ದೇವಗಂಧರ್ವಬಾಲಕೇ ॥೧೨॥

ನಿತ್ಯಂ ಶ್ವೇತೇನೇತಿ ಮಯಾ ಕೃಷ್ಣೇತ್ಯುಕ್ತೇ ತಯಾ ಪುನಃ ।
ದಾಸ್ಯಂ ತದಾವಯೋರ್ವಾಕ್ಯಾತ್ಸತ್ಯಭೂತಾ ಭವತ್ವಿತಿ ॥೧೩॥

ದಾಸ್ಯಭಾವಂ ಸಮಾಪನ್ನಾ ಸಪತ್ನ್ಯಾಃ ಪುತ್ರನಾಶಯ ॥೧೪॥

---

ಕದ್ರೂದೇವಿಯ ಮಕ್ಕಳಾದ ನಾಗಗಳು ಕೂಡಲೆ ಮೋಸದಿಂದ ಹೋಗಿ ಬೆಳ್ಳಗಿದ್ದ ಆ ಉಚ್ಚೈಃಶ್ರವಸ್ಸಿನ ಬಾಲವನ್ನು ತಮ್ಮ ವಿಷವೇಗದಿಂದ ಕಪ್ಪಾಗಿ ಮಾಡಿದ್ದರು. ಅದನ್ನರಿಯದೆ ಸುಪರ್ಣಿಯು ತನ್ನ ಸವತಿಗೆ ಸೋತೆನೆಂದು ನಾಚಿಕೆಪಟ್ಟಳು. ಮೊದಲೇ ನಿಶ್ಚಿತವಾಗಿದ್ದಂತೆ ಸೋತ ಸುಪರ್ಣಿಯು ಗೆದ್ದ ಕದ್ರೂದೇವಿಗೆ ದಾಸಿಯಾಗಬೇಕಾಯಿತು. ಆದರೆ ದೇವಲೋಕದಿಂದ ಅಮೃತವನ್ನು ತಂದು ಕದ್ರೂದೇವಿಗೆ ಒಪ್ಪಿಸಿದರೆ ಈ ದಾಸ್ಯವು ವಿಮೋಚನೆಯಾಗುವುದೆಂದು ಅವರ ಒಪ್ಪಿಗೆಯಾಗಿದ್ದಿತು. ಆದರಂತೆಯೇ ಸುಪರ್ಣಿಯು ವ್ಯಸನಪಡುತ್ತಾ ತನ್ನ ಮಗನಾದ ಗರುಡನೊಡನೆ ತನ್ನ ಕಷ್ಟವನ್ನೆಲ್ಲಾ ಹೇಳಿಕೊಂಡು ದೇವಲೋಕದಿಂದ ಅಮೃತವನ್ನು ತಂದು ತನ್ನ ದಾಸ್ಯವನ್ನು ಪರಿಹರಿಸಬೇಕೆಂದು ಮಗನನ್ನು ಹೀಗೆ ಪ್ರಾರ್ಥಿಸಿದಳು. ॥೯-೧೦-೧೧॥

"ಎಲೈ ಗರುಡನೇ, ಕದ್ರೂದೇವಿಯ ಮೋಸಕ್ಕೆ ನಾನು ಈಗ ಒಳಗಾಗಿ ಅವಳಿಗೆ ದಾಸಿಯಾಗಿರುವೆನು. ದೇವಲೋಕದ ಉಚ್ಚೈಶ್ರವಸ್ಸೆಂಬ ಕುದುರೆಯ ಬಾಲವು ಬೆಳ್ಳಗಿದೆಯೆಂದು ನಾನು ಹೇಳಿದೆನು, ಕಪ್ಪಗಿದೆ ಎಂದು ಆವಳು ವಾದಿಸಿದಳು. ಕೂಡಲೆ ಯಾರ ಮಾತು ನಿಜವಾಗುವುದೋ ಅವರಿಗೆ ಸುಳ್ಳುಹೇಳಿದವಳು ದಾಸಿಯಾಗಿರಬೇಕೆಂಬ ಪಂಥವೊಂದು ಆಗ ಏರ್ಪಟ್ಟಿತು. ॥೧೨-೧೩॥

ಅದನ್ನು ಕೇಳಿ ಕದ್ರೂದೇವಿಯ ಮಕ್ಕಳು ಹೋಗಿ ತಮ್ಮ ವಿಷವೇಗದಿಂದ ಆ ಕುದುರೆಯ ಬಾಲವು ಕಪ್ಪಾಗುವಂತೆ ಮಾಡಿದರು. ಅನಂತರ ನಾವು ನೋಡಲಾಗಿ

ದೃಷ್ಟ್ವಾ ಪುತ್ರೈಃ ಕೃತಂ ತಸ್ಯಾ ಬಾಲಾನಾಮುಸಿತಕ್ರಿಯಾಂ ।
ಅಮೃತಾಹರಣೇನೈವ ತ್ವಯಾ ತೀರ್ಣಾಂಡಜೇಶ್ವರ ।
ಏತದರ್ಥಂ ಹಿ ಪಿತರೌ ಪುತ್ರಂ ಕಾಂಕ್ಷಯತಸ್ಸುತ ॥೧೫॥

ಪುನ್ನಾಮ್ನೋ ನರಕಾತ್ತ್ರಾತಾ ಪುತ್ರ ಏವ ನ ಸಂಶಯಃ ।
ಯದಾಮೃತಂ ತೇ ದಾಸ್ಯಾಮಿ ತದಾ ದಾಸ್ಯಂ ನ ಚೈವ ಮೇ ॥೧೬॥

ಇತಿ ಪ್ರೋಕ್ತಂ ಮಯಾ ತಸ್ಯೈತತ್ಪುತ್ರಂ ಪರಿಪಾಲಯ ।
ಯೋ ದುಃಖಾತ್ತ್ರಾಯತೇ ಪುತ್ರ ಪಿತರೌ ಸ ಸುತೋತ್ತಮಃ ॥೧೭॥

ಅಸ್ಮಾದ್ದುಃಖಾಂಬುಸಂರೋಧಾತ್ಸಮುತ್ತಾರಯ ಮಾಂ ದ್ರುತಂ॥೧೮॥

॥ ಸೂತ ಉವಾಚ ॥

ಇತಿ ಮಾತುರ್ವಚಶ್ಶ್ರುತ್ವಾ ಗರುಡಃ ಪತತಾಂ ವರಃ ।
ಪ್ರಾಹ ಪ್ರಣಮ್ಯ ತಾಂ ದೇವೀಮೇವಮಸ್ತ್ವಿತಿ ಹರ್ಷಿತಃ ॥೧೯॥

---

ಕದ್ರೂದೇವಿಯ ಮಾತಿನಂತೆ ಅದು ಕಪ್ಪಾಗಿದ್ದಿತು. ನಮ್ಮ ಮಾತಿನ ಸಂಧದಂತೆ ಅಂದಿನಿಂದ ನಾನು ಅವಳ ದಾಸಿಯಾಗಿರುವೆನು. ಆದರೆ ಅಮೃತವನ್ನು ತಂದು ಕದ್ರೂದೇವಿಗೆ ಕೊಟ್ಟರೆ ಆಗ ನನ್ನ ದಾಸೀಭಾವವು ನಿವೃತ್ತಿಯಾಗುವುದು. ತಂದೆ ತಾಯಿಗಳಿಗೆ ಏನಾದರೂ ವಿಪತ್ತು ಒದಗಿದಾಗ ಮಕ್ಕಳು ಅದನ್ನು ಪರಿಹರಿಸುವರೆಂದು ಅವರು ಬಯಸುತ್ತಾರೆ. ಆದ್ದರಿಂದ ಸತ್ಪುತ್ರನಾದ ನೀನು ಈಗ ಅಮೃತವನ್ನು ತಂದು ನನ್ನನ್ನು ದಾಸ್ಯದಿಂದ ತಪ್ಪಿಸು. ॥೧೪-೧೫॥

ಮಾತಾಪಿತೃಗಳನ್ನು ಪುತ್ ಎಂಬ ನರಕದಿಂದ ತಪ್ಪಿಸುವವನೇ ಪುತ್ರನೆಂದು ಲೋಕವಿದಿತವಾಗಿದೆ. ಈ ನರಕದಂತಿರುವ ದಾಸ್ಯದಿಂದ ನನ್ನನ್ನು ಉದ್ಧರಿಸುವುದು ನಿನ್ನ ಕರ್ತವ್ಯವಲ್ಲವೆ! ನಾನು ಅಮೃತವನ್ನು ತಂದುಕೊಟ್ಟ ಗಳಿಗೆಯಿಂದಲೇ ನಿನಗೆ ನಾನು ದಾಸಿಯಾಗಿರುವುದಿಲ್ಲವೆಂದು ಅವಳಿಗೆ ಖಂಡಿತವಾಗಿ ಹೇಳಿರುವೆನು. ಮಾತಾಪಿತೃಗಳಿಗೆ ಬಂದಿದ್ದ ದುಃಖವನ್ನು ತಪ್ಪಿಸಿ ಕಾಪಾಡುವ ಮಗನೇ ಸತ್ಪುತ್ರನು. ॥೧೬-೧೭॥

ಹೇಗಾದರೂ ಮಾಡಿ ಈ ದುಃಖಸಮುದ್ರದಿಂದ ನನ್ನನ್ನು ಪಾರುಮಾಡು" ಎಂದು ದೈನ್ಯದಿಂದ ಕೇಳಲು, ಪಕ್ಷಿಶ್ರೇಷ್ಠನಾದ ಗರುಡನು ತಾಯಿಯ ಮಾತು

ಗತಃ ಸ ಕಾಶ್ಯಪಿಸ್ತಸ್ಮಾನ್ಮೇರೋಃ ಶಿಖರಮುತ್ತಮಂ ।
ನಾನಾದ್ರುಮಲತೋಪೇತಂ ಫಲಪುಷ್ಪವನಾನ್ವಿತಂ ॥೨೦॥

ಮೃಗಾಂಡಜವರೈರ್ಯುಕ್ತಂ ಸ ಗತ್ವಾ ಪಿತುರಾಶ್ರಮಂ ।
ತಂ ಪಶ್ಯಂತಂ ತಪೋರಾಶಿಂ ಪಿತರಂ ಕಾಶ್ಯಪಂ ತದಾ ॥೨೧॥

ಭಸ್ಮರುದ್ರಾಕ್ಷಸಂಪನ್ನಂ ಶಿವಾರಾಧನತತ್ಪರಂ ।
ಶಾಂಭವೈರ್ಮುನಿಭಿರ್ಯುಕ್ತಂ ರುದ್ರಸೂಕ್ತಜಪಾದರಂ ॥೨೨॥

ಪ್ರಣಮ್ಯ ವಿನಯೇನೈವ ಸ್ಥಿತಸ್ತಸ್ಯೈವ ಸಂನಿಧೌ ।
ತೇನಾನುಮೋದಿತಸ್ತತ್ರ ನಿಷಸಾದಾಂಡಜೇಶ್ವರಃ ॥೨೩॥

ತಂ ದೃಷ್ಟ್ವಾ ಸ್ವಸುತಂ ವಿಪ್ರೋ ಗರುಡಂ ಖಿನ್ನಮಾನಸಂ ।
ಉವಾಚ ವಿನಯೋದಾರಂ ಕಶ್ಯಪೋಽಬ್ಜಜಸಂಭವಃ ॥೨೪॥

---

ಗಳನ್ನು ಕೇಳಿ ಒಡನೆಯೇ ಭಕ್ತಿಯಿಂದ ತಾಯಿಗೆರಗಿ ಹಾಗೆಯೇ ಆಗಲೆಂದು ಒಪ್ಪಿ ಮೇರುಶಿಖರವನ್ನು ಕುರಿತು ಪ್ರಯಾಣಮಾಡಿದನು. ಕಾಶ್ಯಪಪುತ್ರನಾದ ಗರುಡನು ತ್ವರೆಯಿಂದ ಮೇರುಶಿಖರವನ್ನು ತಲಪಿದನು. ಅದು ಫಲಪುಷ್ಪಭರಿತಗಳಾದ ಅನೇಕ ಮರಗಳಿಂದಲೂ, ಲತೆಗಳಿಂದಲೂ ಶೋಭಾಯಮಾನವಾಗಿದ್ದಿತು. ॥೧೯-೨೦॥

ಅಸಂಖ್ಯಾಕಗಳಾದ ಮೃಗಪಕ್ಷಿಗಳು ಅಲ್ಲಿ ವಾಸವಾಗಿದ್ದುವು. ಅಂತಹ ಮೇರು ಶಿಖರದಲ್ಲಿದ್ದ ತಂದೆಯಾದ ಕಾಶ್ಯಪಮಹರ್ಷಿಯ ಆಶ್ರಮಕ್ಕೆ ಹೋಗಿ ಅಲ್ಲಿ ಭಸ್ಮರುದ್ರಾಕ್ಷಿಗಳಿಂದ ಅಲಂಕೃತನಾಗಿ, ಶಿವಾರಾಧನೆಮಾಡುತ್ತಾ ಪರಮ ಶಾಂಭವ ರೆನಿಸಿದ ಮುನಿಗಳಿಂದ ಪರಿವೃತನಾಗಿ, ರುದ್ರಸೂಕ್ತಗಳನ್ನು ಸರ್ವದಾ ಪಠಿಸುತ್ತಾ ಕುಳಿತಿದ್ದ ತಂದೆಯನ್ನು ನೋಡಿದನು. ॥೨೧-೨೨॥

ಒಡನೆಯೇ ಗರುಡನು ತಂದೆಗೆ ವಿನಯದಿಂದ ವಂದಿಸಿ ಅವನ ಅಪ್ಪಣೆಯಂತೆ ತಂದೆಯ ಪಕ್ಕದಲ್ಲಿ ಕುಳಿತುಕೊಂಡನು. ಹಾಗೆ ಬಾಡಿದ ಮುಖದಿಂದ ಬಂದು ವಿನಯದಿಂದ ವಂದಿಸಿ ನಿಂತ ತನ್ನ ಮಗನನ್ನು ನೋಡಿ ಬ್ರಹ್ಮಮಾನಸಪುತ್ರನಾದ ಕಶ್ಯಪಮಹರ್ಷಿಯು ಹೀಗೆಂದನು. ॥೨೩-೨೪॥

॥ ಕಶ್ಯಪ ಉವಾಚ ॥

ಕುತಸ್ಸಮಾಗತಂ ವತ್ಸ ತ್ವಂ ವಾ ಸಂಪ್ರತಿ ಗಚ್ಛಸಿ ।
ಕಿಂ ಚಿಕೀರ್ಷುರಿಹ ಪ್ರಾಪ್ತಃ ಪರಿಕ್ಲಿಷ್ಟೋಽಭಿದೃಶ್ಯಸೇ ॥೨೫॥

ಸ ಪಿತುರ್ವಚನಂ ಶ್ರುತ್ವಾ ಪ್ರಾಂಜಲಿಃ ಪ್ರಾಹ ತಂ ಮುನಿಂ ॥೨೬॥

॥ ಗರುಡ ಉವಾಚ ॥

ಭಗವಂಸ್ತಪಸಾಂ ಶ್ರೇಷ್ಠ ಸಾಕ್ಷಾದಬ್ಜಜಸಂಭವ ।
ಮಾತ್ರೋರ್ವಿವದತೋರೇವಂ ದಾಸ್ಯಭಾವೇನ ಖೇದಿತಃ ॥೨೭॥

ಮಾತುರ್ದಾಸ್ಯವಿಮೋಕ್ಷಾಯ ತ್ವತ್ಸಕಾಶಮಿಹಾಗತಃ ।
ಭವಾನ್‌ಪಿತಾ ಶಾಂಭವಶ್ಚ ಮಹಾತ್ಮಾ ಶಿವಭಾವನಃ ॥೨೮॥

ಅಮೃತಾಹರಣೇ ಯತ್ನಂ ಕರ್ತುಮಿಚ್ಛಾಮಿ ಸಾಂಪ್ರತಂ ।
ಮಾತುರಾನೃಣ್ಯಮಿಚ್ಛಾಮಿ ಕೃತ್ವಾ ದಾಸ್ಯವಿಮೋಚನಂ ॥೨೯॥

ಕೇನ ಪ್ರಾಪ್ತಿರ್ಭವೇನ್ಮಹ್ಯಂ ತದುದಾಹರ ಮಾಂ ಪ್ರತಿ ।
ತದದ್ಯ ಭಗವಾನೇವ ಬ್ರವೀತು ಕೃಪಯಾ ಮಯಿ ॥೩೦॥

---

"ವತ್ಸ, ನೀನು ಈಗ ಎಲ್ಲಿಂದ ಬಂದೆ? ಈಗ ನಿನ್ನ ಪ್ರಯಾಣವೆಲ್ಲಿಗೆ? ಯಾವ ಕಾರ್ಯಸಾಧನೆಗಾಗಿ ಹೊರಟಿರುವೆ? ದುಃಖಿತನಾಗಿರುವೆಯೇಕೆ?" ಎಂದು ಪ್ರಶ್ನಿಸಿದ ತಂದೆಗೆ ಉತ್ತರವಾಗಿ ಗರುಡನು ಅಂಜಲಿಬದ್ಧನಾಗಿ ಹೀಗೆಂದನು.॥೨೫-೨೬॥

"ಬ್ರಹ್ಮಮಾನಸಪುತ್ರನೇ, ತಪಸ್ವಿಶ್ರೇಷ್ಠನೇ, ನಮ್ಮ ತಾಯಂದಿರಿಬ್ಬರೂ ಒಂದು ಪಂದ್ಯವನ್ನು ನಡೆಸಿ, ಅದರಲ್ಲಿ ನನ್ನ ತಾಯಿಯು ಸೋತು, ದಾಸಿಯಾಗಿರುವಳು. ಆ ದಾಸ್ಯವನ್ನು ತಾಯಿಗೆ ತಪ್ಪಿಸಲೋಸುಗ ಈಗ ಅತಿ ಪ್ರಯಾಸದಿಂದ ಅಮೃತವನ್ನು ತರಬೇಕಾಗಿದೆ. ಪರಮ ಶಾಂಭವನೂ, ಮಹಾದೇವಸ್ವರೂಪಿಯೂ, ಸಾಕ್ಷಾಜ್ಜನಕನೂ ಆದ ನಿನ್ನ ಸಮೀಪದಲ್ಲಿ ನನ್ನ ಈ ಕಷ್ಟವನ್ನು ಹೇಳಿಕೊಳ್ಳುವುದಕ್ಕಾಗಿ ಇಲ್ಲಿಗೆ ಬಂದೆನು. ॥೨೭-೨೮॥

ಅಮೃತವನ್ನು ತಂದು ತಾಯಿಗೆ ಕೊಟ್ಟು ಅದರಿಂದ ಆಕೆಯ ದಾಸ್ಯವನ್ನು ತಪ್ಪಿಸುವುದೇ ನನ್ನ ಇಂದಿನ ಮುಖ್ಯ ಕರ್ತವ್ಯ. ಈ ಕಾರ್ಯವು ಸಿದ್ಧಿಸುವ ಬಗೆ

ಕಂ ಯಾಯಾಂ ಶರಣಂ ಲೋಕೇ ವಿಹಾಯೈಕಂ ಪ್ರಜಾಪತಿಂ ।
ಇತ್ಯಂಡಜವಚಶ್ಶ್ರುತ್ವಾ ಕಾಶ್ಯಪೋ ಧ್ಯಾನಚಕ್ಷುಷಾ ॥೩೧॥

ಸಮೀಕ್ಷ್ಯ ಪತ್ನ್ಯಾಃ ಕೌಟಿಲ್ಯಂ ಕನೀಯಸ್ಯಾ ಮುನೀಶ್ವರಃ ।
ಉವಾಚ ಪತಗಶ್ರೇಷ್ಠಂ ಶಿಪಿವಿಷ್ಟಪದಾಶ್ರಯಃ ॥೩೨॥

॥ ಕಶ್ಯಪ ಉವಾಚ ॥

ಸಾಪತ್ನ್ಯಂ ನಾಮ ಲೋಕೇಷು ಪುತ್ರ ಕೌಟಿಲ್ಯದಂ ಸದಾ ।
ಸಾಪತ್ನ್ಯಾದ್ಧಿ ಮಹದ್ದುಃಖಂ ದೇವೈರ್ದೈತ್ಯೈಃ ಪುರಾ ಸುತ ॥೩೩॥

ಸಗರೋಂಗಾರಸದೃಶಃ ಪ್ರಾಪ್ತಿಃ ಸ್ವರ್ಗೇಚ್ಛಯಾಂಡಜ ।
ಧ್ರುವೋ ದಾಶರಥಿಶ್ಚೈವ ಪಾಂಡವಾ ದುಃಖಭೂಮಯಃ ॥೩೪॥

ಸಾಪತ್ನ್ಯೈರೇವ ಕೌಟಿಲ್ಯಾತ್ ಕ್ಷತ್ರಿಯಾ ಭ್ರಂಶಿತಾಃ ಪದಾತ್ ।
ನಲೋಪಿ ಪುಷ್ಕರೇಣೈವ ವಿಜಿತೋ ನೃಪನಂದನಃ ॥೩೫॥

---

ಹೇಗೆ? ಯಾವ ಕಾರ್ಯಮಾಡಿದರೆ ಈ ನನ್ನ ಕರ್ತವ್ಯವು ನನಗೆ ಸುಗಮವಾದೀತು? ಪೂಜ್ಯನಾದ ನೀನೇ ನನಗೆ ಈಗ ದಯೆಯಿಂದ ಹೇಳಬೇಕು. ॥೨೯-೩೦॥

ಪರಬ್ರಹ್ಮಸದೃಶನಾದ ನಿನ್ನನ್ನು ಬಿಟ್ಟು ಈಗ ನಾನು ಮತ್ತಾರನ್ನು ಮೊರೆಹೊಗಲಿ" ಎಂದು ಅತಿ ದೈನ್ಯದಿಂದ ಆಡಿದ ಮಾತುಗಳನ್ನು ಕೇಳಿ, ಕಾಶ್ಯಪ ಮಹರ್ಷಿಯು ಯೋಗದೃಷ್ಟಿಯಿಂದ ತನ್ನ ಕಿರಿಯ ಹೆಂಡತಿಯಾದ ಕದ್ರೂದೇವಿಯ ಕುಟಿಲವನ್ನು ತಿಳಿದು, ಕೂಡಲೇ ಪರಶಿವನು ಧ್ಯಾನಮಾಡುತ್ತಾ ಶಾಂಭವಶ್ರೇಷ್ಠನಾದ ಕಾಶ್ಯಪನು ಪಕ್ಷಿಶ್ರೇಷ್ಠನಾದ ಗರುಡನೊಡನೆ ಹೀಗೆಂದನು. ॥೩೧-೩೨॥

ವತ್ಸನೇ, ಲೋಕದಲ್ಲಿ ಸವತಿಮತ್ಸರವೆಂಬುದು ಬಹು ಮೋಸದ ಕಾರ್ಯಗಳನ್ನು ಎಸಗಬಲ್ಲುದು. ಈ ಸಪತ್ನೀಮತ್ಸರದ ಫಲವಾಗಿ ಅನೇಕ ದೇವತೆಗಳು ದೈತ್ಯರೂ ಸಹ ಬಹುವಾಗಿ ಶ್ರಮಪಟ್ಟಿರುವರು. ಸಗರಚಕ್ರವರ್ತಿಯ ಮಕ್ಕಳು ಬೂದಿಯಾದುದೂ, ಧ್ರುವನು ಅರಣ್ಯವನ್ನು ಹೊಕ್ಕು ಕಷ್ಟಪಟ್ಟುದೂ, ಶ್ರೀರಾಮನು ಕಾಡಿನಲ್ಲಿ ಅಲೆದು ಪತ್ನಿಯನ್ನು ಕಳೆದುಕೊಂಡು ಪರಿತಾಪಪಟ್ಟುದೂ, ಪಾಂಡವರು ಹದಿಮೂರು ವರ್ಷಕಾಲ ಪರಸ್ಥಳದಲ್ಲಿ ಪ್ರವಾಸಮಾಡಿದುದೂ ಈ ಸವತಿಮಾತ್ಸರ್ಯದ ಪರಿಣಾಮವಲ್ಲವೆ! ॥೩೩-೩೪॥

ಅನೇಕ ಕ್ಷತ್ರಿಯರು ಈ ಸವತಿಮತ್ಸರದ ಪರಿಣಾಮವಾಗಿ ತಮ್ಮ ತಮ್ಮ

ಪುನರಭ್ಯರ್ಚ್ಯ ದೇವೇಶಂ ಸ್ವರಾಜ್ಯಂ ಲೇಭಿರೇ ನೃಪಾಃ ।
ಬಾಹ್ಯಾಶ್ಚ ಶತ್ರವಸ್ತ್ವನ್ಯೇ ಸಾಪತ್ನ್ಯಾಹ್ಯಾಂತರಾಸ್ಸ್ಮೃತಾಃ ॥೩೬॥

ಕಾದ್ರವೇಯೈಃ ಕೃತಂ ಕರ್ಮ ಮಾತುಸ್ತೇ ದಾಸ್ಯಕಾರಣಂ ।
ಅಮೃತಾಹರಣಾರ್ಥಾಯ ಸುರಾಣಾಂ ವಿಜಯಾಯ ಚ ॥೩೭॥

ಉಪಾಯಂ ತೇ ಪ್ರವಕ್ಷ್ಯಾಮಿ ವಿಜಯಾಯ ರಣೇ ದ್ವಿಜ ।
ಅನರ್ಚಿತಮಹೇಶಾನಾಂ ಜಯೋ ನೈವ ಭವಿಷ್ಯತಿ ॥೩೮॥

ಸಮಭ್ಯರ್ಚ್ಯ ಮಹಾದೇವಂ ಸುರಾಶ್ಚ ಜಿತಶತ್ರವಃ ।
ತಸ್ಮಾದಾರಾಧಯೇಶಾನಂ ಜೇತಾರಮಪರಾಜಿತಂ ॥೩೯॥

ಕ್ಷಯದ್ವೀರಂ ಮಹಾದೇವಂ ಶಂಕರಂ ಶರಣಂ ವ್ರಜ ।
ಯದಿ ದೇವಃ ಶರಣ್ಯಶ್ಚ ಜಯಸ್ತಸ್ಯ ನ ದುರ್ಲಭಃ ॥೪೦॥

---

ಉತ್ತಮವಾದ ಸ್ಥಾನಗಳನ್ನು ಕಳೆದುಕೊಂಡರು. ನಳಮಹಾರಾಜನು ದಾಯಾದಿಯಾದ ಪುಷ್ಕರನಿಂದ ಪಡಬಾರದ ಕಷ್ಟಗಳನ್ನು ಅನುಭವಿಸಿದನು. ಆದರೆ ಹಾಗೆ ಕಷ್ಟಪಟ್ಟವರೆಲ್ಲಾ ಮತ್ತೆ ದೇವದೇವನಾದ ಪರಮೇಶ್ವರನನ್ನು ಪೂಜೆಮಾಡಿ ತಮ್ಮ ಹಿಂದಿನ ಅಧಿಕಾರವನ್ನು ಪಡೆದರು. ನಿಜವಾದ ಶತ್ರುಗಳು ಹೊರಗಿರುವರು. ಅವರು ಶತ್ರುಗಳೆಂದು ಎಲ್ಲರೂ ನಂಬುವರು. ಆದರೆ ಸವತಿಯರ ಮಕ್ಕಳು ಮಾತ್ರ ಮನೆಯ ಶತ್ರುಗಳು. ಅವರಿಂದ ಬರುವ ತೊಂದರೆ ಅತ್ಯಧಿಕ. ಹಾಗೆಯೇ ನಿನ್ನ ಸವತಿಯ ಮಕ್ಕಳಾದ ಕಾದ್ರವೇಯರು (ಕದ್ರೂದೇವಿಯ ಮಕ್ಕಳು) ನಿನ್ನ ತಾಯಿಯ ದಾಸ್ಯಕ್ಕೆ ಕಾರಣರು. ॥೩೫-೩೬-೩೭॥

ವತ್ಸನೇ, ಈಗ ನೀನು ಅಮೃತವನ್ನು ತರುವುದಕ್ಕೂ ತಾಯಿಯ ದಾಸ್ಯವನ್ನು ಪರಿಹರಿಸುವುದಕ್ಕೂ ಒಂದುಪಾಯವನ್ನು ಹೇಳುವೆನು ಕೇಳು. ಯಾವಾಗಲೂ ಶಿವಾರಾಧನೆ ಮಾಡದಿದ್ದವರಿಗೆ ಜಯವು ಲಭಿಸಲಾರದು. ಹಿಂದೆ ಅನೇಕ ದೇವತೆಗಳೂ ಪರಶಿವನನ್ನು ಆರಾಧಿಸಿ ತಮ್ಮ ಶತ್ರುಗಳನ್ನು ಜಯಿಸಿರುವರು. ಆದ್ದರಿಂದ ನೀನೂ ಸಹ ಸರ್ವರನ್ನೂ ಜಯಿಸಿ ಯಾರಿಗೂ ಸೋಲುವವನಲ್ಲದ ವೀರಾಧಿವೀರನಾದ ಮಹಾದೇವನನ್ನು ಮೊರೆಹೊಗು. ಅಂತಹ ಶರಣಾಗತರಕ್ಷಕನಾದ ಮಹಾದೇವನನ್ನು ಆಶ್ರಯಿಸಿದವರಿಗೆ ಜಯವು ಎಂದಿಗೂ ದುರ್ಲಭವಲ್ಲ. ಅನಾಯಾಸವಾಗಿ ಶತ್ರುಗಳನ್ನು ಜಯಿಸಬಹುದು. ॥೩೮-೩೯-೪೦॥

ಪುರಾ ವಿಷ್ಣುಶ್ಚ ದೈತೇಯಪೀಡಿತಾಮರಚೋದಿತಃ ।
ಜಗಾಮ ಶರಣಂ ಸಾಂಬಂ ದೇವದೇವಂ ಕಪರ್ದಿನಂ ॥೪೧॥

ಸಹಸ್ರಂ ಶರದಾಂ ವತ್ಸ ಭಸ್ಮರುದ್ರಾಕ್ಷಭೃತ್ ಸ್ವಯಂ ।
ಪಂಚಾಕ್ಷರಜಪಾಸಕ್ತಃ ಪಂಚಾಸ್ಯಧ್ಯಾನಪೂರ್ವಕಂ ॥೪೨॥

ಸಮಭ್ಯರ್ಚ್ಯಾಂಬುಜವರೈರ್ನೇತ್ರೇಣಾಭ್ಯರ್ಚ್ಯ ಶೂಲಿನಂ ।
ಶಿಪಿವಿಷ್ಟಾತ್ಸ್ವಯಂ ತುಷ್ಟಾಚ್ಚಕ್ರಂ ಲೇಭೇ ಸುದರ್ಶನಂ ॥೪೩॥

ತೇನಾಸೌ ನಿಹತಾ ದೈತ್ಯಾಃ ಕೋಟಿಶೋ ಬಲವತ್ತರಾಃ ।
ಹಿರಣ್ಯಾಕ್ಷಶ್ಚ ಕಶಿಪುಃ ಕಾಲಕಂಜಾಪುಲಸ್ತ್ಯಜಾಃ ॥೪೪॥

ಮಧುಕೈಟಭಸಂಜ್ಞಾಶ್ಚ ಮುರಕಂಸಾದಯಃ ಪುರಾ ।
ಕರ್ಮದೇವೇಷು ಸ ಶ್ರೈಷ್ಠ್ಯಮವಾಪ ಜ್ಯೇಷ್ಠಪೂಜಯಾ ॥೪೫॥

ಬ್ರಹ್ಮಣಾಪಿ ಮಹಾದೇವಃ ಪೂಜಿತೋ ಭಕ್ತಿಭಾವತಃ ।
ಅಲಭತ್ಸೃಷ್ಟಿಸಾಮರ್ಥ್ಯಂ ವೇದಜಾಲಂ ಮಹೇಶ್ವರಾತ್ ॥೪೬॥

---

ಹಿಂದೆ ವಿಷ್ಣುವು ದೇವತೆಗಳಿಗೆ ಪ್ರಾಪ್ತವಾದ ರಾಕ್ಷಸರ ಉಪಟಳವನ್ನು ತಪ್ಪಿಸುವ ಸಲುವಾಗಿ ದೇವದೇವನೂ ಜಟಾಜೂಟಮುಂಡಿತನೂ ಆದ ಪರಶಿವನನ್ನು ಕುರಿತು ಸಹಸ್ರವರ್ಷಪರ್ಯಂತ ಭಸ್ಮರುದ್ರಾಕ್ಷಧಾರಿಯಾಗಿದ್ದು ಶಿವಪಂಚಾಕ್ಷರ ಮಂತ್ರವನ್ನೇ ಜಪಿಸುತ್ತಾ ಘೋರವಾದ ತಪಸ್ಸನ್ನಾಚರಿಸಿದನು. ॥೪೧-೪೨॥

ಕೊನೆಯಲ್ಲಿ ಶಿವಪಾದಗಳಿಗೆ ಸಹಸ್ರಕಮಲಗಳಿಂದ ಅರ್ಚನೆಮಾಡಿ, ಆ ಸಂದರ್ಭದಲ್ಲಿಯೇ ತನ್ನ ನೇತ್ರಕಮಲವನ್ನು ಕಿತ್ತು ಪೂಜಿಸಿ ಪರಶಿವನನ್ನು ಪೂಜಿಸಿ ಪ್ರಬಲವಾದ ಚಕ್ರವೊಂದನ್ನು ಪಡೆದನು. ಅದರ ಸಹಾಯದಿಂದಲೇ ಹಿರಣ್ಯಾಕ್ಷ, ಹಿರಣ್ಯಕಶಿಪು, ರಾವಣ, ಕಾಲಕಂಜ, ಮಧುಕೈಟಭ, ಮುರ, ಕಂಸ ಮುಂತಾದ ರಾಕ್ಷಸರನ್ನೆಲ್ಲಾ ಧ್ವಂಸಮಾಡಿ, ಕೊನೆಗೆ ಕರ್ಮದೇವತೆಗಳಲ್ಲಿ ಶ್ರೇಷ್ಠ ಪುರುಷನೆನಿಸಿಕೊಂಡು ಅಗ್ರಪೂಜೆಯಿಂದ ಮರ್ಯಾದೆಪಡೆದನು. ॥೪೩-೪೪-೪೫॥

ಬ್ರಹ್ಮನೂ ಸಹ ಮಹಾದೇವನನ್ನು ಭಕ್ತಿಭಾವದಿಂದ ಪೂಜಿಸಿ, ಲೋಕಸೃಷ್ಟಿ ಸಾಮರ್ಥ್ಯವನ್ನೂ, ವೇದಜಾಲವನ್ನೂ ಪಡೆದನು. ದೇವೇಂದ್ರನೂ ಸಹ ಮಹಾ

ಇಂದ್ರೋಽಪಿ ವಜ್ರಂ ಲೇಭೇ ವೈ ಶ್ರೀಮಹಾದೇವಪೂಜಯಾ ।
ವೃತ್ರಾಸುರಸಮುದ್ಭೂತಾಂ ಬ್ರಹ್ಮವಧ್ಯಾಮವಾಪ ಹ ॥೪೭॥

ವಧ್ಯಾ ಸಂಪೂಜಯಾತ್ಸಾಂಬಂ ತಸ್ಮಾತ್ಪಾಪಾದ್ವಿಮೋಚಿತಃ ।
ಗುರೋರ್ಭಾರ್ಯಾಪಹರಣಾತ್ಸ್ವಭಾರ್ಯಾಣಾಂ ವಿವರ್ಜಿತಾನ್ ॥೪೮॥

ರೋಹಿಣ್ಯಾಮತಿಕಾಮೇನ ಜಾಯೇಸ್ಯಂ ಸಮುಪದ್ಯತ ।
ಚಂದ್ರೋ ಯಕ್ಷ್ಮವಿನಿರ್ಮುಕ್ತಃ ಸೂರ್ಯಃ ಕಷ್ಟಾದ್ವಿಮೋಚಿತಃ ॥೪೯॥

ದಕ್ಷೋ ವಿನಿಂದನಾಲಂಭೋ ಲಿಂಗಾರ್ಚಾತೋ ವಿಮೋಚಿತಃ ।
ದಧೀಚಿರ್ಮಂಕಣೋ ಗಾರ್ಗ್ಯಃ ಕಣ್ವೋ ಮೇಧಾತಿಥಿರ್ಮುನಿಃ ॥೫೦॥

ಗೌತಮಃ ಕವಷೋ ಧೌಮ್ಯ ಉಪಮನ್ಯುರ್ಮಹಾಮತಿಃ ।
ಕ್ಷೀರವಾರಿಧಿಮಾಸಾದ್ಯ ಮೋದತೇ ಶಂಕರಾರ್ಚಕಃ ॥೫೧॥

ಮಾರ್ಕಂಡೇಯೋ ವಿಜಿಗ್ಯೇಥ ಯಮಂ ಸರ್ವಭಯಪ್ರದಂ ।
ವಿಶ್ವನಾಥಾರ್ಚನೇ ನೈವ ಸೋಽಬ್ಧಿಪಃ ಕಲಶೋದ್ಭವಃ ॥೫೨॥

---

ದೇವನನ್ನು ಮೆಚ್ಚಿಸಿ ಅವನಿಂದ ವಜ್ರಾಯುಧವನ್ನು ಪಡೆದನು. ಕೊನೆಗೆ ವೃತ್ರಾಸುರನನ್ನು ಕೊಂದು ಬ್ರಹ್ಮಹತ್ಯಾದೋಷವನ್ನು ಹೊಂದಿದನು. ॥೪೬-೪೭॥

ಅಂತಹ ಮಹಾಪಾಪವನ್ನು ಪರಿಹರಿಸಿಕೊಳ್ಳಲು ಇಂದ್ರನು ಈಶ್ವರಾರಾಧನೆ ಮಾಡಬೇಕಾಯಿತು. ಗುರುಭಾರ್ಯೆಯನ್ನು ಅಪಹರಿಸಿ, ಸ್ವಪತ್ನಿಯನ್ನು ವಿವರ್ಜಿಸಿ ರೋಹಿಣೀದೇವಿಯಲ್ಲಿ ಅತಿಯಾಗಿ ವಿಹರಿಸಿದುದರಿಂದ ಚಂದ್ರನಿಗೆ ಕ್ಷಯರೋಗವು ಪ್ರಾಪ್ತವಾಯಿತು. ಅಂತಹ ರೋಗನಿವಾರಣೆಗಾಗಿ ಚಂದ್ರನು ಶಿವನನ್ನು ಮೊರೆಹೊಕ್ಕನು. ಸೂರ್ಯನು ರಾಹುವಿನ ಆಕ್ರಮಣದಿಂದ ಪಾರಾದುದೂ, ದಕ್ಷನು ಶಿವನಿಂದಾದೋಷವನ್ನು ಪರಿಹರಿಸಿಕೊಂಡುದೂ, ಶಿವಲಿಂಗಾರ್ಚನೆಯಿಂದಲೇ. ಅದೇ ರೀತಿ ದಧೀಚಿ, ಮಂಕಣ, ಗಾರ್ಗ್ಯ, ಕಣ್ವ, ಮೇಧಾತಿಥಿ ಮುಂತಾದ ಮಹರ್ಷಿಗಳೆಲ್ಲರೂ ಶಿವಾರಾಧನೆಮಾಡಿ ಅನೇಕ ಕಷ್ಟಗಳಿಂದ ಪಾರಾದರು ॥೪೯-೫೦॥

ಗೌತಮ, ಕವಷ, ಧೌಮ್ಯ ಇವರು ಮಹಾದೇವನ ವರದಿಂದ ತ್ರಿಕಾಲಜ್ಞಾನಿಗಳಾದರು. ಉಪಮನ್ಯುವು ಮಹೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ ಕ್ಷೀರಸಮುದ್ರವನ್ನೇ ಪಡೆದನು. ಮೃಕಂಡುಋಷಿ ಪುತ್ರನಾದ ಮಾರ್ಕಂಡೇಯನು ಮೃತ್ಯುಂ

ದುರ್ವಾಸಸಸ್ತಪೋವೃದ್ಧಿರೀಶಾನಾನುಗ್ರಹತೋ ದ್ವಿಜ ।
ತಥೈವಾನ್ಯೇ ನೃಪತಯಃ ಸೋಮಸೂರ್ಯಾನ್ವಯೋದ್ಭವಾಃ ॥೫೩॥

ಸಮಭ್ಯರ್ಚ್ಯ ಮಹಾದೇವಂ ಲೇಭಿರೇ ವಾಂಛಿತಾನಿ ಹಿ ।
ಭುಕ್ತಿಮುಕ್ತಿಪ್ರದಂ ಪುಂಸಾಂ ವಿಜಯಾರೋಗ್ಯದಂ ಸದಾ ॥೫೪॥

ಕಾಲಮೃತ್ಯುಪ್ರಹರಣಂ ಮಹಾದೇವಸ್ಯ ಪೂಜನಂ ।
ನ ವಿನಾ ಶಂಕರಸ್ಯಾರ್ಚಾಂ ಭುಕ್ತಿಮುಕ್ತೀ ಹಿ ಸಿದ್ಧ್ಯತಃ ॥೫೫॥

ಸ್ವರ್ಗ್ಯಂ ಪುತ್ರ್ಯಂ ಪಶವ್ಯಂ ಚ ಶ್ರೀಮಹಾದೇವಪೂಜನಂ ।
ಭಕ್ತ್ಯಾ ಬಿಲ್ವೈಸ್ಸಮಭ್ಯರ್ಚ್ಯ ಭಸ್ಮರುದ್ರಾಕ್ಷಭೂಷಣಃ ॥೫೬॥

ಮಹಾಪಾಪೈರ್ವಿಮುಚ್ಯೇತ ಕಿಂ ಪುನಶ್ಚೋಪಪಾತಕೈಃ ।
ಭೃಗುರುಜ್ಜೀವಯಾಮಾಸ ಸ್ವಭಾರ್ಯಾಂ ನಿಹತಾಂ ಪುರಾ ॥೫೭॥

---

ಜಯನನ್ನು ಆರಾಧಿಸಿ ಯಮನನ್ನು ಗೆದ್ದನು. ಆಗಸ್ತ್ಯಮಹರ್ಷಿಯು ಮಹಾದೇವನ ಕರುಣಾಬಲದಿಂದ ಸಮುದ್ರವನ್ನೇ ಪಾನಮಾಡಿದನು. ॥೫೧-೫೨॥

ದುರ್ವಾಸ ಮಹರ್ಷಿಯು ತನ್ನ ತಪಸ್ಸನ್ನು ಕಾರಣಾಂತರಗಳಿಂದ ವ್ಯರ್ಥ ಮಾಡಿಕೊಂಡರೂ, ಪುನಃ ಪುನಃ ವೃದ್ಧಿಪಡಿಸಿಕೊಂಡುದು ಈಶ್ವರಾನುಗ್ರಹದಿಂದ. ಹಾಗೆಯೇ ಸೂರ್ಯ ಚಂದ್ರವಂಶದ ರಾಜಾಧಿರಾಜರು, ಮಹಾದೇವನನ್ನು ಪೂಜಿಸಿ, ತಮ್ಮ ಸಕಲೇಷ್ಟಾರ್ಥಗಳನ್ನೂ ಪಡೆದರು. ಮಹಾದೇವನು ತನ್ನ ಭಕ್ತರಿಗೆ ಭುಕ್ತಿ ಮುಕ್ತಿರೂಪವಾದ ಸಕಲ ವಿಜಯಾಯುರಾರೋಗ್ಯಾದಿಗಳನ್ನೆಲ್ಲಾ ಕೊಟ್ಟು ಆನಂದಾಂಬುಧಿಯಲ್ಲಿ ಮುಳುಗಿಸುವನಲ್ಲವೆ. ॥೫೩-೫೪॥

ಮಹಾದೇವಾರ್ಚನೆಯು ಕಾಲಮೃತ್ಯುವನ್ನು ಸಹ ಪರಿಹರಿಸಬಲ್ಲುದು. ಶಂಕರಾರ್ಚನೆಮಾಡದೆ, ಐಹಿಕಾಮುಷ್ಮಿಕಸುಖಗಳನ್ನು ಪಡೆಯಲಾಗುವುದಿಲ್ಲ. ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು, ಭಕ್ತಿಯಿಂದ ಬಿಲ್ವಪತ್ರೆಯನ್ನು ಅರ್ಚಿಸುತ್ತಾ ನಡೆಸಿದ ಶಿವಾರ್ಚನೆಯು ಸ್ವರ್ಗ, ಪುತ್ರರು, ಪಶುಗಳು, ಮುಂತಾದವುಗಳ ಸುಖವನ್ನು ಒದಗಿಸಿ, ಮಾನವಕೋಟಿಯನ್ನು ಕಾಪಾಡುವುದು. ॥೫೫-೫೬॥

ಮಹಾ ಮಹಾ ಪಾಪಗಳೂ ಶಿವಾರಾಧನೆಯಿಂದ ನಾಶವಾಗುವಾಗ ಇನ್ನು ಉಪಪಾಪಗಳ ವಿಷಯವನ್ನು ಹೇಳಲಾದೀತೆ? ವಿಷ್ಣುವು ದೇವಕಾರ್ಯಾರ್ಥವಾಗಿ,

ವಿಷ್ಣುಶ್ಛದ್ಮತಯಾ ಪೂರ್ವಂ ಸುರಕಾರ್ಯಾರ್ಥಸಿದ್ಧಯೇ ।
ಶಶಾಪ ವಿಷ್ಣುಂ ವಿಪ್ರೋಸೌ ಸದಾ ಭರ್ಗಪದಾಶ್ರಯಃ ॥೫೮॥

ಮುನಯೋ ಗಣಪಾಶ್ಚೈವ ಅನ್ಯೇ ಚೈವ ಸುರಾಸುರಾಃ ।
ಲೇಭಿರೇ ವಾಂಛಿತಾನ್ಯೇವ ತಸ್ಮಾತ್ತ್ವಮಪಿ ಪೂಜಯ ॥೫೯॥

ಶಿವಸ್ಯ ಲಿಂಗಂ ದಯಿತಂ ಬಿಲ್ವೈರ್ಭಸ್ಮಾಕ್ಷಭೂಷಣಃ ॥೬೦॥

ವಿಷ್ಣುಸ್ತ್ರೀವಧನಿರ್ಘೃಣೋ ಜನಿಜರಾನಾಶಪ್ರದಂ ಶಾಪಮ
ಸ್ಯಾಗಾದ್ದೈತ್ಯವರೈಃ ಸುರಾಜನಿಜಿತೈಃ ಸಂಪ್ರಾರ್ಥಿತೋಸೌ ಭೃಗುಃ ।
ತೇಷು ಸ್ಥಾವರಂ ದದೌ ಸ ಕೃಪಯಾ ತದ್ವಿಷ್ಣುರಾಲೋಕ್ಯ ವೈ
ಚಕ್ರೋತ್ಕೃತ್ಯ ತದೀಯ ಶಾಪಭಯತೋ ನ್ಯರ್ವಾಕ್ಪರಾವರ್ತತ ॥೬೧॥

---

ಭೃಗುಪತ್ನಿಯನ್ನು ಸಂಹರಿಸಲು, ಅದನ್ನು ನೋಡಿ ಮಹಾಶಿವಾರಾಧಕನಾದ ಭೃಗುಮಹರ್ಷಿಯು ವಿಷ್ಣುವಿಗೆ ಶಾಪಕೊಟ್ಟು ಮೃತಳಾದ ಪತ್ನಿಯನ್ನು ಮತ್ತೆ ಬದುಕಿಸಿದನು. ॥೫೭-೫೮॥

ಹೀಗೆ ಅನೇಕ ಗಣದೇವತೆಗಳೂ, ದೇವರಾಕ್ಷಸರೂ ಇನ್ನೂ ಅನೇಕ ಮಹಾಮಹಿಮರೂ, ಶಿವಾರಾಧನೆಯಿಂದ ತೃಪ್ತಿಹೊಂದಿರುವರು. ಆದ್ದರಿಂದ ಎಲೈ ಗರುಡನೇ, ನೀನು ಈಗಲೇ ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು ಪವಿತ್ರವಾದ ಶಿವಲಿಂಗವನ್ನಾರಾಧಿಸು. ॥೫೯-೬೦॥

ಹಿಂದೆ ಭೃಗುಮಹರ್ಷಿಯ ತಾಯಿಯಾದ ಖ್ಯಾತಿಯೆಂಬ ಸ್ತ್ರೀಯನ್ನು ವಿಷ್ಣುವು ಕೊಂದು ಸ್ತ್ರೀವಧೆಯೆಂಬ ನೀಚಕಾರ್ಯನಿರ್ವಹಣದಿಂದ ಎಲ್ಲರ ದೂಷಣೆಗೂ ಪಾತ್ರನಾದನು. ಅದಕ್ಕಾಗಿ ಕೋಪಗೊಂಡ ಭೃಗುಮುನಿಯು ವಿಷ್ಣುವಿಗೆ ಜನ್ಮಜರಾ ಮರಣಗಳಿಂದ ತೊಳಲುವ ಮಾನವಜನ್ಮವು ಬರುವಂತೆ ಶಪಿಸಿದನು. ಮತ್ತು ವಿಷ್ಣುವು ದೇವತೆಗಳ ಸಹಾಯಕನಾಗಿದ್ದು ದೈತ್ಯರನ್ನೆಲ್ಲಾ ಸೋಲಿಸಿದಮೇಲೆ, ಸೋತ ದೈತ್ಯರು ಶಿವಾರ್ಚಕನಾಗಿ ವಿಶೇಷಮಹಿಮೆಯಿಂದಿದ್ದ ಭೃಗುಮಹರ್ಷಿಯ ಸಮೀಪಕ್ಕೆ ಬಂದು ಅವನನ್ನು ಮೊರೆಹೊಕ್ಕರು. ಇದನ್ನು ತಿಳಿದು ವಿಷ್ಣುವು ಭೃಗುಋಷಿಗೆ ಹೆದರಿ, ಮತ್ತೆ ದೈತ್ಯರ ಮೇಲೆ ತನ್ನ ಚಕ್ರವನ್ನು ಪ್ರಯೋಗಿಸದೆ, ದೈತ್ಯರಿಗೆ ಅವರವರ ಸ್ಥಾನವನ್ನು ಕೊಟ್ಟು ಹಿಂದಿರುಗಿದನು.॥೬೧॥

ತಾಮುಜ್ಜೀವ್ಯ ಭೃಗುಃ ಶಶಾಪ ಹರಿಮುಪ್ಯಾಜೌ ಹಿ ಭರ್ಗಾರ್ಚಕೋ
ಯೋನಿಷ್ವಪ್ಯತಿ ಕುತ್ಸಿತಾಸು ನಿತರಾಂ ದೇವೈಸ್ತದಾ ದುದ್ರುವೇ ।
ದೈತ್ಯಾನಾಹ ಗತವ್ಯಥಾಂಶ್ಚ ನಿರುಜಾಂ ಪ್ರಾಪದ್ಯಥಾಘೋ ದ್ರುತಂ
ಪಾತಾಲೇ ನಿವಸಂತು ಭೋಗಿನಿಲಯೇ ಶಂಭೋಃ ಪದಾಬ್ಜಾರ್ಚಕಾಃ॥೬೨॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಕಶ್ಯಪಗರುತ್ಮತೋ
ಸ್ಸಂವಾದೋ ಗರುಡೋಪದೇಶೋನಾಮ ಷಷ್ಠೋಽಧ್ಯಾಯಃ

---

ಭೃಗುಮಹರ್ಷಿಯು ಶಿವಾರ್ಚನೆಯ ಬಲದಿಂದಲೇ ವಿಷ್ಣುವಿನಿಂದ ಹತ ಳಾಗಿದ್ದ ತನ್ನ ತಾಯಿಯಾದ ಖ್ಯಾತಿಯನ್ನು ಮತ್ತೆ ಬದುಕಿಸಿದನು. ಮತ್ತೂ ಕುಪಿತನಾಗಿ ಅಪರಾಧಿಯಾಗಿದ್ದ ವಿಷ್ಣುವಿಗೆ ಮಾನವ ಜನ್ಮವು ಪ್ರಾಪ್ತವಾಗುವಂತೆ ಶಾಪವನ್ನಿತ್ತನು. (ಈ ಕಥೆಯು ದೇವೀಭಾಗವತದ ೪-೧೧ ಅಧ್ಯಾಯದಲ್ಲಿ ವಿಸ್ತಾರವಾಗಿ ಬಂದಿದೆ) ಮತ್ತೆ ದೇವತೆಗಳಿಂದ ದೈತ್ಯರಿಗೆ ತೊಂದರೆಯಾಗದಂತೆ, ಭೃಗುಮಹಾಮುನಿಯು ಶಿವಭಕ್ತಿಯ ಮಹಿಮೆಯನ್ನು ದೈತ್ಯರಿಗೆ ಉಪದೇಶಿಸಿ, ಅವರೆಲ್ಲರೂ ಶಿವಪಾದಾರ್ಚನೆಮಾಡುತ್ತಾ ಪಾತಾಳಲೋಕದಲ್ಲಿ ವಾಸಮಾಡಿ ಕೊಂಡಿರುವಂತೆ ಅಪ್ಪಣೆಮಾಡಿದನು. ಹೀಗೆ ಭೃಗುಮಹರ್ಷಿಯು ವಿಷ್ಣುವಿಗೂ ಶಾಪಕೊಡುವಂತಹ ಶಕ್ತಿಯನ್ನು ಸಂಪಾದಿಸಿದುದೂ, ದೈತ್ಯರು ದೇವತೆಗಳಿಂದ ಭಯವನ್ನು ಹೋಗಲಾಡಿಸಿಕೊಂಡುದೂ ಶಿವಾರ್ಚನೆಯ ಪ್ರಭಾವದಿಂದಲೇ. ಎಂದು ಕಶ್ಯಪಋಷಿಯು ಶಿವಪೂಜಾಮಹಿಮೆಯನ್ನು ಗರುಡನಿಗೆ ಸೋದಾಹರಣವಾಗಿ ಉಪದೇಶಿಸಿದನು. ॥೬೨॥

ಇಲ್ಲಿಗೆ ಶ್ರೀಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಕಶ್ಯಪನು ಗರುಡನಿಗೆ ಉಪದೇಶಿಸಿದ ಶಿವಮಹಿಮೆಯ ವರ್ಣನೆಯುಳ್ಳ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಸಪ್ತಮೋಽಧ್ಯಾಯಃ

॥ ಕಶ್ಯಪ ಉವಾಚ ॥

ಅಮೃತಂ ರಕ್ಷಿತಂ ದೇವೈರ್ನಾಕಸದ್ಮನಿ ಸರ್ವದಾ
ಉದಾಯುಧಧರಾ ದೇವಾಸ್ತದ್ರಕ್ಷ್ಯಂತ್ಯನಿಶಂ ಮುದಾ ॥೧॥

ನಿದ್ರಾ ತಂದ್ರಾದಿರಹಿತಾ ಶಕ್ರಸ್ಯಾಜ್ಞಾವಶೇನ ಹಿ ।
ತಜ್ಜಯೋಪಾಯಮೇತತ್ತೇ ಕಥಯಾಮ್ಯಂಡಜೇಶ್ವರ ॥೨॥

ತ್ರಿಪುರಾ ವಂಚಿತಾಸ್ತೇನ ವಿಷ್ಣುನಾ ವಂಚಿತೋ ಬಲೀ ।
ಮೋಹಯಾಮಾಸ ತಂತ್ರೇಣ ಕುಶಾಸ್ತ್ರೇಣ ಸುರಾಂಸ್ತದಾ ॥೩॥

---

## ಏಳನೆಯ ಅಧ್ಯಾಯ

ಅನಂತರ ಕಶ್ಯಪಮಹರ್ಷಿಯು ಪಕ್ಷಿರಾಜನಾದ ಗರುಡನನ್ನು ಕುರಿತು ಹೀಗೆಂದನು. " ಅಯ್ಯಾ ಪಕ್ಷೀಶ್ವರನೇ, ನೀನು ಅಪೇಕ್ಷಿಸುವ ಅಮೃತವು ದೇವ ಲೋಕದಲ್ಲಿದೆ. ಅದನ್ನು ಸದಾ ಆಯುಧಪಾಣಿಗಳಾದ ದೇವತೆಗಳು ನಿದ್ರಾಹಾರಾದಿ ಗಳನ್ನು ಸಹ ತೊರೆದು ದೇವೇಂದ್ರನ ಅಪ್ಪಣೆಯಂತೆ ಕಾದುಕೊಂಡಿರುವರು. ಆದರೆ ಅವರನ್ನು ಗೆಲ್ಲುವ ಉಪಾಯವೊಂದನ್ನು ನಿನಗೆ ಈಗ ತಿಳಿಯಪಡಿಸುವೆನು. ॥೧-೨॥

ನಾನು ಹೇಳುವ ಒಂದುಪಾಯದಿಂದ ಎಂತಹವರನ್ನು ಬೇಕಾದರೂ ಗೆಲ್ಲಬಹುದು. ತ್ರಿಪುರರು ನಾಶವಾದದ್ದೂ, ಬಲಿಯು ವಿಷ್ಣುವಿಗೆ ಸೋತುಹೋದದ್ದೂ ಈ ಕುತಂತ್ರದಿಂದಲೇ. ವಿಷ್ಣುವು ಇದೇ ತಂತ್ರದಿಂದ, ಈಶ್ವರ ಭಕ್ತರೂ,

ಪಾಷಂಡಾನ್ ತಾನ್ ಸ್ವಯಂ ಚಕ್ರೇ ಶಿವಭಕ್ತಾನ್ ಜಿತೇಂದ್ರಿಯಾನ್ ।
ಶಿವಾರ್ಚನಪರಿಭ್ರಷ್ಟಾನ್ ಭಸ್ಮರುದ್ರಾಕ್ಷವರ್ಜಿತಾನ್ ॥೪॥

ಪಂಚಾಕ್ಷರೋಜ್ಝಿತಾಂಶ್ಚಕ್ರೇ ರುದ್ರಾಧ್ಯಾಯನಿವರ್ಜಿತಾನ್ ।
ಕೃತ್ವೈವ ಯೋಧಯಾಮಾಸ ತೇನ ಜಿಗ್ಯೇ ಹರಿಃ ಪುರಾ ॥೫॥

ಸ್ವಯಂ ಗರ್ವೇಣ ತತ್ಯಾಜ ಶಿವಚಿಹ್ನಾನಿ ಶೂಲಿನಂ ।
ವೀರಭದ್ರೇಣ ನಿಹತೋ ದಕ್ಷಯಜ್ಞೇ ಪುರಾ ಹರಿಃ ॥೬॥

ತೃತೀಯಾಂಶೇ ಸ ಕಥಿತೋ ವಿಸ್ತಾರಶ್ಚಾಂಡಜೇಶ್ವರ ।
ತೇನ ಪಾಪೇನ ಸ ಹರಿರ್ನಿಹತಃ ಶೂಲಪಾಣಿನಾ ॥೭॥

ಮತ್ಸ್ಯಕೂರ್ಮವರಾಹಾದಿ ನಾರಸಿಂಹಂ ತನುಷ್ವಪಿ ।
ಯಃ ಶಾಂಭವಾಚಾರಹೀನಾನ್ ಪಾಷಂಡಾನ್ ಕುರುತೇ ನರಾನ್॥೮॥

---

ಜಿತೇಂದ್ರಿಯರೂ, ಆದ ಮಹಾತ್ಮರನ್ನೆಲ್ಲಾ, ಶಿವಪೂಜಾವಿಹೀನರನ್ನಾಗಿಯೂ, ಭಸ್ಮರುದ್ರಾಕ್ಷವರ್ಜಿತರನ್ನಾಗಿಯೂ ಮಾಡಿ, ಅವರನ್ನು ತನ್ನ ಬಲೆಗೆ ಬೀಳಿಸಿಕೊಂಡನು. ॥೩-೪॥

ಹಾಗೆಯೇ ಅವರೆಲ್ಲಾ ಶಿವಪಂಚಾಕ್ಷರೀ ಮಂತ್ರವರ್ಜಿತರನ್ನಾಗಿಯೂ, ರುದ್ರಾಧ್ಯಾಯವನ್ನು ಮರೆತವರನ್ನಾಗಿಯೂ ಮಾಡಿದನು. ಆದರಿಂದಲೇ ವಿಷ್ಣುವು ಅವರನ್ನು ಸುಲಭವಾಗಿ ಗೆದ್ದುಬಿಟ್ಟನು. ಹಾಗೆಯೇ ವಿಷ್ಣುವೂ ಸಹ ಒಂದುಸಾರಿ ಗರ್ವದಿಂದ ಈಶ್ವರಪೂಜಕರ ಚಿಹ್ನೆಗಳನ್ನು ಬಿಟ್ಟು ಮೆರೆದನು. ಅದರಫಲವಾಗಿ, ವಿಷ್ಣುವು ದಕ್ಷಯಜ್ಞ ಮಂಟಪದಲ್ಲಿ ವೀರಭದ್ರನಿಂದ ಪ್ರಹಾರಗಳನ್ನು ಪಡೆಯಬೇಕಾಯಿತು. ॥೫-೬॥

ವಿಷ್ಣುವು ದಕ್ಷಯಜ್ಞವೇ ಮೊದಲಾದ ಸಂದರ್ಭಗಳಲ್ಲಿ ಹೊಂದಿದ ಶಿಕ್ಷೆಯ ವಿವರಣೆಯನ್ನೆಲ್ಲಾ ಮೂರನೆಯ ಅಂಶದಲ್ಲಿ ವಿವರಿಸಲಾಗಿದೆ. ವಿಷ್ಣುವಿನ ಅವತಾರಗಳೆನಿಸಿದ, ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ ಮುಂತಾದ ಅವತಾರಗಳ ದೇಹದಲ್ಲಿ ಶಾಂಭವರಿಗಿರುವ ವಿಭೂತಿ ರುದ್ರಾಕ್ಷಾದಿಚಿಹ್ನೆಗಳಿರುವುದರಿಂದ, ಅಂತಹ ಶಿವಚಿಹ್ನೆಗಳನ್ನು ಅನುಸರಿಸದವರೆಲ್ಲಾ ಪಾಷಂಡಿಗಳೆನಿಸುವರು. ॥೭-೮॥

ಕುತರ್ಕವಾಕ್ಯೈರ್ಯೋ ಮರ್ತ್ಯೋ ವಿಪ್ರೋ ವಾ ನರಕಂ ವ್ರಜೇತ್ ।
ಅಧೋಮುಖೋರ್ಧ್ವಪಾದೋಽಸೌ ಲಂಬತೇಽಹರ್ನಿಶಂ ಮಲೈಃ ।೯॥

ಯಃ ಶಾಂಕರಾಂಶ್ಚಾವಮನ್ಯೇದ್ಭಕ್ತಿಭಾವಾನ್ಮಹೇಶಿತುಃ ।
ಸ ಯಾತ್ಯೇವಾಶು ನರಕಂ ಸ ಜ್ಞಾಯಂ ಪಾಪಕೃತ್ತಮಃ ॥೧೦॥

ಸರ್ವೇಷಾಂ ನಿಷ್ಕೃತಿಃ ಪ್ರೋಕ್ತಾ ಪಾಪಾನಾಂ ನರಕಾಪಹಾ ।
ಶಿವದ್ರೋಹಃ ಶಾಂಭವಾನಾಂ ದ್ರೋಹೋ ವಾ ನರಕಾವಹಃ ॥೧೧॥

ನರಕೋತ್ತಾರಣಂ ನ್ರೂಣಾಂ ನೈವ ಜಾತು ಭವಿಷ್ಯತಿ ।
ಶಿವದ್ರೋಹೇಷು ಸರ್ವೇಷು ಶರಣ್ಯಃ ಶಿವ ಏವ ಹಿ ॥೧೨॥

ಸ ಮೋಚಕೋ ಮಹಾದೇವಃ ಶಿವದ್ರೋಹೇಷು ಸತ್ತಮ ।
ಸಹಮಾನತಯಾ ಸರ್ವಂ ಭಕ್ತಾನಾಂ ಪಾಪನಾಶಕಃ ॥೧೩॥

---

ಯಾವ ಮನುಷ್ಯನು ಬ್ರಾಹ್ಮಣನೇ ಆಗಿದ್ದರೂ, ಕುಯುಕ್ತಿಕುವಾದಗಳಿಂದ ಆ ವಿಷ್ಣುವಿನ ಚಿಹ್ನೆಗಳನ್ನು ಸರಿಯೆಂದು ಸಮರ್ಥಿಸುವನೋ ಅವನು, ತಲೆಕೆಳಗಾಗಿ ಮಲರಾಶಿಯಲ್ಲಿ ಸರ್ವದಾ ನಿಂತು, ತನ್ಮೂಲಕ ದುಃಖವನ್ನು ಅನುಭವಿಸುವನು. ಯಾರು ಮಹೇಶ್ವರ ಭಕ್ತರನ್ನು ಅಪಮಾನಗೊಳಿಸುವನೋ, ಅವರು ಮಹಾ ಪಾಪಿಷ್ಠರೆನಿಸಿ, ನಿಜವಾಗಿಯೂ ನರಕವನ್ನು ಸೇರುವರು. ॥೯-೧೦॥

ಲೋಕದಲ್ಲಿ ಸಕಲಪಾಪಗಳಿಗೂ ಪ್ರಾಯಶ್ಚಿತ್ತವಿದೆ. ಎಲ್ಲಾ ನರಕದುಃಖ ಗಳನ್ನೂ ತಪ್ಪಿಸಿಕೊಳ್ಳಬಹುದು. ಆದರೆ ಶಿವದ್ರೋಹ, ಶಿವಪೂಜಕರ ದ್ರೋಹ ಇವನ್ನು ಪರಿಹರಿಸುವಂತಹ ಪುಣ್ಯಕರ್ಮವು ಲೋಕದಲ್ಲಿ ಯಾವುದೂ ಇರಲಾರದು. ಶಿವದ್ರೋಹದಿಂದ ನರಕವನ್ನು ಹೊಂದಿದರೆ ಅದರಿಂದ ಪಾರುಮಾಡುವ ಯಾವ ಕರ್ಮವೂ ಮಾನವರಿಗೆ ದೊರೆಯಲಾರದು. ಆದರೆ ಅಂತಹ ಶಿವದ್ರೋಹಿಗಳಿಗೆ ರಕ್ಷಣೆ ಕೊಡುವವನೆಂದರೆ ಈಶ್ವರನೊಬ್ಬನೇ. ॥೧೧-೧೨॥

ಶಿವದ್ರೋಹವನ್ನು ತಪ್ಪಿಸಿ ಕಾಪಾಡುವವನು ಶಿವನೊಬ್ಬನೇ. ಭಕ್ತರ ಸಕಲಾಪರಾಧಗಳನ್ನೂ ಸಹಿಸುವ ಸಾಮರ್ಥ್ಯವು ಅವನಿಗಿರುವುದರಿಂದ, ಪರಶಿವನು ಸಮಸ್ತ ಭಕ್ತರ ಪಾಪರಾಶಿಯನ್ನೆಲ್ಲಾ ನಿರ್ಮೂಲಗೊಳಿಸುವನು. ಶಿವದ್ರೋಹಿ ಗಳನ್ನು ರಕ್ಷಿಸಿ ಅವರಿಗೆ ಸುಖವನ್ನುಂಟುಮಾಡುವನೆಂದರೆ ಶಂಕರನೊಬ್ಬನೇ.

ನಾಽನ್ಯೇಷಾಂ ನಿಷ್ಕೃತಿಃ ಪ್ರೋಕ್ತಾ ಶಿವದ್ರೋಹೇಷು ಸತ್ತಮ ।
ತಸ್ಮಾತ್ತ್ವಂ ಶರಣಂ ಯಾಹಿ ಸರ್ವಾಂ ಸಿದ್ಧಿಂ ಪ್ರಯಚ್ಛತಿ ॥೧೪॥

ವಿದ್ಯಾಂ ಹೃದ್ಯಾಂ ವದಾಮ್ಯೇವ ತವ ಪಂಚಾಕ್ಷರಾತ್ಮಿಕಾಂ ।
ಪಂಚಾಕ್ಷರಪರೋ ಮರ್ತ್ಯಃ ಶಿವಜ್ಞಾನಾಯ ಕಲ್ಪತೇ ॥೧೫॥

ತೇನ ಮುಕ್ತೋ ಭವತ್ಯೇವ ವಿದ್ಯಯಾ ದ್ಯೋತತೇಂಡಜ ।
ಪಿತೈವೋಪದಿಶೇನ್ಮಂತ್ರಂ ಗಾಯತ್ರ್ಯಾಃ ಸಾಮ್ಯಮೇವ ಹಿ ॥೧೬॥

ಗಾಯಂತಂ ತ್ರಾಯತೇ ಯಸ್ಮಾದ್ಗಾಯತ್ರೀ ಭರ್ಗಚಿಹ್ನಿತಾ ।
ಸಂಸಾರಭಂಜಕೋ ಭರ್ಗಃ ಶಿವ ಏವೇತಿ ನಿಶ್ಚಿತಃ ॥೧೭॥

ಪಂಚಾಕ್ಷರಂ ಚ ಗಾಯತ್ರೀ ಶ್ರೌತಂ ಮಂತ್ರದ್ವಯಂ ಸ್ಮೃತಂ ।
ಉಭಯೋರ್ದೈವತಂ ಯಸ್ಮಾನ್ಮಹಾದೇವೋ ಮಹೇಶ್ವರಃ ॥೧೮॥

---

ಅವನನ್ನು ಬಿಟ್ಟರೆ ನಿನಗೆ ಮತ್ತಾರೂ ದೊರೆಯಲಾರರು. ಆದ್ದರಿಂದ ಮೊದಲು ನೀನು ಸರ್ವಸಿದ್ಧಿಪ್ರದನಾದ ಮಹಾದೇವನನ್ನು ಶರಣುಹೊಂದು. ॥೧೩-೧೪॥

ಈಗ ನಿನಗೆ ಪ್ರಪಂಚದಲ್ಲಿ ಅತಿಮಹಿಮಾಪೂರ್ಣವಾದ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸುವೆನು. ಆದರಿಂದ ಮಾನವನು ಶಿವಜ್ಞಾನವನ್ನು ಪಡೆಯಬಹುದು. ಈ ವಿದ್ಯೆಯಿಂದಲೇ ಸಕಲ ಮಾನವನೂ ಮುಕ್ತಿಯನ್ನು ಪಡೆಯುವನು. ಈ ಶಿವಪಂಚಾಕ್ಷರೀಮಂತ್ರವನ್ನೂ, ಗಾಯತ್ರೀ ಮಂತ್ರವನ್ನೂ ತಂದೆಯಾದವನೇ ಮಗನಿಗೆ ಉಪದೇಶಿಸಬೇಕು. ॥೧೫-೧೬॥

ತನ್ನನ್ನು ಭಕ್ತಿಯಿಂದ ಜಪಿಸುವವರನ್ನು ಕಾಪಾಡುವ ಮಂತ್ರವೆಂದರೆ ಗಾಯತ್ರಿಯೇ. ಆ ಮಂತ್ರವು ಭರ್ಗನಾಮಕವಾದ ದೇವತಾನಾಮಲಿಂಗವಾಗಿ ರುವುದು. ಭರ್ಗನಾಮಕನಾದ ಶಂಕರನೇ ಮಾನವರ ಸಂಸಾರದುಃಖಗಳನ್ನು ನಾಶಗೊಳಿಸತಕ್ಕವನು. ಅಂತಹ ಮಹಾದೇವನೇ, ಶಿವಪಂಚಾಕ್ಷರೀಮಂತ್ರಕ್ಕೂ, ಹಾಗೆಯೇ ಗಾಯತ್ರೀಮಂತ್ರಕ್ಕೂ ಪ್ರಧಾನ ದೇವತೆಯೆನಿಸಿರುವನು. ॥೧೭-೧೮॥

ವಿಪ್ರೈರೇವ ನರಾ ಮಂತ್ರೋ ಜಪನೀಯಃ ಪ್ರಯತ್ನತಃ ।
ಸ್ತ್ರೀಶೂದ್ರಾಣಾಂ ನಮೋಂತೇನ ಜಪ್ಯಃ ಪಂಚಾಕ್ಷರಃ ಪರಃ ॥೧೯॥

ಅಭಾವೇತು ಪಿತುಃ ಪುತ್ರ ತತ್ಪಿತಾ ಪುತ್ರ ಏವ ಹಿ ।
ಅನ್ಯೇವಾ ಜ್ಞಾತಯೋ ವಿಪ್ರಾಃ ಶಾಂಭವಾ ವಾನ್ಯತಃ ಸುತ ॥೨೦॥

ಯಥೈವೋಪನಯೋ ಶಾಸ್ತ್ರಂ ತಥಾ ಪಂಚಾಕ್ಷರೇಪಿ ಚ ।
ಗಾಯತ್ರೀವತ್ಸರಾ ಜಪ್ಯೋ ಮಂತ್ರರಾಜೋಯಮುತ್ತಮಃ ॥೨೧॥

ತಸ್ಮಾತ್ತ್ವೋಪದೇಕ್ಷ್ಯಾಮಿ ಮಂತ್ರಂ ಪಂಚಾಕ್ಷರಂ ಪರಂ ।
ಮಂತ್ರೇಣಾನೇನ ದೇವೇಶಂ ಯಃ ಪೂಜಯತಿ ಶಂಕರಂ ॥೨೨॥

ಸರ್ವಪಾಪವಿಮುಕ್ತಶ್ಚ ಜಾಯತೇ ನಾತ್ರ ಸಂಶಯಃ ।
ಪಂಚಾಕ್ಷರಂ ಸತಾರಂ ಯಃ ಪ್ರಜಪೇತ್ ಪ್ರೀತಿಪೂರ್ವಕಂ ।

ಸ ತು ಮುಕ್ತೋ ಭವತ್ಯೇವ ಷಡಕ್ಷರಸಮಾಶ್ರಯಾತ್
ಪಂಚಾಸ್ಯಧ್ಯಾನನಿರತಃ ಪಂಚಾಕ್ಷರಜಪಾದರಃ ॥೨೪॥

---

ವಿಪ್ರರಾದವರೇ ಈ ಮಂತ್ರವನ್ನು ವಿಶೇಷವಾಗಿ ಜಪಿಸಬೇಕು. ಮತ್ತು ಉಪದೇಶಿಸಬೇಕು. ಸ್ತ್ರೀಶೂದ್ರಾದಿಗಳು ಮಾತ್ರ ನಮಃಶಬ್ದವನ್ನೇ ಕೊನೆಯನ್ನಾಗಿ ಮಾಡಿಕೊಂಡು, ಶಿವಪಂಚಾಕ್ಷರೀಮಂತ್ರವನ್ನು ಜಪಿಸಬಹುದು. ॥೧೯-೨೦॥

ಉಪನಯನ ಸಂಸ್ಕಾರದಿಂದ ಗಾಯತ್ರೀಮಂತ್ರವನ್ನು ವಟುಗಳಿಗೆ ಹೇಗೆ ಉಪದೇಶಮಾಡುವರೋ, ಅದೇರೀತಿ ಶಿವಪಂಚಾಕ್ಷರೀಮಂತ್ರವನ್ನೂ ಉಪದೇಶಿಸಬೇಕು. ಈ ಶಿವಪಂಚಾಕ್ಷರೀಮಂತ್ರವು ಮಂತ್ರರಾಜನೆಂದು ಉಕ್ತವಾಗಿದೆ. ಆದ್ದರಿಂದ ಈ ಶ್ರೇಷ್ಠವಾದ ಮಂತ್ರವನ್ನು ನಾನು ಈಗ ನಿನಗೆ ಉಪದೇಶಿಸುವೆನು. ಈ ಮಂತ್ರದಿಂದ ಯಾವನು ಶಂಕರನನ್ನು ಆರಾಧಿಸುವನೋ ಅವನು ಸರ್ವಪಾಪ ನಿರ್ಮುಕ್ತನಾಗುವನು. ॥೨೧-೨೨॥

ಶಿವಪಂಚಾಕ್ಷರೀಮಂತ್ರವನ್ನು ಪ್ರಣವಸಹಿತವಾಗಿ ಯಾವನು ಸದಾ ಜಪಿಸುವನೋ ಅವನಿಗೆ ಮುಕ್ತಿಯೇ ದೊರಕುವುದು. ಅದೇ ಪ್ರಣವ ಸಹಿತವಾಗಿ ಷಡಕ್ಷರವೆನಿಸುವುದು. ಅದು ಶಿವಪ್ರೀತಿಕರವಾದದ್ದು. ಪಂಚಮುಖಿಯಾದ

ಮಹಾಪಾಪಯುತೋ ವಾಪಿ ಯುಕ್ತೋ ವಾಪ್ಯುಪಪಾತಕೈಃ ।
ವಿಮುಚ್ಯತೇ ಸದ್ಯ ಏವ ರಾಹುಮುಕ್ತ ಇವೋಡುರಾಟ್ ॥೨೫॥

ನ ಗಾಯತ್ರ್ಯಾಃ ಪರೋ ಮಂತ್ರೋ ನ ತು ಪಂಚಾಕ್ಷರಾತ್ಮನುಃ ।
ದ್ವಿಜತ್ವೇ ಸಾ ಚ ವೈ ಪ್ರೋಕ್ತಾ ಗಾಯತ್ರೀ ಭರ್ಗದೇವತಾ ॥೨೬॥

ಶಿವಪ್ರಸಾದಸಿದ್ಧ್ಯರ್ಥಂ ಶ್ರೇಷ್ಠಪಂಚಾಕ್ಷರೋ ಮನುಃ ।
ದ್ವಿಜಾನಾಮುಭಯಂ ಮಂತ್ರಂ ಸರ್ವೇಷಾಂ ಮನಕಾಮ್ಯಕಂ ॥೨೭॥

ತಾಂತ್ರಿಕಾ ವೈದಿಕಾಶ್ಚೈವ ಭಾಗತೋ ವಾ ಯಥಾರುಚಿ ।
ದ್ವಿಜಾರಾಧ್ಯೋ ಮಹಾದೇವೋ ಮನುರ್ಜಾಪ್ಯೋ ದ್ವಿಜಸ್ಸ್ಮೃತಃ ॥೨೮॥

ತಸ್ಮಾದ್ದ್ವಿಜಾನಾಂ ಮಂತ್ರೌ ದ್ವೌ ಪ್ರಸಾದದ್ವಿಜಕಾರಿಣೌ ।
ಯಸ್ಯ ಶೇಶಶಾಂಭವೇ(?) ಪ್ರೋಕ್ತಾ ಸರ್ವವರ್ಣಾಮುರಾಸ್ತ್ರಿಯಃ॥೨೯॥

---

ಪರಶಿವನ ಧ್ಯಾನಾಸಕ್ತನಾಗಿ, ಪಂಚಾಕ್ಷರೀಮಂತ್ರ ಜಪದಲ್ಲಿ ತತ್ಪರನಾದವನು ಎಂತಹ ಪಾಪಿಷ್ಠನೇ ಆಗಿದ್ದರೂ ಪರಿಶುದ್ಧನೆನಿಸಿಕೊಳ್ಳುವನು. ॥೨೩-೨೪॥

ಅಂತಹವನು ಎಂತಹ ಮಹಾಪಾಪಗಳನ್ನು ಮಾಡಿದ್ದರೂ, ಕ್ಷುದ್ರಪಾಪಗಳನ್ನೆಸಗಿದ್ದರೂ ಈ ಶಿವಪಂಚಾಕ್ಷರೀ ಜಪಮಹಿಮೆಯಿಂದ ರಾಹುಮುಕ್ತನಾದ ಚಂದ್ರನಂತೆ ಪರಿಶುದ್ಧನೆನಿಸಿಕೊಳ್ಳುವನು. ಭರ್ಗದೇವತಾಕವಾದ ಗಾಯತ್ರೀ ಮಂತ್ರವೂ, ಈ ಶಿವಪಂಚಾಕ್ಷರೀಮಂತ್ರವೂ, ಲೋಕದಲ್ಲಿ ಶ್ರೇಷ್ಠಮಂತ್ರಗಳೆನಿಸಿವೆ. ಇದಕ್ಕಿಂತ ಪವಿತ್ರಗಳಾದ ಮಂತ್ರಗಳೇ ಇಲ್ಲವೆಂದು ಹೇಳಬಹುದು. ॥೨೫-೨೬॥

ಈಶ್ವರಾನುಗ್ರಹ ಸಿದ್ಧಿಗಾಗಿ ಈ ಪಂಚಾಕ್ಷರೀಮಂತ್ರವು ಗಾಯತ್ರೀಮಂತ್ರದಂತೆಯೇ ಶ್ರೇಷ್ಠವೆನಿಸಿದೆ. ಈ ಎರಡು ಮಂತ್ರಗಳೂ ದ್ವಿಜರೆನಿಸಿದ ಮೂರು ವರ್ಣದವರಿಗೂ ಇಷ್ಟಾರ್ಥಪ್ರದವಾದುದು. ತಂತ್ರಮಾರ್ಗದಲ್ಲಿ ನಡೆಯುವವರಿಗೂ, ವೇದಮಾರ್ಗದಲ್ಲಿ ಮುಂದುವರಿಯುವವರಿಗೂ ಈ ಎರಡುಮಂತ್ರಗಳೂ ಅತ್ಯಾವಶ್ಯಕಗಳು. ದ್ವಿಜರಿಗೆ ಪರಮಪೂಜ್ಯವಸ್ತುವೆಂದರೆ ಮಹಾದೇವನೇ ಎಂದು ಹೇಗೆ ಪ್ರಸಿದ್ಧಿ ಇದೆಯೋ, ಹಾಗೆಯೇ ಜಪಯೋಗ್ಯವಾದ ಮಂತ್ರವೆಂದರೆ ಈ ಪಂಚಾಕ್ಷರೀ ಮಂತ್ರವೇ. ಇಂತಹ ಮಂತ್ರಗಳನ್ನು ಜಪಿಸುವವನೇ ನಿಜವಾದ ದ್ವಿಜನು. ॥೨೭-೨೮॥

ಆದ್ದರಿಂದ ದ್ವಿಜರೆನಿಸಿದವರಿಗೆ ಈ ಗಾಯತ್ರೀ ಮತ್ತು ಪಂಚಾಕ್ಷರೀ

ಶಿವಪ್ರಸಾದಸಿದ್ಧ್ಯರ್ಥಂ ಜಪನೀಯೋಃ ಮನುಃ ಪರಃ ।
ಸ್ತ್ರೀಭಿಶ್ಶೂದ್ರೈರ್ನಮೋಂತೇನ ಜಪನೀಯೋ ಮಹಾಮನುಃ ॥೩೦॥

ಗಾಯತ್ರೀತಿ ದ್ವಿಜಾತೀನಾಂ ಏವಂ ತ್ರೈವರ್ಣಿಕೇಷ್ವಪಿ ।
ನಾನ್ಯೇಷಾಂ ಶೂದ್ರಜಾತೀನಾಮಂಗನಾನಾಂ ಜಪೇ ಸ್ಮೃತಾ ॥೩೧॥

ಶೂದ್ರೋ ಜಪ್ತ್ವಾತು ಗಾಯತ್ರೀಂ ನರಕೇ ಪಚ್ಯತೇ ಚಿರಂ ।
ಜಾತಿಪ್ರಸಾದಜನಕೌ ಮಂತ್ರೌ ದ್ವೌ ಶಾಂಭವೌ ಸ್ಮೃತೌ ॥೩೨॥

ವೇದಮಾತಾ ಚ ಗಾಯತ್ರೀ ವೇದಮಧ್ಯಗತಾ ಸ್ವಯಂ ।
ತಸ್ಮಾನ್ಮಂತ್ರದ್ವಯಂ ವಿಪ್ರ ಸರ್ವಥಾ ಶ್ರುತಿಮಧ್ಯಗಂ ॥೩೩॥

ಪ್ರಲಯೇ ಸಮನುಪ್ರಾಪ್ತೇ ವೇದಾ ಲೀಯಂತಿ ಯತ್ರ ವೈ ।
ಗಾಯತ್ರ್ಯಾಮೇವ ಗಾಯತ್ರೀ ಭರ್ಗಶಬ್ದೇ ಶಿವಾತ್ಮಕೇ ॥೩೪॥

---

ಮಂತ್ರಗಳು ಶಿವಪ್ರಸಾದವನ್ನೂ ದ್ವಿಜತ್ವವನ್ನೂ ಸ್ಥಿರಪಡಿಸಿಕೊಡುವುವು. ಈಶ್ವರಾನುಗ್ರಹಪ್ರಾಪ್ತಿಗಾಗಿ ಈ ಮಂತ್ರವನ್ನು ಸಕಲ ಜಾತಿಯವರೂ, ದೇವತೆಗಳೂ, ಸ್ತ್ರೀಯರೂ ಸಹ ಜಪಿಸಬಹುದು. ಆದರೆ ಶೂದ್ರರು ಮತ್ತು ಸ್ತ್ರೀಯರು ಕೊನೆಯಲ್ಲಿ ನಮಶ್ಶಬ್ದವನ್ನು ಪ್ರಯೋಗಿಸುತ್ತಾ ಜಪಿಸಬೇಕು. ||೨೯-೩೦||

ಗಾಯತ್ರೀಮಂತ್ರವು ದ್ವಿಜರೆಂದು ಹೇಳಿಸಿಕೊಳ್ಳುವ ಬ್ರಹ್ಮ, ಕ್ಷತ್ರಿಯ, ವೈಶ್ಯರೆಂಬ ಮೂರು ಜಾತಿಯವರಿಗೇ ಜಪನೀಯವಾದ ಮಂತ್ರವೆನಿಸಿಕೊಂಡಿದೆ. ಸ್ತ್ರೀ ಶೂದ್ರರು ಗಾಯತ್ರೀಮಂತ್ರವನ್ನು ಜಪಿಸಬಾರದು. ಗಾಯತ್ರೀಮಂತ್ರ ಜಪದಿಂದ ಶೂದ್ರನು ನರಕಭಾಗಿಯೆನಿಸುವನು. ಈ ಶಿವಪಂಚಾಕ್ಷರೀ ಮತ್ತು ಗಾಯತ್ರೀಮಂತ್ರಗಳು ಜಾತಿವಿಶೇಷದಿಂದ ಫಲಕೊಡತಕ್ಕವುಗಳು. ||೩೧-೩೨||

ವೇದರಾಶಿಯ ಮಧ್ಯಭಾಗದಲ್ಲಿ ನಿರೂಪಿತವಾಗಿರುವ ಗಾಯತ್ರಿಯು ವೇದ ಮಾತೆಯೆನಿಸಿಕೊಂಡಿದೆ. ಆದ್ದರಿಂದ ಈ ಎರಡು ಮಂತ್ರಗಳೂ ವೇದಮಧ್ಯಗತ ವಾದವುಗಳೆಂಬುದನ್ನು ಮರೆಯಬಾರದು. ಪ್ರಳಯಕಾಲದಲ್ಲಿ ಸಕಲವೇದಗಳೂ ಗಾಯತ್ರಿಯಲ್ಲಿ ಅಡಗುತ್ತವೆ. ಆ ಗಾಯತ್ರಿಯು ಶಿವಾತ್ಮಕವಾದ ಭರ್ಗಶಬ್ದದಲ್ಲಿ ಲೀನವಾಗುತ್ತದೆ. ||೩೩-೩೪||

ಶಿವಪಂಚಾಕ್ಷರಾಕಾರಾಃ ಪಂಚವರ್ಣಾ ಶಿವಾಸ್ಯಕೇ ।
ವರ್ಣಾಃ ಪಂಚಾಕ್ಷರಸ್ಯಾಸ್ಯ ಪಂಚಾಸ್ಯ ಕ್ರಮತಃ ಶಿವೇ ॥೩೫॥

ಲೀಯಂತೇ ಕಿಲ ಕಲ್ಪಾಂತೇ ಪ್ರಣವೋ ಹೃದಯೇ ಸ್ಥಿತಃ ।
ತಸ್ಮಾಚ್ಛ್ರುತಿಷು ಸರ್ವತ್ರ ಶಿವೋ ಗೀತಃ ಸದಾಶಿವೋಂ ॥೩೬॥

ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಕೃತ್ ।
ಬ್ರಹ್ಮೈವ ಸರ್ವಧಾ ಶಂಭುರ್ಬ್ರಹ್ಮಣೋಧಿಪತಿಶ್ಶಿವಃ ॥೩೭॥

ನಕಾರೋಽಪಿ ಚ ಲೀಯೇತ ಸದ್ಯೋಜಾತಾಸ್ಯಕೇ ಶಿವೇ ।
ಮಕಾರೋಽಪಿ ಚ ಲೀಯೇತ ವಾಮದೇವಾಸ್ಯಕೇ ಶಿವೇ ॥೩೮॥

ಶಿಕಾರೋಽಪಿ ಚ ಲೀಯೇತ ಅಘೋರಾಸ್ಯೇ ಮಹೇಶ್ವರೇ ।
ವಾಕಾರೋಽಪಿ ಚ ಲೀಯೇತ ಶಿವೇ ತತ್ಪುರುಷಾತ್ಮಕೇ ॥೩೯॥

---

ಆ ಭರ್ಗಶಬ್ದವು ಶಿವಪಂಚಾಕ್ಷರಗಳ ಆಕಾರದಲ್ಲಿ ನಿಲ್ಲುತ್ತವೆ. ಆ ಐದು ಅಕ್ಷರಗಳೇ ಪರಶಿವನ ಐದು ಮುಖಗಳ ರೂಪವನ್ನು ಪಡೆದು ಅಲ್ಲಿ ಕೊನೆಗೆ ಲೀನ ವಾಗುತ್ತವೆ. ಮಂತ್ರಾದಿಯಲ್ಲಿಗುವ ಓಂಕಾರವು ಮಾತ್ರ ಪರಶಿವನ ಹೃದಯದಲ್ಲಿ ನಿಲ್ಲುತ್ತದೆ. ಹೀಗಿರುವುದರಿಂದ ನಿಖಿಲ ವೇದರಾಶಿಯೆಲ್ಲವೂ ಶಿವಪರವಾಗಿ ಸದಾಶಿವ ನನ್ನೇ ಸ್ತುತಿಸುತ್ತಲಿವೆ ಎಂದು ಅರಿಯಬೇಕು. ॥೩೫-೩೬॥

ಶಿವಪಂಚಾಕ್ಷರೀಮಂತ್ರದಲ್ಲಿ ಆದಿಭೂತವಾಗಿ ಶೋಭಿಸುವ ಪ್ರಣವಮಂತ್ರವೇ ಪರಬ್ರಹ್ಮಸ್ವರೂಪವು. ಅದೇ ಸರ್ವವಿದ್ಯೆಗಳಿಗೂ ಮೂಲಭೂತವೆನಿಸಿರುವುದು. ಪರಶಿವನೇ ಬ್ರಹ್ಮಸ್ವರೂಪಿಯು. ಚತುರ್ಮುಖಬ್ರಹ್ಮನಿಗೆ ಅಧಿಪತಿಯೆನಿಸಿ, ಸರ್ವ ರಿಗೂ ಸುಖಪ್ರದನಾಗಿರುವನು. ಪಂಚಾಕ್ಷರಗಳಲ್ಲಿ ಮೊದಲನೆಯದಾದ ನಕಾರವು ಕೊನೆಯಲ್ಲಿ ಶ್ರೀ ಶಂಕರನ ಪಂಚಮುಖಗಳಲ್ಲಿ ಮೊದಲನೆಯದಾದ ಸದ್ಯೋಜಾತ ನಾಮಕವಾದ ಮುಖದಲ್ಲಿ ಅಡಗುವುದು. ಮಕಾರವಾದ ಎರಡನೆಯ ಅಕ್ಷರವು ಎರಡನೆಯ ಮುಖವಾದ ವಾಮದೇವಮುಖದಲ್ಲಿ ನಿಲ್ಲುವುದು. ॥೩೭-೩೮॥

ಶಿಕಾರವು ಅಘೋರಾಸ್ಯದಲ್ಲಿಯೂ, ವಾಕಾರವು ತತ್ಪುರುಷಮುಖಸ್ಥಾನ ದಲ್ಲಿಯೂ, ಯಕಾರವು ಈಶಾನಾಸ್ಯದಲ್ಲಿಯೂ, ಓಂಕಾರವು ಶಂಕರನ ಸರ್ವಾಂಗ ದಲ್ಲಿಯೂ ವ್ಯಾಪಿಸಿ ನಿಲ್ಲುವುದು. ॥೩೯-೪೦॥

ಯಕಾರೋಽಪಿ ಚ ಲೀಯೇತ ಈಶಾನಾಸ್ಯೇ ಶಿವಾತ್ಮಕೇ ।
ಓಂಕಾರೋಽಪಿ ಚ ಲೀಯೇತ ಸರ್ವಾಂಗೇಽಪಿ ಚ ಶಾಂಕರೇ ॥೪೦॥

ಏವಮೇವ ಮಹಾಮಂತ್ರಮವಿಮುಕ್ತೇ ವಿಶೇಷತಃ ।
ಸಕಾರಸ್ತಾರಕೋ ಮಂತ್ರಃ ಶೈವೇಭ್ಯ ಉಪದಿಶ್ಯತೇ ॥೪೧॥

ಸರ್ವಜೀವೇಭ್ಯ ಏವೈಷ ಈಶಾನೇನ ದಯಾಳುನಾ ।
ನಾತಃ ಪರತರೋ ಮಂತ್ರಸ್ತಾರಕಃ ಪರಮೇಶ್ವರಃ ॥೪೨॥

ಯಸ್ಮಾದುಚ್ಚಾರ್ಯಮಾಣೇಽಪಿ ಶಿವರೂಪಂ ವಿಭಾಸತೇ ।
ಶಿವಸ್ವರೂಪಭಾಸೇನ ಸ ತು ಸಾಕ್ಷಾಚ್ಛಿವೋ ಭವೇತ್ ॥೪೩॥

ವರ್ಣೇಭ್ಯೋಽಪಿ ಪರಂ ಸಾರಂ ತಾರಂ ಶಿವಮಯಂ ವಿದುಃ ।
ಅವಿದ್ಯಾಕರ್ಮಪಾಶೇಭ್ಯಸ್ತಾರಣಾತ್ತಾರಮೇವ ಹಿ ॥೪೪॥

ವರ್ಣಾಸ್ತ್ವನ್ಯೇ ತು ಸಗುಣಾ ನಿರ್ಗುಣಂ ತಾರಮೇವ ಹಿ ।
ಸತಾರಂ ವರ್ಣಸಹಿತಂ ಶಿವರೂಪಾವಭಾಸಕಂ ॥೪೫॥

---

ಇದೇ ಶಿವಮಹಾಮಂತ್ರವು. ಇಂತಹ ತಾರಕಮಂತ್ರವನ್ನು ಪರಶಿವನು ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ವಾಸಮಾಡುತ್ತಾ ಮರಣಹೊಂದುವ ಶೈವರಿಗೆ ಮರಣಕಾಲದಲ್ಲಿ ಉಪದೇಶಮಾಡಿ ಅವರಿಗೆ ಮುಕ್ತಿಯನ್ನು ಅನುಗ್ರಹಿಸುವನು. ಇದಕ್ಕಿಂತ ಭವಬಂಧನತಾರಕವಾದ ಮಂತ್ರಶ್ರೇಷ್ಠವು ಲೋಕದಲ್ಲಿ ಮತ್ತೊಂದಿಲ್ಲ. ॥೪೧-೪೨॥

ಈ ಶಿವಪಂಚಾಕ್ಷರೀಮಂತ್ರದ ಉಚ್ಚಾರಣೆಯ ಮಾತ್ರದಿಂದಲೇ ಮಾನವರಿಗೆ ಶಿವಸ್ವರೂಪವು ಪ್ರತಿಬಿಂಬಿಸುವುದು. ಆದರಿಂದ ಅವನು ಸಾಕ್ಷಾಚ್ಛಿವಸ್ವರೂಪನೇ ಆಗುವನು. ಈ ಮಂತ್ರಘಟಿತವಾದ ಒಂದೊಂದು ಅಕ್ಷರವೂ ಮಹಾಮಹಿಮೆಯುಳ್ಳದ್ದೇ. ಅದರಲ್ಲಿಯೂ ಆದಿಭೂತವಾಗಿರುವ ಓಂಕಾರವು ಮಾತ್ರ ಶಿವಸ್ವರೂಪವಾದದ್ದೆಂದೇ ತಿಳಿದವರು ಹೇಳುವರು. ಅದು ಮಾನವರಿಗೆ ಸ್ವಭಾವವಾಗಿ ಒದಗುವ ಅವಿದ್ಯಾರೂಪವಾದ ಪಾಶದಿಂದ ತಪ್ಪಿಸಿ ಉದ್ಧಾರಮಾಡುತ್ತದೆಯಾದ್ದರಿಂದ ಅದಕ್ಕೆ ತಾರಕಮಂತ್ರವೆಂದು ಹೇಳುವರು. ॥೪೩-೪೪॥

ಇತರ ಐದು ಅಕ್ಷರಗಳು ಸಗುಣಬ್ರಹ್ಮಸ್ವರೂಪವನ್ನು ಬೋಧಿಸುವುವು.

ಶಿವಪಂಚಾಕ್ಷರಾಕಾರಾಃ ಪಂಚವರ್ಣಾ ಶಿವಾಸ್ಯಕೇ ।
ವರ್ಣಾಃ ಪಂಚಾಕ್ಷರಸ್ಯಾಸ್ಯ ಪಂಚಾಸ್ಯ ಕ್ರಮತಃ ಶಿವೇ ॥೩೫॥

ಲೀಯಂತೇ ಕಿಲ ಕಲ್ಪಾಂತೇ ಪ್ರಣವೋ ಹೃದಯೇ ಸ್ಥಿತಃ ।
ತಸ್ಮಾಚ್ಛ್ರುತಿಷು ಸರ್ವತ್ರ ಶಿವೋ ಗೀತಃ ಸದಾಶಿವೋಂ ॥೩೬॥

ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಕೃತ್ ।
ಬ್ರಹ್ಮೈವ ಸರ್ವದಾ ಶಂಭುರ್ಬ್ರಹ್ಮಣೋಧಿಪತಿಶ್ಶಿವಃ ॥೩೭॥

ನಕಾರೋಽಪಿ ಚ ಲೀಯೇತ ಸದ್ಯೋಜಾತಾಸ್ಯಕೇ ಶಿವೇ ।
ಮಕಾರೋಽಪಿ ಚ ಲೀಯೇತ ವಾಮದೇವಾಸ್ಯಕೇ ಶಿವೇ ॥೩೮॥

ಶಿಕಾರೋಽಪಿ ಚ ಲೀಯೇತ ಅಘೋರಾಸ್ಯೇ ಮಹೇಶ್ವರೇ ।
ವಾಕಾರೋಽಪಿ ಚ ಲೀಯೇತ ಶಿವೇ ತತ್ಪುರುಷಾತ್ಮಕೇ ॥೩೯॥

---

ಆ ಭರ್ಗಶಬ್ದವು ಶಿವಪಂಚಾಕ್ಷರಗಳ ಆಕಾರದಲ್ಲಿ ನಿಲ್ಲುತ್ತವೆ. ಆ ಐದು ಅಕ್ಷರಗಳೇ ಪರಶಿವನ ಐದು ಮುಖಗಳ ರೂಪವನ್ನು ಪಡೆದು ಅಲ್ಲಿ ಕೊನೆಗೆ ಲೀನವಾಗುತ್ತವೆ. ಮಂತ್ರಾದಿಯಲ್ಲಿಗುವ ಓಂಕಾರವು ಮಾತ್ರ ಪರಶಿವನ ಹೃದಯದಲ್ಲಿ ನಿಲ್ಲುತ್ತದೆ. ಹೀಗಿರುವುದರಿಂದ ನಿಖಿಲ ವೇದರಾಶಿಯೆಲ್ಲವೂ ಶಿವಪರವಾಗಿ ಸದಾಶಿವನನ್ನೇ ಸ್ತುತಿಸುತ್ತಲಿವೆ ಎಂದು ಅರಿಯಬೇಕು. ॥೩೫-೩೬॥

ಶಿವಪಂಚಾಕ್ಷರೀಮಂತ್ರದಲ್ಲಿ ಆದಿಭೂತವಾಗಿ ಶೋಭಿಸುವ ಪ್ರಣವಮಂತ್ರವೇ ಪರಬ್ರಹ್ಮಸ್ವರೂಪವು. ಅದೇ ಸರ್ವವಿದ್ಯೆಗಳಿಗೂ ಮೂಲಭೂತವೆನಿಸಿರುವುದು. ಪರಶಿವನೇ ಬ್ರಹ್ಮಸ್ವರೂಪಿಯು. ಚತುರ್ಮುಖಬ್ರಹ್ಮನಿಗೆ ಅಧಿಪತಿಯೆನಿಸಿ, ಸರ್ವರಿಗೂ ಸುಖಪ್ರದನಾಗಿರುವನು. ಪಂಚಾಕ್ಷರಗಳಲ್ಲಿ ಮೊದಲನೆಯದಾದ ನಕಾರವು ಕೊನೆಯಲ್ಲಿ ಶ್ರೀ ಶಂಕರನ ಪಂಚಮುಖಗಳಲ್ಲಿ ಮೊದಲನೆಯದಾದ ಸದ್ಯೋಜಾತನಾಮಕವಾದ ಮುಖದಲ್ಲಿ ಅಡಗುವುದು. ಮಕಾರವಾದ ಎರಡನೆಯ ಅಕ್ಷರವು ಎರಡನೆಯ ಮುಖವಾದ ವಾಮದೇವಮುಖದಲ್ಲಿ ನಿಲ್ಲುವುದು. ॥೩೭-೩೮॥

ಶಿಕಾರವು ಅಘೋರಾಸ್ಯದಲ್ಲಿಯೂ, ವಾಕಾರವು ತತ್ಪುರುಷಮುಖಸ್ಥಾನದಲ್ಲಿಯೂ, ಯಕಾರವು ಈಶಾನಾಸ್ಯದಲ್ಲಿಯೂ, ಓಂಕಾರವು ಶಂಕರನ ಸರ್ವಾಂಗದಲ್ಲಿಯೂ ವ್ಯಾಪಿಸಿ ನಿಲ್ಲುವುದು. ॥೩೯-೪೦॥

ಯಕಾರೋಽಪಿ ಚ ಲೀಯೇತ ಈಶಾನಾಸ್ಯೇ ಶಿವಾತ್ಮಕೇ ।
ಓಂಕಾರೋಽಪಿ ಚ ಲೀಯೇತ ಸರ್ವಾಂಗೇಽಪಿ ಚ ಶಾಂಕರೇ ॥೪೦॥

ಏವಮೇವ ಮಹಾಮಂತ್ರಮವಿಮುಕ್ತೇ ವಿಶೇಷತಃ ।
ಸಕಾರಸ್ತಾರಕೋ ಮಂತ್ರಃ ಶೈವೇಭ್ಯ ಉಪದಿಶ್ಯತೇ ॥೪೧॥

ಸನ್ನಜೀವೇಭ್ಯ ಏವೈಷ ಈಶಾನೇನ ದಯಾಳುನಾ ।
ನಾತಃ ಪರತರೋ ಮಂತ್ರಸ್ತಾರಕಃ ಪರಮೇಶ್ವರಃ ॥೪೨॥

ಯಸ್ಮಾದುಚ್ಚಾರ್ಯಮಾಣೇಽಪಿ ಶಿವರೂಪಂ ವಿಭಾಸತೇ ।
ಶಿವಸ್ವರೂಪಭಾಸೇನ ಸ ತು ಸಾಕ್ಷಾಚ್ಛಿವೋ ಭವೇತ್ ॥೪೩॥

ವರ್ಣೇಭ್ಯೋಽಪಿ ಪರಂ ಸಾರಂ ತಾರಂ ಶಿವಮಯಂ ವಿದುಃ ।
ಅವಿದ್ಯಾಕರ್ಮಪಾಶೇಭ್ಯಸ್ತಾರಣಾತ್ತಾರಮೇವ ಹಿ ॥೪೪॥

ವರ್ಣಾಸ್ತ್ವನ್ಯೇ ತು ಸಗುಣಾ ನಿರ್ಗುಣಂ ತಾರಮೇವ ಹಿ ।
ಸತಾರಂ ವರ್ಣಸಹಿತಂ ಶಿವರೂಪಾವಭಾಸಕಂ ॥೪೫॥

---

ಇದೇ ಶಿವಮಹಾಮಂತ್ರವು. ಇಂತಹ ತಾರಕಮಂತ್ರವನ್ನು ಪರಶಿವನು ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ವಾಸಮಾಡುತ್ತಾ ಮರಣಹೊಂದುವ ಶೈವರಿಗೆ ಮರಣಕಾಲದಲ್ಲಿ ಉಪದೇಶಮಾಡಿ ಅವರಿಗೆ ಮುಕ್ತಿಯನ್ನು ಅನುಗ್ರಹಿಸುವನು. ಇದಕ್ಕಿಂತ ಭವಬಂಧನತಾರಕವಾದ ಮಂತ್ರಶ್ರೇಷ್ಠವು ಲೋಕದಲ್ಲಿ ಮತ್ತೊಂದಿಲ್ಲ. ॥೪೧-೪೨॥

ಈ ಶಿವಪಂಚಾಕ್ಷರೀಮಂತ್ರದ ಉಚ್ಚಾರಣೆಯ ಮಾತ್ರದಿಂದಲೇ ಮಾನವರಿಗೆ ಶಿವಸ್ವರೂಪವು ಪ್ರತಿಬಿಂಬಿಸುವುದು. ಆದರಿಂದ ಅವನು ಸಾಕ್ಷಾಚ್ಛಿವಸ್ವರೂಪನೇ ಆಗುವನು. ಈ ಮಂತ್ರಘಟಿತವಾದ ಒಂದೊಂದು ಅಕ್ಷರವೂ ಮಹಾಮಹಿಮೆಯುಳ್ಳದ್ದೇ. ಅದರಲ್ಲಿಯೂ ಆದಿಭೂತವಾಗಿರುವ ಓಂಕಾರವು ಮಾತ್ರ ಶಿವಸ್ವರೂಪವಾದದ್ದೆಂದೇ ತಿಳಿದವರು ಹೇಳುವರು. ಅದು ಮಾನವರಿಗೆ ಸ್ವಭಾವವಾಗಿ ಒದಗುವ ಅವಿದ್ಯಾರೂಪವಾದ ಪಾಶದಿಂದ ತಪ್ಪಿಸಿ ಉದ್ಧಾರಮಾಡುತ್ತದೆಯಾದ್ದರಿಂದ ಅದಕ್ಕೆ ತಾರಕಮಂತ್ರವೆಂದು ಹೇಳುವರು. ॥೪೩-೪೪॥

ಇತರ ಐದು ಅಕ್ಷರಗಳು ಸಗುಣಬ್ರಹ್ಮಸ್ವರೂಪವನ್ನು ಬೋಧಿಸುವುವು.

ಶಿವಸ್ಯ ನಿರ್ಗುಣಂ ಸಾಕ್ಷಾತ್ಕಾರಮೇವ ಹಿ ಕೇವಲಂ ।
ಏಕಾಕ್ಷರಂ ಯತ್ಪ್ರಣವಂ ಸತಾರಂ ಸಮುದಾಹೃತಂ ॥೪೬॥

ತದೇವೋದ್ಗಾಥವಾಕ್ಯೇನ ಸರ್ವಶ್ರುತಿಷು ಗೀಯತೇ ।
ತದೇವಾನಂದಕಂದೋತ್ಥಂ ಸರ್ವಶಬ್ದಾವಭಾಸಕಂ ॥೪೭॥

ಸಂಶೀಲಯನ್ ಪರಂ ಯಾತಿ ಶಿವಮೇವ ಹಿ ನಿರ್ಗುಣಂ ॥೪೮॥

ಗಾಯತ್ರೀ ಮಂತ್ರಸಾರಂ ದ್ವಿಜಕುಲತಿಲಕಾಕಾರಸಿದ್ಧತ್ವದಾಯೀ ।
ಮಂತ್ರೋಽಯಂ ಶಿವತೋಷಕೃತ್ಸುನಿಹಿತೋ ವೇದಾಂತಭಾಗೇಷ್ವಪಿ ।
ತಾರೋಽಯಂ ಪರನಿರ್ಗುಣಪ್ರಕಟನೇ ಶಬ್ದಾದಿರೇವೈಷ ವೈ ।
ಭಿಕ್ಷೂಣಾಮಥ ಶಾಂಭವಾತ್ಮಕಹೃದಾ ಶಂ ಶೀಲತೋ ಮುಕ್ತಿದಃ ॥೪೯॥

---

ಓಂಕಾರದಿಂದ ತೋರಿಬರುವ ಅರ್ಥವು ಕೇವಲ ನಿರ್ಗುಣಾತ್ಮಕವಾದ ಶಿವಸ್ವರೂಪವನ್ನು ತಿಳಿಸುವುದು. ಇಂತಹ ಪ್ರಣವಸಹಿತವಾದ ಓಟ್ಟು ಶಿವಪಂಚಾಕ್ಷರೀಮಂತ್ರವು ಒಟ್ಟಿನಲ್ಲಿ ಶಿವಸ್ವರೂಪವನ್ನು ಮಾನವವೃಂದಕ್ಕೆ ಪ್ರತಿಫಲಿಸುವಂತೆ ಮಾಡುವುದು. ವಸ್ತುತಃ ಶಿವಸ್ವರೂಪವು ನಿರ್ಗುಣವೇ ಆಗಿದ್ದರೂ ನಿರ್ಗುಣೋಪಾಸನೆಯು, ಸಗುಣೋಪಾಸನೆಯು ಕ್ರಮದಿಂದ ಸಾಧಿತವಾಗಬೇಕೆಂಬುದನ್ನು ಈ ಪ್ರಣವಸಹಿತವಾದ ಪಂಚಾಕ್ಷರೀಮಂತ್ರವು ತಿಳಿಸುವುದು. ॥೪೫-೪೬॥

ಇದೇ ವಿಷಯವನ್ನೇ ಸಕಲ ಶ್ರುತಿಗಳೂ, ಸ್ತುತಿವಚನಗಳಿಂದ ಸರ್ವರಿಗೂ ತಿಳಿಸುತ್ತಿರುವುದು. ಸಕಲ ಆನಂದಗಳನ್ನೂ ಒದಗಿಸಿ, ಸರ್ವ ಶಬ್ದಗಳ ಮೂಲಾರ್ಥವನ್ನು ತಿಳಿಯಪಡಿಸಿ, ಪರಬ್ರಹ್ಮಸ್ವರೂಪಜ್ಞಾನದಿಂದ ನಿರ್ಗುಣಾತ್ಮಕವಾದ ಪರಶಿವವಸ್ತುವಿನಲ್ಲಿ ಅಂತರ್ಭಾವಗೊಳಿಸುವ ಮಹಾಮಂತ್ರವೆಂದರೆ ಈ ಪ್ರಣವಸಹಿತವಾದ ಶಿವಪಂಚಾಕ್ಷರಿಯೇ. ॥೪೭-೪೮॥

ಈ ಶಿವಪಂಚಾಕ್ಷರೀಮಂತ್ರವು, ಗಾಯತ್ರೀಮಹಾಮಂತ್ರಾರ್ಥದ ಸಾರಭೂತವಾದದ್ದು. ಇದರ ಜಪದಿಂದ ಬ್ರಾಹ್ಮಣವಂಶದಲ್ಲಿ ಅತಿಶ್ರೇಷ್ಠವೆನಿಸಿದ ಸ್ಥಾನವು ದೊರೆಯುವುದು. ಈ ಮಂತ್ರ ಶಿವಪ್ರೀತಿಕರವಾದದ್ದು, ಉಪನಿಷತ್ಶ್ರುತಿಪಾದ್ಯಮಾನವಾದುದು. ವಾಸ್ತವಿಕವಾದ ಪರಶಿವನ ನಿರ್ಗುಣಸ್ವರೂಪವನ್ನು ತಿಳಿಯಪಡಿಸಿ,

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಕಶ್ಯಪಗರುಡಸಂವಾದೇ ಪಂಚಾಕ್ಷರೀಮಹಿಮಾನುವರ್ಣನಂ ನಾಮ ಸಪ್ತಮೋಽಧ್ಯಾಯಃ

---

ಶಂಕರಧ್ಯಾನಾಸಕ್ತರಾಗಿರುವ ಸಕಲ ಶಾಂಭವವರ್ಗಕ್ಕೂ ಐಹಿಕಾಮುಷ್ಮಿಕ ಸುಖ ಭೋಗಗಳನ್ನು ಒದಗಿಸಿ, ತನ್ಮೂಲಕ ಆನಂದಮಯವಾದ ಮುಕ್ತಿಸ್ಥಾನವನ್ನು ಒದಗಿಸಿಕೊಡುವುದೆಂಬುದರಲ್ಲಿ ಸಂಶಯವಿಲ್ಲವೆಂದು ಕುಮಾರಸ್ವಾಮಿಯು ಜೈಗೀಷ ವ್ಯಾದಿಮುನಿಗಳಿಗೆ ವಿವರಿಸಿ ಹೇಳಿದನು. ||೪೯||

ಇಲ್ಲಿಗೆ ಶ್ರೀಶಿವರಹಸ್ಯದ ಎಂಟನೆಯ ಅಂಶದಲ್ಲಿ ಪಂಚಾಕ್ಷರೀಮಹಿಮೆಯನ್ನು ವಿವರಿಸುವ ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಅಷ್ಟಮೋಽಧ್ಯಾಯಃ

॥ ಪತಂಗ ಉವಾಚ ॥

ಪ್ರದೇಹಿ ಪರಮಂ ಮಂತ್ರಂ ಸಂಸಾರೋತ್ತಾರಕಂ ಗುರೋ ।
ಯೇನ ಮುಕ್ತೋ ಭವಾಮ್ಯದ್ಯ ಸಂಸಾರಾದಘಸಾಗರಾತ್ ॥೧॥

ಸಿದ್ಧಿಂ ಚ ಸಾಧಯೇ ಕಾಮ್ಯಾಂ ಪ್ರಸಾದಾತ್ಪರಮೇಷ್ಠಿನಃ ।
ಮಾತುರಾನೃಣ್ಯಮಿಚ್ಛಾಮಿ ಪ್ರಸಾದಾದೇವ ಶೂಲಿನಃ ॥೨॥

ತ್ವತ್ತೋ ಮಂತ್ರಮಿಮಂ ಲಬ್ಧ್ವಾ ಸಂಪೂಜ್ಯ ಪರಮೇಶ್ವರಂ ।
ಪಿತಃ ಪ್ರಸಾದಂ ಕುರು ಮೇ ಶಾಂಭವಸ್ತ್ವಂ ಮಹಾಮುನೇ ॥೩॥

---

## ಎಂಟನೆಯ ಅಧ್ಯಾಯ

ಮತ್ತೆ ಗರುಡನು ತಂದೆಯಾದ ಕಾಶ್ಯಪಋಷಿಯನ್ನು ಕುರಿತು, "ತಂದೆಯೇ, ಸಂಸಾರೋತ್ತಾರಕವಾದ ಆ ಶಿವಪಂಚಾಕ್ಷರೀಮಂತ್ರವನ್ನು ನನಗೆ ಕರುಣೆಯಿಂದ ಉಪದೇಶಿಸು. ಅದರ ಬಲದಿಂದ ನಾನು ಪಾಪಭೂಯಿಷ್ಠವಾದ ಈ ಸಂಸಾರಸಾಗರದಿಂದ ಉತ್ತೀರ್ಣನಾಗುವೆನು ಮತ್ತು ಶಿವಾನುಗ್ರಹವನ್ನು ಸಂಪಾದಿಸಿ ಇಷ್ಟಕಾಮ್ಯಗಳನ್ನೆಲ್ಲಾ ಸುಲಭವಾಗಿ ಹೊಂದುವೆನು. ಹಾಗೆಯೇ ನಮ್ಮ ತಾಯಿಗೆ ಇಷ್ಟವಾಗಿರುವ ಅಮೃತವನ್ನು ತಂದು ಒಪ್ಪಿಸಿ ಮಾತೃಋಣವನ್ನು ಪರಿಹರಿಸಿಕೊಳ್ಳುವೆನು. ॥೧-೨॥

ಜನಕನೇ, ನಿನ್ನಿಂದ ಆ ಮಂತ್ರವನ್ನು ಪಡೆದು ಶಂಕರನನ್ನು ಪೂಜಿಸಿ ತೃಪ್ತಿಪಡಿಸುವೆನು. ನನಗೆ ಅಷ್ಟು ಅನುಗ್ರಹಮಾಡು. ಅಂತಹ ಮಹಾನುಭಾವನೂ,

ಶಾಂಭವೀಂ ಯದಿ ವಿದ್ಯೇಯಂ ಲಬ್ಧ್ವಾ ಶಂಭೋಃ ಪ್ರಸಾದಕೃತ್ ।
ಯಃ ಪುತ್ರಃ ಪಿತರಂ ತ್ಯಕ್ತ್ವಾ ಶಾಂಭವಂ ಜ್ಞಾನಪಾರಗಂ ॥೪॥

ಪಂಚಾಕ್ಷರಂ ಚಾನ್ಯಮುಖಾಲ್ಲಬ್ಧ್ವಾ ಸಂಪೂಜಯೇಚ್ಛಿವಂ ।
ಸ ನೈವಾಧಿಕೃತೋ ಭೂಯಾತ್ಪ್ರಸಾದಾತ್ಪರಮೇಷ್ಠಿನಃ ॥೫॥

ತತ್ತ್ವವಿದ್ಭಿಶ್ಚ ಕಥಿತಂ ಶಿವೋಪ್ಯಾಹೈವಮೇವ ಹಿ ।
ಅಶಾಂಭವೋ ಯದಿ ಪಿತಾ ಪುತ್ರಶ್ಚೇಚ್ಛಾಂಭವೋ ಭವೇತ್ ॥೬॥

ಶಾಂಭವಾದೇವ ತನ್ಮಂತ್ರಂ ಗೃಹ್ಣೀಯಾದ್ವೈದಿಕೋತ್ತಮಾತ್ ।
ನಾವಿದ್ವತ್ಪಿತೃತೋ ಮಂತ್ರಮಿತ್ಯಾಹ ಪರಮೇಶ್ವರಃ ॥೭॥

ತಸ್ಮಾಚ್ಛಿವೋದಿತೋ ಮಾರ್ಗೋ ಹೇರಂಬಾಯ ಮಹಾಮುನೇ ।
ದದೌ ಶಿವೋ ಶಿವಾಯೈ ಸಃ ಸ್ಕಂದಾಯ ಪ್ರದದೌ ಶಿವಃ ॥೮॥

---

ಶಿವವಿದ್ಯಾಪಾರಂಗತನೂ, ಶಾಂಭವಾಗ್ರೇಸರನೂ ಆದ ತಂದೆಯಿಂದಲ್ಲದೆ ಮತ್ತಾರಿಂದ ತಾನೇ ಮಗನಾದವನು ಆ ಮಹಾಮಂತ್ರವನ್ನು ಉಪದೇಶರೂಪವಾಗಿ ಪಡೆದಾನು? ॥೩-೪॥

ಒಂದುವೇಳೆ ಅಂತಹ ತಂದೆಯನ್ನು ಬಿಟ್ಟು ಮತ್ತಾರಿಂದಲಾದರೂ ಉಪದೇಶವನ್ನು ಪಡೆದು ಶಿವಪೂಜೆಗೆ ಆರಂಭಿಸುವವನು ಅನಧಿಕಾರಿಯೆನಿಸುವನು. ಈ ಅಭಿಪ್ರಾಯವನ್ನು ತಿಳಿದವರೆಲ್ಲರೂ ಹೇಳಿರುವರು. ಶ್ರೀ ಶಂಕರನೂ ಹೀಗೆಯೇ ಅಭಿಪ್ರಾಯಪಟ್ಟಿರುವನು. ಒಂದುವೇಳೆ ತಂದೆಯಾದವನು ಈಶ್ವರಪೂಜಕನಲ್ಲದೆ, ಶಿವಧರ್ಮವನ್ನರಿಯದೆ ಮೂಢನಾಗಿದ್ದರೆ, ಆಗ ಮಗನಾದವನು ಮತ್ತೊಬ್ಬ ಶಾಂಭವ ವಿದ್ವಾಂಸನನ್ನು ಹುಡುಕಿಕೊಂಡು ಹೋಗಿ ಅವನಿಂದ ಶಿವಮಂತ್ರೋಪದೇಶವನ್ನು ಪಡೆಯಬೇಕೆಂದೂ, ಏನೂ ಅರಿಯದವನಿಂದ ಎಂದೂ ಉಪದೇಶವನ್ನು ಪಡೆಯಕೂಡದೆಂದೂ ಶಂಕರನೇ ಸಾಕ್ಷಾತ್ತಾಗಿ ಹೇಳಿರುವನು. ॥೫-೬॥

ಇದೇ ಕ್ರಮವನ್ನನುಸರಿಸಿ ಶಂಕರನೇ ತನ್ನ ಪುತ್ರರಾದ ಸ್ಕಂದಗಣಪರಿಗೂ, ಪತ್ನಿಯಾದ ಪಾರ್ವತಿಗೂ, ಇತರ ಗಣದೇವತೆಗಳಿಗೂ ತಾನೇ ಆ ದಿವ್ಯಮಂತ್ರವನ್ನು ಉಪದೇಶಿಸಿರುವನು. ಪತ್ನಿಯಾದವಳೂ ಸಹ ಪತಿಯಿಂದಲೇ ಈ ಮಂತ್ರವನ್ನು ಉಪದೇಶವನ್ನಾಗಿ ಪಡೆದು ಪುರಶ್ಚರಣೆ ಮಾಡಬೇಕು ಸ್ತ್ರೀಶೂದ್ರರು ಮಾತ್ರ

ಗಣಾನಾಂ ಪ್ರದಪೌ ಮಂತ್ರಂ ಪಂಚಾಕ್ಷರಮನುತ್ತಮಂ ।
ಭರ್ತುಃ ಸಕಾಶಾದ್ಭಾರ್ಯಾಪಿ ಲಬ್ಧ್ವಾ ಮಂತ್ರಂ ಶಿವಂ ಜಪೇತ್॥೯॥

ಸಮೋಂತೇನೈವ ಶೂದ್ರೋಪಿ ಯತಃ ಸ್ತ್ರೀ ಸಮುಚ್ಯತೇ ।
ಶೂದ್ರಾಣಾಂ ನೈವ ಮಂತ್ರೇಷು ಅಧಿಕಾರೋ ಮುನೇ ಕಿಲ ॥೧೦॥

॥ ಸೂತ ಉವಾಚ ॥

ಪಂಚಾಕ್ಷರೇಣ ವೈ ಶೂದ್ರಾನಧಿಕೃತ್ಯ ವದೇದ್ಗುರುಃ ।
ತನ್ಮೇ ವದ ವಿಶೇಷೇಣ ಸಂಶಯೋಽಸ್ಮಿನ್ ಹಿ ಕಶ್ಯಪ ॥೧೧॥

ತತಃ ಪತಂಗರಾಜಸ್ಯ ಶ್ರುತ್ವಾ ವಚನಮೀದೃಶಂ ।
ಪದ್ಮಜಾತಸುತಃ ಪ್ರಾಹ ತದುದ್ಬೋಧಕರಂ ವಚಃ ॥೧೨॥

॥ ಕಶ್ಯಪ ಉವಾಚ ॥

ಸತ್ಯಮುಕ್ತಂ ತ್ವಯಾ ಪುತ್ರ ಗುಹ್ಯಾದ್ಗುಹ್ಯತರಂ ವಚಃ ।
ತದದ್ಯ ಸಂಪ್ರವಕ್ಷ್ಯಾಮಿ ಯಥಾ ಶಿವಮನೋರಥಂ ॥೧೩॥

---

ನಮಃಶಬ್ದವನ್ನು ಕೊನೆಯಲ್ಲಿ ಪಠಿಸುತ್ತಾ ಈ ಮಂತ್ರೋಚ್ಚಾರಣೆ ಮಾಡಬೇಕು. ಮಂತ್ರೋಚ್ಚಾರಣೆಯ ವಿಷಯದಲ್ಲಿ ಸ್ತ್ರೀಶೂದ್ರರಿಬ್ಬರಿಗೂ ಸಮಾನವಾದ ಅಧಿಕಾರ ವಿರುವುದು. ಮಂತ್ರೋಚ್ಚಾರಣೆಯಲ್ಲಿ ಸ್ತ್ರೀಯರಿಗೂ, ಶೂದ್ರರಿಗೂ ಸ್ವತಂತ್ರಾಧಿಕಾರ ವಿರುವುದಿಲ್ಲ. ॥೭-೮-೯-೧೦॥

ಗುರುವಾದವನು ಶೂದ್ರರಿಗೆ ಶಿವಪಂಚಾಕ್ಷರೀಮಂತ್ರವನ್ನು ಉಪದೇಶಿಸ ಬಾರದೆಂದು ಕೆಲವರು ಹೇಳುತ್ತಾರಷ್ಟೆ. ಇದು ನಿಜವೇ? ಪೂಜ್ಯ ಮಹರ್ಷಿಯೇ, ಈ ಸಂಶಯವನ್ನು ನನಗೆ ಈಗ ಪರಿಹರಿಸು ಎಂದು ಗರುಡನು ಪೂಜ್ಯ ಪಿತನನ್ನು ಪ್ರಾರ್ಥಿಸಲು, ಆಗ ಬ್ರಹ್ಮಮಾನಸಪುತ್ರನಾದ ಕಶ್ಯಪಮಹರ್ಷಿಯು ಪುತ್ರನಾದ ಗರುಡನಿಗೆ ಈರೀತಿ ಜ್ಞಾನಪ್ರದವಾದ ಮಾತುಗಳನ್ನು ನುಡಿದನು. ॥೧೧-೧೨॥

"ಪುತ್ರವರ್ಯನೇ, ನೀನು ಸತ್ಯವಾಗಿ ಮಾತನಾಡಿದೆ. ನಿನ್ನ ಪ್ರಶ್ನೆಗೆ ಉತ್ತರವು ಅತಿ ನಿಗೂಢವಾದದ್ದು. ಅಲ್ಲದೆ ಅದು ಶಂಕರನ ಮನೋಭಿಪ್ರಾಯವನ್ನು ಸೂಚಿಸತಕ್ಕದು. ಅದನ್ನು ನಿನಗೆ ಈಗ ಪ್ರೀತಿಯಿಂದ ಯಥಾಮತಿ ಹೇಳುವೆನು.

ವಿರಕ್ತಾನಾಂ ತು ಶೂದ್ರಾಣಾಂ ಶಾಂಭವಾಚಾರವರ್ತಿನಾಂ ।
ಗುರುತ್ವೇನ ದ್ವಿಜಃ ಶೂದ್ರೈಃ ಪರಿಗೃಹ್ಯೋ ನ ಶೂದ್ರಜಃ ॥೧೪॥

ವಿಪ್ರೋಽಪಿ ಶಾಂಭವೋ ಯುಕ್ತಂ ಶೂದ್ರಂ ಭಸ್ಮಾಕ್ಷಧಾರಿಣಂ ।
ಪರೀಕ್ಷ್ಯ ನಿಯತಂ ಭವ್ಯಮುಗ್ರಾದ್ಯಂ ಸಂಕರಂ ನ ಚ ॥೧೫॥

ಶಿವಾಲಯಂ ತತೋ ಗತ್ವಾ ಶಿವತೀರ್ಥಂ ನಿಷೇವ್ಯ ಚ ।
ಸನ್ನಿಧೌ ದಕ್ಷಿಣಾಮೂರ್ತೇಃ ಭೂರ್ಜಪತ್ರೇ ಲಿಖೇನ್ಮನುಂ ॥೧೬॥

ತ್ರಿವಾರಂ ವಾಚಯೇದ್ವಿಪ್ರಃ ಶೂದ್ರಾದ್ವಿಧವಯಾಪಿ ಚ ।
ನಮೋಽಂತಂ ವಿಧವಾಶೂದ್ರೌ ತಥಾನ್ಯೇ ದ್ವಿಜವತ್ಸ್ಮೃತಾಃ ॥೧೭॥

ನ ಸ್ವಯಂ ತದ್ವದೇತ್ಕರ್ಣೇ ಶೂದ್ರಸ್ಯ ದ್ವಿಜಸತ್ತಮಃ ।
ಸ ಚ ಶಿಷ್ಯೋ ಭವೇಚ್ಛೂದ್ರಃ ಗುರುರ್ವಿಪ್ರೋ ನ ಸಂಶಯಃ ॥೧೮॥

---

ವೈರಾಗ್ಯವನ್ನು ಪಡೆದು ಶಿವಧರ್ಮವನ್ನು ಅನುಸರಿಸಿ ನಡೆಯುವ ಶೂದ್ರರು ಒಬ್ಬ ದ್ವಿಜನನ್ನು ಗುರುವನ್ನಾಗಿ ಕಲ್ಪಿಸಿಕೊಳ್ಳಬೇಕು. ಆ ದ್ವಿಜನು ಶೂದ್ರನಿಂದ ಜನಿಸಿದವನಾಗಿರಬಾರದು. ॥೧೩-೧೪॥

ಶಾಂಭವನೆನಿಸಿದ ಬ್ರಾಹ್ಮಣನು ಭಸ್ಮರುದ್ರಾಕ್ಷಧಾರಿಯಾದ ಶೂದ್ರನನ್ನು ನಾನಾರೀತಿಯಲ್ಲಿ ಪರೀಕ್ಷಿಸಿ ಅನಂತರ ಅವನಿಗೆ ಶಿವಧರ್ಮವನ್ನು ಉಪದೇಶಿಸಬೇಕು. ಆದರೆ ಆ ಶೂದ್ರನು ಸಂಕರಜಾತಿಯವನಾಗಿರಬಾರದು. ಅಂತಹ ಶೂದ್ರನನ್ನು ಮೊದಲು ಶಿವತೀರ್ಥಕ್ಷೇತ್ರದಲ್ಲಿರುವ ಶಿವಾಲಯಕ್ಕೆ ಕರೆದುಕೊಂಡು ಹೋಗಿ, ಅಲ್ಲಿ ಕೆಲವು ದಿವಸ ವಾಸಮಾಡುವಂತೆ ಏರ್ಪಡಿಸಿ, ದಕ್ಷಿಣಾಮೂರ್ತಿಯ ಸಮೀಪದಲ್ಲಿ ಕೂರಿಸಿ, ಶಿವಪಂಚಾಕ್ಷರೀಮಂತ್ರವನ್ನು ಭೂರ್ಜಪತ್ರದಲ್ಲಿ ಬರೆದು ಅವನಿಗೆ ಕೊಡಬೇಕು. ॥೧೫-೧೬॥

ಹಾಗೆ ಕೊಟ್ಟು ಆ ಮಂತ್ರವನ್ನು ಮೂರುಸಾರಿ ಬಾಯಿಯಲ್ಲಿ ಹೇಳಿಸಬೇಕು. ಆಗ ನಮಶ್ಶಬ್ದವು ಮಂತ್ರಾಂತದಲ್ಲಿ ಬಂದಿರಬೇಕು. ಈ ಕ್ರಮವು ಶೂದ್ರರಿಗೆ ಮತ್ತು ವಿಧವೆಯರಿಗೆ ಮಾತ್ರ. ಉಳಿದವರಿಗೆಲ್ಲಾ ಮಂತ್ರೋಪದೇಶದ ರೀತಿಯಲ್ಲಿ ಕಿವಿಯಲ್ಲಿ ಹೇಳಿಕೊಡಬೇಕು. ದ್ವಿಜಶ್ರೇಷ್ಠನಾದವನು ಎಂದೂ ಶೂದ್ರನ ಕಿವಿಯಲ್ಲಿ ಮಂತ್ರೋಪದೇಶ ಮಾಡಬಾರದು. ಹಾಗೆ ಉಪದೇಶಮಾಡಿದ ದ್ವಿಜನನ್ನು

ಏವಮಾಹುಃ ಪುರಾಚಾರ್ಯಾಃ ಶಿವಾಭಿಮತಮುತ್ತಮಂ ।
ಸ್ತ್ರಿಯೋಪಿ ಭರ್ತೃಮುಖತಃ ಪ್ರಾಪ್ಯ ಮಂತ್ರಮಿಮಂ ಜಪೇತ್॥೧೯॥

ಅನ್ಯೇ ವರ್ಣಾಸ್ತ್ರಯೋಪ್ಯೇವಂ ಪಿತುಃ ಪ್ರಾಪ್ಯಾ ಮಹಾಮನುಂ ।
ಜಪೇಯುಃ ಪೂಜಯೇಯುಶ್ಚ ಮಂತ್ರೇಣಾನೇನ ಶಂಕರಂ ॥೨೦॥

ಬಿಲ್ವಪತ್ರೈಃ ಪ್ರಸೂನೈರ್ವಾ ತ್ರಿವಾರಂ ಸಕೃದೇವ ವಾ ।
ಮೃಲ್ಲಿಂಗೇ ರಸಲಿಂಗೇ ವಾ ಧಾತುಜೇ ನಾರ್ಮದೇಪಿ ವಾ ॥೨೧॥

ರತ್ನಲಿಂಗೇಷು ವಾ ಸಮ್ಯಕ್ ಸ್ಥಾವರೇ ವಾ ಚರೇಪಿ ವಾ ।
ಸ್ವಯಂ ಭವೇವಾ ದೇವೇ ವಾ ಆರ್ಷೇ ವಾ ಮಾನವೈಃ ಕೃತೇ ॥೨೨॥

ಉತ್ತರೋತ್ತರತೋತ್ಕರ್ಷಾತ್ಪೂಜನೀಯಃ ಸದಾಶಿವಃ ।
ಲಿಂಗೇಷ್ವೇತೇಷು ಭಕ್ತೈರ್ವಾ ನಿಯಮಾಚ್ಛಂಕರಾರ್ಚಕಃ ॥೨೩॥

---

ಶೂದ್ರನು ಸದಾ ತನ್ನ ಗುರುವೆಂದು ಭಾವಿಸಿಕೊಂಡಿರಬೇಕು. ಆ ದ್ವಿಜನೂ ಅವನಲ್ಲಿ ಶಿಷ್ಯವಾತ್ಸಲ್ಯವನ್ನಿಟ್ಟಿರಬೇಕು. ॥೧೭-೧೮॥

ಇದು ಶಂಕರನ ಅಭಿಮತವೆಂದು ನಮ್ಮ ಹಿಂದಿನ ಮಹರ್ಷಿವರ್ಯರೆಲ್ಲಾ ತಿಳಿಸಿರುವರು. ಹೆಂಗಸರು ತಮ್ಮ ಪತಿಯರಿಂದಲೂ, ಉಳಿದ ದ್ವಿಜರೆಲ್ಲಾ ತಂದೆಯ ಮೂಲಕವೂ ಮಂತ್ರೋಪದೇಶವನ್ನು ಪಡೆಯಬೇಕೆಂಬುದೂ, ಅನಂತರ ಆ ಮಂತ್ರದಿಂದ ಲೋಕಸುಖಕರನಾದ ಮಹಾದೇವನನ್ನು ಪೂಜಿಸಬೇಕೆಂಬುದೂ, ಮಹೇಶ್ವರನ ಕಟ್ಟಪ್ಪಣೆ. ೧೯-೨೦॥

ಮಂತ್ರೋಪದೇಶವನ್ನು ಪಡೆದಮೇಲೆ ಶಿವಾರಾಧಕನು, ಭಕ್ತಿಯಿಂದ ಬಿಲ್ವಪತ್ರೆಗಳಿಂದಲೋ ಅಥವಾ ಪುಷ್ಪಗಳಿಂದಲೋ ಶಿವಲಿಂಗವನ್ನು ದಿನಕ್ಕೆ ಮೂರು ಸಾರಿ ಅಥವಾ ಒಂದುಸಾರಿಯಾದರೂ ಅರ್ಚನೆಮಾಡಬೇಕು. ಪೂಜಾಕಾಲದಲ್ಲಿ ಮಣ್ಣಿನಲಿಂಗ, ರಸಲಿಂಗ, ಲೋಹಮಯವಾದ ಲಿಂಗ, ನರ್ಮದಾಲಿಂಗ, ರತ್ನಲಿಂಗ, ಪ್ರತಿಷ್ಠಿತವಾದ ಶಿವಲಿಂಗ ಅಥವಾ ಜಂಗಮರೂಪಿಯಾದ ಚರಲಿಂಗ, ಸ್ವಯಂ ಉದ್ಭವಲಿಂಗ, ಋಷಿಗಳಿಂದಲೋ, ಮಾನವರಿಂದಲೋ ವಿಧಿವತ್ತಾಗಿ ಪ್ರತಿಷ್ಠಿತವಾದ ಲಿಂಗ ಇವುಗಳಲ್ಲಿ ಯಾವುದನ್ನಾದರೂ ಉಪಯೋಗಿಸಬಹುದು. ಈ ಲಿಂಗಗಳಲ್ಲಿ ಮುಂದೆ ಮುಂದೆ ಹೇಳಿದ ಲಿಂಗಗಳು ಹಿಂದು ಹಿಂದಿನ ಲಿಂಗಗಳಿಗಿಂತ ಉತ್ಕೃಷ್ಟ

ಸ್ಫಾಟಿಕೇ ಪೂಜಿತಶ್ಶಂಭುಃ ಪ್ರದದಾತಿ ಚ ವಾಂಛಿತಂ ।
ಲಿಂಗಾರ್ಚನೇನ ಸಕಲಂ ವಾಂಛಿತಂ ಪ್ರಾಪ್ಯತೇ ನೃಣಾಂ ॥೨೪॥

ಸರ್ವೇ ಲಿಂಗಾರ್ಚನೇನೈವ ಪ್ರಾಪ್ಯಂತೇ ಹಿ ಮನೋರಥಾನ್ ।
ಶಿವಸ್ಯ ಲಿಂಗಪೂಜೈವ ಮುಕ್ತಿದಾ ಶ್ರುತಿದರ್ಶಿತಾ ॥೨೫॥

ಅನುನಂತ್ಯಂಡಜಶ್ರೇಷ್ಠ ಜಾಬಾಲಶ್ರುತಯೋ ಧ್ರುವಂ ।
ಶಿವಲಿಂಗಮನಭ್ಯರ್ಚ್ಯ ನ ಪೇಯಂ ಜಲಮಪ್ಯಣು ॥೨೬॥

ಫಲಂ ವಾ ಯದ್ಯದಾ ಭೋಜ್ಯಂ ಅನ್ನಂ ವಾ ಶಂಕರಾರ್ಪಿತಂ ।
ಭುಂಜೀಯಾಚ್ಛ್ರೀ ಮಹೇಶಾಯ ಯಂ ನಿವೇದಿತಮುತ್ತಮಂ॥೨೭॥

ಅನಭ್ಯರ್ಚ್ಯ ಮಹಾದೇವಂ ಯೋಽಶ್ನಾತಿ ಫಲಮೇವ ವಾ ।
ಸ ರೇತೋ ಭಕ್ಷ್ಯ ನರಕೇ ತಿಷ್ಠತ್ಯಾಭೂತಸಂಪ್ಲವಂ ॥೨೮॥

---

ವಾದವುಗಳು. ಅಂತೂ ಭಕ್ತಿಯಿಂದ ಯಾವ ಶಿವಲಿಂಗವನ್ನಾದರೂ ಅರ್ಚನೆಮಾಡ ಬಹುದು. ॥೨೧-೨೨-೨೩॥

ಸ್ಫಟಿಕಲಿಂಗಾರ್ಚನೆಯಿಂದ ಮಾನವನು ಸಕಲ ಮನೋಭೀಷ್ಟಗಳನ್ನೂ ಪಡೆಯಬಹುದು. ಒಟ್ಟಿನಲ್ಲಿ ಮಾನವರ ಸಕಲ ಅಭೀಷ್ಟಗಳೂ ಶಿವಲಿಂಗಾರ್ಚನೆ ಯಿಂದಲೇ ಸಿದ್ಧಿಸುತ್ತವೆ. ಶಿವಲಿಂಗಪೂಜೆಯೇ ಮುಕ್ತಿಪ್ರದವಾದದ್ದೆಂದು ಸಕಲ ಶ್ರುತಿಗಳೂ ಸಾರುತ್ತಲಿವೆ. ॥೨೪-೨೫॥

ಪಕ್ಷಿರಾಜನೇ, ಜಾಬಾಲಮಹರ್ಷಿಪ್ರೋಕ್ತವಾದ ಶ್ರುತಿಯು ಹೀಗೆ ಹೇಳು ತ್ತದೆ. ಮಾನವರು ಶಿವಲಿಂಗಾರಾಧನೆಮಾಡದೆ, ಜಲಪಾನವನ್ನು ಸಹ ಮಾಡ ಬಾರದು. ಹಣ್ಣನ್ನಾಗಲಿ, ಇತರ ಯಾವವಿಧವಾದ ಆಹಾರವನ್ನೇ ಆಗಲಿ ಸ್ವೀಕರಿಸ ಬೇಕಾದರೆ, ಮೊದಲು ಅದನ್ನು ಮಹಾದೇವನಿಗೆ ನಿವೇದಿಸಿ ಅನಂತರ ಭುಂಜಿಸ ಬೇಕು. ॥೨೬-೨೭॥

ಯಾವನು ಶಿವಾರಾಧನೆಮಾಡದೆ ಹಣ್ಣನ್ನಾಗಲಿ, ಇತರ ಆಹಾರವನ್ನಾಗಲಿ ಭಕ್ಷಿಸುವನೋ, ಅವನು ನರಕದಲ್ಲಿ ಪ್ರಳಯಪರ್ಯಂತ ರೇತಸ್ಸನ್ನು (ವೀರ್ಯವನ್ನು) ಕುಡಿಯುತ್ತಾ ನರಳುವನು. ಪ್ರತಿದಿನದಲ್ಲಿಯೂ ಮಾಡಿದ ಪಾಪಗಳನ್ನೂ, ಅಕಸ್ಮಾತ್ತಾಗಿ ಬರುವ, ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆನಿಸಿದ ತಾಪತ್ರಯ

ಯದ್ಯದಹ್ನಾ ಕರೋತ್ಪಾಪಂ ಯಚ್ಚ ತಾಪತ್ರಯಾತ್ಮಕಂ ।
ಯದಹ್ನಾತ್ಪ್ರತಿಮುಚ್ಯೇತ ಶಿವಲಿಂಗಾರ್ಚನೇನ ಹಿ ॥೨೯॥

ಪ್ರದೋಷೇ ಯಶ್ಶಿವಂ ದೃಷ್ಟ್ವಾ ಪರಿಪೂಜ್ಯ ಸ ಭಕ್ತಿಭಾಕ್ ।
ದ್ವಿತ್ರೈರ್ವಾ ಬಿಲ್ವಪತ್ರೈರ್ವಾ ನೀರೈರ್ವಾಪಿ ಮಹೇಶ್ವರ ॥೩೦॥

ಸೋಮವಾರೇ ತಥಾ ಸಾಯಂ ಶತಜನ್ಮಾಘನಾಶನಂ ।
ಕಾಲಾಷ್ಟಮ್ಯಾಂ ಕಾಲಕಾಲಂ ಸಾಯಮಭ್ಯರ್ಚ್ಯ ಶಂಕರಂ ॥೩೧॥

ಭೂತಾಯಾಂ ವೈ ಭೂತನಾಥಂ ಸಾಯಮಭ್ಯರ್ಚ್ಯ ಶಂಕರಂ ।
ನೈವೇದ್ಯಂ ನಿಶಿ ಭುಕ್ತ್ವೈವ ಸರ್ವಥಾ ಗಣಪೋ ಭವೇತ್ ॥೩೨॥

ಸಂಸಾರರೋಗನಿರ್ಮುಕ್ತಃ ಮುಕ್ತಯೇ ಕಲ್ಪತೇ ನರಃ ।
ತಥಾ ಪರ್ವಸ್ವಪಿ ಶಿವಂ ಗ್ರಹಣೇ ಸೋಮಸೂರ್ಯಯೋಃ ॥೩೩॥

ಸಮಭ್ಯರ್ಚ್ಯಾಮರಶ್ರೇಷ್ಠಂ ಸರ್ವಲೋಕೇಷ್ವಪಿ ಧ್ರುವಂ ।
ಯಾವಜ್ಜೀವಂ ಸಮಭ್ಯರ್ಚ್ಯ ಜೀವನ್ಮುಕ್ತೋ ಭವೇನ್ನರಃ ॥೩೪॥

---

ಗಳನ್ನೂ ಆಗಾಗಲೇ ಕಳೆದುಕೊಳ್ಳಲಿಚ್ಛಿಸುವವರು ಪ್ರತಿದಿನವೂ ಶಿವಲಿಂಗಾರಾಧನೆ ಮಾಡಬೇಕು. ಪ್ರದೋಷಕಾಲದಲ್ಲಿ ಶಿವಲಿಂಗಕ್ಕೆ ಎರಡೋ, ಮೂರೋ, ಬಿಲ್ವದಳ ಗಳನ್ನಾಗಲಿ, ಅಥವಾ ಜಲಾಭಿಷೇಕದಿಂದಾಗಲಿ, ತೃಪ್ತಿಪಡಿಸಿ ದರ್ಶನಮಾಡಿದವರು ಸರ್ವಪಾಪಮುಕ್ತರಾಗುವರು. ॥೨೮-೨೯-೩೦॥

ಸೋಮವಾರ, ಕೃಷ್ಣಾಷ್ಟಮಿ, ಚತುರ್ದಶೀ, ಈ ದಿನಗಳ ಸಾಯಂಕಾಲ ದಲ್ಲಿ, ಕಾಲಕಾಲನೂ, ಭೂತಪತಿಯೂ ಆದ ಶಂಕರನನ್ನು ಪೂಜಿಸಿ, ರಾತ್ರಿ ಶಿವ ನೈವೇದ್ಯವನ್ನು ಭುಂಜಿಸಿದವರು ತಮ್ಮ ನೂರು ಜನ್ಮಗಳ ಪಾಪರಾಶಿಯನ್ನು ಕಳೆದು ಕೊಂಡು ಪ್ರಮಥಗಣಗಳಿಗೆ ಒಡೆಯರೆನಿಸುವರು. ॥೩೧-೩೨॥

ಮತ್ತು ಸಂಸಾರವೆಂಬ ರೋಗದಿಂದ ಮುಕ್ತರಾಗಿ ಮೋಕ್ಷಪದವಿಗೆ ಅರ್ಹರಾ ಗುವರು. ಹಾಗೆಯೇ ಕೃಷ್ಣಾಷ್ಟಮಿ, ಕೃಷ್ಣಚತುರ್ದಶೀ, ಪೂರ್ಣಿಮಾ, ಅಮಾ ವಾಸ್ಯೆ, ಸಂಕ್ರಮಣದಿನಗಳೆಂಬ ಪಂಚಪರ್ವದಿನಗಳಲ್ಲಿಯೂ, ಸೂರ್ಯಚಂದ್ರರ ಗ್ರಹಣಕಾಲದಲ್ಲಿಯೂ ದೇವದೇವನಾದ ಶಂಕರನನ್ನು ತಮ್ಮ ಜೀವಿತಕಾಲದಲ್ಲಿ

ಪ್ರಮಾದಾದೇಕದಾ ತ್ಯಕ್ತ್ವಾ ಶಿವಲಿಂಗಾರ್ಚನಂ ಸುತ ।
ವಾಪಯಿತ್ವಾ ಶಿರಃ ಕೇಶಾನ್ ಪ್ರಾಶ್ಯ ಗವ್ಯಾದಿಪಂಚಕಂ ॥೩೫॥

ರುದ್ರೈರ್ಹೋಮಂ ಹುನೇದೇವಂ ಚರುಣಾ ಸರ್ಪಿಷಾ ದ್ವಿಜಃ ।
ಸ್ವಸೂತ್ರೋಕ್ತಮಾರ್ಗೇಣ ಕೃತ್ವಾ ಪೂರ್ವಾಪರಾಕ್ರಮಂ ॥೩೬॥

ಶಾಂಭವಂ ಭೋಜಯಿತ್ವೈಕಮುಪೋಷ್ಯಾಭ್ಯರ್ಚ್ಯ ಶೂಲಿನಂ ।
ಪೂರ್ವಾಹ್ಣಾಪರಹೇ ಚೈವ ಕೃತ್ವಾ ಪೂಜಾದ್ವಯಂ ತತಃ ॥೩೭॥

ಭುಂಜೀತ ಶಾಂಭವೈಃ ಸಾರ್ಧಂ ನೈವೇದ್ಯಂ ಯಚ್ಛಿವಾರ್ಪಿತಂ ।
ತತ್ಪಾಪಮುಕ್ತೋ ಭವತಿ ಇತ್ಯಾಹ ಪರಮೇಶ್ವರಃ ॥೩೮॥

ಶಿವಾರ್ಚನಪರಿತ್ಯಾಗೋ ಮಹಾಪಾಪಂ ಪ್ರಕೀರ್ತಿತಂ ।
ನಿಷ್ಕೃತಿರ್ವಿದಿತಾ ಶಾಸ್ತ್ರೇ ಮಹಾಪಾಪೇ ಕ್ವಚಿದ್ದ್ವಿಜ ॥೩೯॥

---

ಪೂಜಿಸಿದವರು ಜೀವನ್ಮುಕ್ತರಾಗುವರು, ಅಂದರೆ ಸಶರೀರರಾಗಿ ಸ್ವರ್ಗವನ್ನು ಸೇರುವವರು. ॥೩೩-೩೪॥

ಒಂದುವೇಳೆ ಕಾರಣಾಂತರದಿಂದ ಶಿವಾರ್ಚನೆಯು ನಿಂತುಹೋದರೆ, ಪ್ರಾಯಶ್ಚಿತ್ತರೂಪವಾಗಿ, ತಲೆಯನ್ನು ವಪನಮಾಡಿಸಿಕೊಂಡು, ದೇಹಶುದ್ಧ್ಯರ್ಥವಾಗಿ ಪಂಚಗವ್ಯಪ್ರಾಶನೆಮಾಡಿ, ಅನಂತರ ಸ್ವಶಾಖೋಕ್ತರೀತಿಯಾಗಿ ಅಗ್ನಿಮುಖಕರ್ಮದಿಂದ ಅಗ್ನಿಯಲ್ಲಿ, ಅನ್ನ ತುಪ್ಪ ಮುಂತಾದ ದ್ರವ್ಯಗಳಿಂದ ಹೋಮಮಾಡಬೇಕು. ಸ್ವಾಹಾಕಾರಕ್ಕೆ ಶ್ರೀರುದ್ರಮಂತ್ರವನ್ನೇ ಉಪಯೋಗಿಸಬೇಕು. ॥೩೫-೩೬॥

ಒಬ್ಬ ಶಾಂಭವನಿಗೆ ಮೃಷ್ಟಾನ್ನಭೋಜನಮಾಡಿಸಿ, ತಾನು ಮಾತ್ರ ಉಪವಾಸವಿದ್ದು, ಎರಡು ದಿನಗಳ ಪರ್ಯಂತ ಶಿವಪೂಜೆಯನ್ನೇ ಮಾಡುತ್ತಿದ್ದು, ಅನಂತರ ಶಿವನಿವೇದಿತವಾದ ವಸ್ತುಗಳನ್ನು ಶಾಂಭವವೃಂದಕ್ಕೆ ಸಮರ್ಪಿಸಿ, ಆ ಮೇಲೆ ತಾನು ಭೋಜನಮಾಡಬೇಕು. ಹಾಗೆ ಮಾಡುವುದರಿಂದ ಶಿವಪೂಜಾಪರಿತ್ಯಾಗದ ಪಾಪವು ಪರಿಹಾರವಾಗುವುದೆಂದು ಪರಮೇಶ್ವರನೇ ಹೇಳಿರುವನು. ॥೩೭-೩೮॥

ಗರುಡಪಕ್ಷಿಯೇ, ಶಿವಾರ್ಚನಪರಿತ್ಯಾಗವೆಂಬುದು ಒಂದು ಮಹಾಪಾಪ. ಇತರ ಮಹಾಪಾಪಗಳಿಗೆ ಅನೇಕ ಪ್ರಾಯಶ್ಚಿತ್ತಗಳಿವೆ. ಈ ಪಾಪಕ್ಕೆ ಮಾತ್ರ ಪ್ರಾಯಶ್ಚಿತ್ತವಿಲ್ಲ. ಘೋರನರಕಪ್ರಾಪ್ತಿಯೇ ಇದಕ್ಕೆ ಫಲ. ಒಂದು ವೇಳೆ ಶಿವ

ಪ್ರಾಣಾಂತಂ ನ ತತೋ ಘೋರಂ ನರಕಂ ಪ್ರಾಪ್ನುಯಾನ್ನರಃ ।
ಗೃಹೀತ್ವಾ ನಿಯಮಂ ವಿಪ್ರೋ ಶಿವಲಿಂಗಾರ್ಚನಕ್ರಮೇ ॥೪೦॥

ವರಂ ಪ್ರಾಣತ್ಯಾಗಶ್ಛೇದನಂ ಶಿರಸೋ ದ್ವಿಜ ।
ಅನಭ್ಯರ್ಚ್ಯ ಮಹಾದೇವಮನ್ನಂ ನಾಶ್ನೀಯಾತ್ ಕದಾಚನ ॥೪೧॥

ಏವಂ ನಿಯಮಮಾಸ್ಥಾಯ ತ್ಯಕ್ತ್ವಾ ತಚ್ಛಂಕರಾರ್ಚನಂ ।
ತ್ಯಕ್ತಪ್ರಾಣೋ ನ ಶುದ್ಧ್ಯೇತ ಮೃತೋ ನರಕಮಿಚ್ಛತಿ ॥೪೨॥

ತಸ್ಮಾದತಂದ್ರಿತೋ ಲಿಂಗೇ ಪೂಜನೀಯಸ್ಸದಾಶಿವಃ ।
ಶಿವಪ್ರಸಾದಜನಕಂ ಶಿವಲಿಂಗಸ್ಯ ಪೂಜನಂ ॥೪೩॥

ಭುಕ್ತಿದಂ ಮುಕ್ತಿದಂ ಚಾಪಿ ಜ್ಞಾನದಂ ಸರ್ವದಾ ನೃಣಾಂ ।
ಅವಶ್ಯಂ ತದ್ದ್ವಿಜಾತೀನಾಮಿತ್ಯಾಹ ಶಶಿಶೇಖರಃ ॥೪೪॥

---

ಪೂಜೆಯು ಬಿಟ್ಟುಹೋದರೆ ನಿಯಮದಿಂದ ಮತ್ತೆ ಶಿವಾರಾಧನೆಮಾಡುವುದೇ ಪ್ರಾಯಶ್ಚಿತ್ತವೆಂದು ಉಕ್ತವಾಗಿದೆ. ॥೩೯-೪೦॥

ಶಿವಪೂಜೆಯನ್ನು ಬಿಟ್ಟವನು ಪ್ರಾಣಪರಿತ್ಯಾಗಮಾಡುವುದೂ, ಶಿರಶ್ಛೇದ ಮಾಡಿಕೊಳ್ಳುವುದೂ, ಒಂದು ಸಾರಿ ಶ್ರೇಷ್ಠವೆನಿಸುವುದು. ಮಹಾದೇವಾರ್ಚನೆ ಮಾಡದೆ ಆಹಾರವನ್ನು ಭುಜಿಸುವವನು ಮಹಾ ಪಾಪಿಯೆನಿಸುವನು. ಅಂತಹ ಪಾಪಿಯು ತನ್ನ ಪ್ರಾಣವನ್ನೇ ಆ ಪಾಪಪ್ರಾಯಶ್ಚಿತ್ತರೂಪವಾಗಿ ಅರ್ಪಿಸಿದರೂ ಶುದ್ಧನಾಗುವುದಿಲ್ಲ. ಹಾಗೆ ಮೃತಿಹೊಂದಿದರೆ ನರಕವೇ ದೊರೆಯುವುದು.॥೪೧-೪೨॥

ಆದ್ದರಿಂದ ಮನುಷ್ಯಸಾಮಾನ್ಯನು ತಪ್ಪದೆ ಆಲಸಿಕೆಯನ್ನು ಬಿಟ್ಟು ಶಿವಲಿಂಗ ವನ್ನು ಆರಾಧಿಸಬೇಕು. ಶಿವಾನುಗ್ರಹವು ದೊರೆಯಬೇಕಾದರೆ ಶಿವಲಿಂಗಾರಾಧನೆಯೇ ಮುಖ್ಯ ಸಾಧನೆ. ಅದು ಭಕ್ತರಿಗೆ ಭುಕ್ತಿ, ಮುಕ್ತಿ, ತತ್ಸಾಧನವಾದ ಜ್ಞಾನ ಇವುಗಳನ್ನು ಒದಗಿಸುವುದು. ಅದರಲ್ಲಿಯೂ ದ್ವಿಜರಿಗೆ ಮಾತ್ರ ಶಿವಲಿಂಗ ಪೂಜೆಯು ಕರ್ತವ್ಯಾಂಶವೆಂದು ಚಂದ್ರಶೇಖರನೇ ತಿಳಿಯಪಡಿಸಿರುವನು. ॥೪೩-೪೪॥

ಆರಾಧನೆಯ ಕಾಲದಲ್ಲಿ ಶಂಕರನೊಡನೆ ಇತರ ದೇವತೆಗಳನ್ನು ಪೂಜಿಸ ಬಾರದು. ಏಕೆಂದರೆ ಶೈವದರ್ಶನಕಾರರು ಪರಶಿವನನ್ನೇ ಪತಿಯೆಂದೂ; ಬ್ರಹ್ಮ ವಿಷ್ಣ್ವಾದಿ ಇತರ ದೇವತೆಗಳನ್ನೂ, ಮಾನವಾದಿ ಸಕಲ ಪ್ರಾಣಿವರ್ಗವನ್ನೂ

ನಾನ್ಯದೇವೈಃ ಸಮಂ ಶಂಭುಂ ಪೂಜಯೇದ್ವಿಶ್ವನಾಯಕಂ ।
ಪಶವೋ ಬ್ರಹ್ಮವಿಷ್ಣ್ವಾದ್ಯಾಸ್ತೈಸ್ಸಮಂ ಪತಿಪೂಜನಂ ॥೪೫॥

ನ ಕಾರ್ಯಂ ಸರ್ವಥಾ ಸರ್ವೈರ್ನ ಪ್ರಸಾದಕರಂ ಹಿ ತತ್ ।
ಮಾತ್ವಾರುದ್ರೇತಿ ಮಂತ್ರೇಣ ಶ್ರುತಿಃ ಪೂಜಾಂ ನಿಷೇಧತಿ ॥೪೬॥

ಸಹಾಹ್ವಾನಾರ್ಚನಂ ಶಂಭೋರ್ನೈವ ಕುರ್ಯಾತ್ಸುರಾಂತರೈಃ ।
ನರಕಾವಹಮೇವಾದ್ಯ ನಾತ್ರ ಕಾರ್ಯಾ ವಿಚಾರಣಾ ॥೪೭॥

ವಿಶ್ವಾಕಾರಾ ಸರ್ವ ಏವ ಸ ತು ವಿಶ್ವಾಧಿಕಶ್ಶಿವಃ ।
ಏಕಶ್ಶಿವಸ್ತಥಾ ದ್ವೈತೋ ದ್ವೈತವಾರ್ತಾಪಿ ತತ್ರ ನ ॥೪೮॥

ತಸ್ಮಾತ್ಸಂಪೂಜಯೇಚ್ಛಾಂಗಂ ಲಿಂಗಮೇವ ಪಿನಾಕಿನಃ ।
ಶಿವಲಿಂಗಾರ್ಚನೇನೈವ ಶಿವಸ್ತುಷ್ಯತಿ ನಾನ್ಯಥಾ ॥೪೯॥

---

ಪಶುಗಳೆಂದೂ ನಿರ್ಣಯಮಾಡಿರುವರು. ಆದ್ದರಿಂದ ಪತಿಯೊಡನೆಯೇ ಪಶುಗಳನ್ನು ಪೂಜಿಸುವುದು ಸಿದ್ಧಿಕಾರಿಯಾಗಲಾರದು. ಅಲ್ಲದೆ ರುದ್ರಸೂಕ್ತದಲ್ಲಿ ಹೇಳಿರುವ "ಮಾತ್ವಾ ರುದ್ರ ಚುಕ್ರುಧಾ ಮಾ ನಮೋಭಿರ್ಮಾದುಷ್ಟುತೀ ವೃಷಭ ಮಾ ಸ ಹೂತೀ" ಎಂಬ ಮಂತ್ರದಲ್ಲಿ ವಿಸದೃಶರಾದ ಇತರ ದೇವತೆಗಳೊಡನೆ ನಿನ್ನನ್ನೂ ಆಹ್ವಾನಿಸುವುದರಿಂದ ಕೋಪಿಸಿಕೊಳ್ಳಬೇಡ ಎಂದು ಶಿವಸ್ತುತಿ ಇರುವುದರಿಂದ ವಿಷ್ಣ್ವಾದಿಗಳನ್ನು ಶಿವನ ಜೊತೆಯಲ್ಲಿ ಪೂಜಿಸುವುದು ಶ್ರುತಿವಿರುದ್ಧವಾದೀತು. ॥೪೫-೪೭॥

ಯಾವಾಗಲೂ ಶಂಕರಾರ್ಚನೆಯ ಕಾಲದಲ್ಲಿ ಇತರ ದೇವತೆಗಳ ಆಹ್ವಾನವಾಗಲಿ ಅರ್ಚನೆಯಾಗಲಿ ನರಕವನ್ನು ತಂದೀತು. ಈ ವಿಷಯದಲ್ಲಿ ಯಾವ ಸಂಶಯವನ್ನೂ ಹೊಂದಬೇಕಿಲ್ಲ. ಸಾಕ್ಷಾತ್ಪರಶಿವನೇ ವಿಶ್ವದ ಆಕಾರದಲ್ಲಿ ಅಂದರೆ ಪ್ರಪಂಚದ ನಾನಾ ವಸ್ತುರೂಪದಲ್ಲಿ ಕಂಡುಬಂದರೂ, ಶಂಕರನು ಲೋಕಕ್ಕೆ ಮೀರಿದವನು. ತಾನು ಈ ಲೋಕದಲ್ಲಿ ಅಡಗುವವನಲ್ಲ. ಶಿವನೇ ಈ ಪ್ರಪಂಚ. ಪ್ರಪಂಚ ಬೇರೆ ಶಂಕರನು ಬೇರೆ ಎಂಬ ದ್ವೈತ ಭಾವನೆ ವಾಸ್ತವಿಕವಾದುದಲ್ಲ. ॥೪೭-೪೮॥

ಹೀಗಿರುವುದರಿಂದ ಲೋಕಾತೀತ ಶಂಕರನನ್ನು ಶಿವಲಿಂಗದಲ್ಲಿ ತದೇಕ ಧ್ಯಾನದಿಂದ ಆರಾಧಿಸಬೇಕು. ಅದರಿಂದಲೇ ಶಂಕರನು ತೃಪ್ತಿಹೊಂದುವನು.

ಅನ್ಯೇಪಿ ಬಹವೋ ಧರ್ಮಾಶ್ಶೈವಪ್ರೋಕ್ತಾಃ ಪ್ರಸಾದದಾಃ ।
ಸಾಕ್ಷಾತ್ಪ್ರಸಾದಜನಕಂ ಶಿವಲಿಂಗಾರ್ಚನಂ ದ್ವಿಜ ॥೩೦॥

ಲಿಂಗೇರ್ಚಿತೋ ಮಹಾದೇವೋ ದರಿದ್ರಾದ್ಯೈರ್ವಿಶೇಷತಃ ।
ಭಕ್ತಾನಾಂ ಸಕಲಾಭೀಷ್ಟಂ ಪ್ರದದಾತಿ ಮಹೇಶ್ವರಃ ॥೩೧॥

ಅನ್ಯೇಪಿ ಶೈವಧರ್ಮಾ ಯೇ ಬಹ್ವಾಯಾಸಾರ್ಥನಾಶಕಾಃ ।
ಕರೋತು ವಾ ಯಥಾಜೋಷಂ ನೈತತ್ತ್ಯಾಜ್ಯಂ ಕದಾಪಿ ಚ ॥೩೨॥

ಇತ್ಯೇವಂ ಸಮಯಂ ಕೃತ್ವಾ ವರಮಾಪ್ರಾಣಸಂಕ್ಷಯಂ ।
ಪೂಜನೀಯಶ್ಶಿವೋ ಲಿಂಗೇ ಜ್ಞಾನಮುಕ್ತಿಮಭೀಪ್ಸುಭಿಃ ॥೩೩॥

॥ ಸ್ಕಂದ ಉವಾಚ ॥

ಯಃ ಪೂಜಯೇಚ್ಛಶಿಕಲಾವಿಲಸತ್ಸುಮೌಲಿ
ಲಿಂಗಂ ಮಹಾಶಪಥಪೂರ್ವಕಮೇವ ವಿಪ್ರೈಃ ।

---

ಶಿವಪ್ರೋಕ್ತವಾದ ಅನೇಕ ಧರ್ಮಗಳು ಲೋಕದಲ್ಲಿವೆ. ಆದರೆ ಅವು ಸಾಕ್ಷಾತ್ತಾಗಿ ಅನುಗ್ರಹಮಾಡಲಾರವು. ಶಿವಪ್ರೀತಿಯನ್ನುಂಟುಮಾಡಿದ ಮೇಲೆ ಅವು ಅನುಗ್ರಹ ಪ್ರದಗಳೆನಿಸುವುವು. ಶಿವಲಿಂಗಾರ್ಚನೆಯಾದರೋ ಸಾಕ್ಷಾತ್ ಅನುಗ್ರಹಪ್ರದ ವಾಗುವುದು. ॥೨೯-೩೦॥

ಶಿವಲಿಂಗದಲ್ಲಿ ಭಕ್ತಿಯಿಂದ ಪೂಜಿತನಾದ ಶಂಕರನು ತನ್ನ ಭಕ್ತರ ಸಕಲ ಇಷ್ಟಾರ್ಥಗಳನ್ನೂ ಒದಗಿಸಿ ಅವನಿಗಿರುವ ಸಕಲ ದರಿದ್ರವೇ ಮೊದಲಾದ ದುಃಖ ಗಳನ್ನೆಲ್ಲಾ ನಿವಾರಿಸುವನು. ಇನ್ನುಳಿದ ಶಿವಧರ್ಮಗಳೂ ಪುಣ್ಯಪ್ರದಗಳೇ. ಆದರೆ ಅತಿಯಾದ ಆಯಾಸದಿಂದ ಅವು ಫಲಪ್ರದಗಳಾಗುವುವು. ಅವು ಹೇಗೇ ಇರಲಿ, ಅಲ್ಪಾಯಾಸದಿಂದ ಶಿವಾನುಗ್ರಹವನ್ನು ಒದಗಿಸುವ ಶಿವಲಿಂಗಾರಾಧನೆ ಯನ್ನು ಮಾತ್ರ ಪ್ರಾಣವಿರುವ ಪರ್ಯಂತ ಬಿಡಬಾರದು. ಈ ಪ್ರತಿಜ್ಞೆಯಿಂದಲೇ ಭುಕ್ತಿಮುಕ್ತಿಯನ್ನು ಅಪೇಕ್ಷಿಸುವ ಮಾನವರು ಸರ್ವದಾ ಶಿವಲಿಂಗಾರಾಧನೆಯನ್ನು ನಡೆಸಿಕೊಂಡು ಹೋಗುತ್ತಿರಬೇಕು. ॥೩೨-೩೩॥

ಈ ರೀತಿ ವಿಪ್ರರೆನಿಸಿದವರು ಸರ್ವದಾ ಚಂದ್ರಶೇಖರನೆನಿಸಿದ ಶಿವಲಿಂಗವನ್ನು ಶಪಥಪೂರ್ವಕವಾಗಿ ನಡೆಸುವರು. ಮತ್ತು ತಮ್ಮ ಉದ್ದೇಶವೆನಿಸಿದ ಶಿವಲಿಂಗ

ಪ್ರಾಶ್ಯಂ ಜಲಂ ನ ಚ ಫಲಂ ನ ಚ ಭೋಜ್ಯಮನ್ನಂ
ಲಿಂಗಾರ್ಚನೋಜ್ಝಿತಿರಹೋ ನರಕಪ್ರದೈವ ॥೫೪॥

ಕಸ್ಸಂತರೇತ ಭವಮೇತದಸಾರಸಾರಂ ।
ಶಂಭೋಃ ಪದಾಂಬುಜಸಮರ್ಚನತೋ ವಿಹೀನಃ ।
ತ್ಯಕ್ತ್ವಾ ಸುರಾಂತರಮಮುತ್ರ ಮುಚಂದ್ರಮೌಳಿ
ಲಿಂಗಾರ್ಚನೇನ ಸಕಲಂ ಶ್ರಿಯಮಶ್ನುತೇ ಚ ॥೫೫॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಗರುಡಕಶ್ಯಪ ಸಂವಾದೇ
ಲಿಂಗಪೂಜಾಮಹಿಮಾನುವರ್ಣನಂ ನಾಮ ಅಷ್ಟಮೋಧ್ಯಾಯಃ

---

ಪೂಜೆಯನ್ನು ಮುಗಿಸಿದ ಹೊರತು, ಅವರು ನೀರನ್ನಾಗಲಿ, ಫಲವನ್ನಾಗಲಿ ಇತರ ಯಾವ ಭಕ್ಷ್ಯಭೋಜ್ಯವನ್ನೇ ಆಗಲಿ ಭಕ್ಷಿಸುವುದಿಲ್ಲ. ಶಿವಲಿಂಗಾರ್ಚನ ಪರಿತ್ಯಾಗವು ಮಹಾ ನರಕವನ್ನು ಉಂಟುಮಾಡುವುದಲ್ಲವೆ ! ॥೫೪॥

ನಿಜವಾಗಿಯೂ ಸಾರವಿಲ್ಲದಿರುವ ಈ ಅಗಾಧವಾದ ಸಂಸಾರಸಾಗರವನ್ನು ದಾಟಲು ಶಂಕರನ ಪಾದಸೇವೆಯಿಂದಲೇ ಸಾಧ್ಯವಾದೀತು. ಮತ್ತಾವುದರಿಂದ ಈ ಭವದುಃಖಗಳನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಇತರ ದೇವತೆಗಳ ಪೂಜೆಯನ್ನು ದೂರಮಾಡಿ, ಕೇವಲ ಶಿವಲಿಂಗಾರ್ಚನೆಯಿಂದ ಕಾಲಕಳೆಯುವವನು ನಿಜವಾಗಿಯೂ ಸಕಲ ವಿಧವಾದ ಐಶ್ವರ್ಯಗಳನ್ನೂ ಹೊಂದುವನೆಂಬುದರಲ್ಲಿ ಸಂದೇಹವಿಲ್ಲ. ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ಹೇಳಿದನು. ॥೫೫॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಎಂಟನೆಯ ಅಂಶದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ನವಮೋಽಧ್ಯಾಯಃ

॥ ಶ್ರೀಗರುಡ ಉವಾಚ ॥

ಕಿಂ ವಾ ಪ್ರಸಾದಜನಕಂ ಮಹಾದೇವಸ್ಯ ವೈ ಮುನೇ ।
ತಚ್ಚರಿಷ್ಯಾಮಿ ಭಕ್ತ್ಯೈವ ತದ್ವದ ತ್ವಂ ಗುರೋ ಮಯಿ ॥೧॥

॥ ಶ್ರೀ ಸ್ಕಂದ ಉವಾಚ ॥

ಗರುಡಸ್ಯ ವಚಶ್ಶ್ರುತ್ವಾ ಕಶ್ಯಪಃ ಪ್ರಾಹ ತಂ ಪುನಃ ।
ವಿನತಾತನಯಂ ದೃಷ್ಟ್ವಾ ವಿನತಂ ನಿಯತೋ ಮುನಿಃ ॥೨॥

॥ ಕಶ್ಯಪ ಉವಾಚ ॥

ಶಿವಪ್ರಸಾದಜನಕಂ ಭಸ್ಮನೋ ಮಹಿಮಾಂವದತ್ ॥೩॥

---

## ಒಂಬತ್ತನೆಯ ಅಧ್ಯಾಯ

ವಿನತಾಪುತ್ರವಾದ ಗರುಡನು ಮತ್ತೆ ತಂದೆಯಾದ ಕಾಶ್ಯಪಮಹಾಮುನಿಯನ್ನು ಕುರಿತು, "ಸದ್ಗುರುವೇ, ಮಹಾದೇವನಿಗೆ ಅತ್ಯಂತ ಪ್ರೀತಿಯನ್ನುಂಟುಮಾಡುವ ಕರ್ಮವಾವುದು? ಏನನ್ನು ಆಚರಿಸಿದರೆ ನಮಗೆ ಶಿವಾನುಗ್ರಹವು ಲಭಿಸುವುದು? ಅದನ್ನು ದಯೆಯಿಂದ ನನಗೆ ತಿಳಿಸು" ಎಂದು ಪ್ರಾರ್ಥಿಸಲು, ಆಗ ಕಾಶ್ಯಪಮಹಾಮುನಿಯು ಗರುಡನ ಮಾತನ್ನು ಕೇಳಿ, ಅವನ ವಿನಯಾದಿ ಸದ್ಗುಣಗಳಿಗೆ ಮೆಚ್ಚಿ ಹೀಗೆಂದನು. ॥೧-೩॥

'ಅಯ್ಯಾ ಆಸ್ತಿಕಪುತ್ರನೇ, ಶಿವಪ್ರಸಾದವನ್ನು ಒದಗಿಸತಕ್ಕುದು ಭಸ್ಮವು.

ಭಸ್ಮಾಭ್ಯಕ್ತತನುರ್ನಿತ್ಯಂ ಪೂಜಯೇದಿಂದುಶೇಖರಂ ।
ಭಸ್ಮಧಾರಣಹೀನಾನಾಂ ಪ್ರಸಾದೋ ನೈವ ಶಾಂಭವ ॥೪॥

ಭವೇಜ್ಜನ್ಮಶತೇಷ್ವೇವ ದ್ವಿಜಸ್ಯಾಪಿ ವಿಶೇಷತಃ ।
ಭಸ್ಮಧಾರಣಹೀನಾನಾಂ ಜ್ಞಾನಂ ನೈವೋಪಜಾಯತೇ ॥೫॥

ಜ್ಞಾನಾಂಗತ್ವಮಿದಂ ಭಸ್ಮ ಸೃಷ್ಟಮೀಶೇನ ಮುಕ್ತಿದಂ ।
ಭಸ್ಮ ಭಸ್ಮೇತಿ ಯೋ ಬ್ರೂಯಾತ್ಸತು ಪಾಪೈರ್ವಿಮುಚ್ಯತೇ ॥೬॥

ಭಸ್ಮನಾ ಪಾದಪರ್ಯಂತಂ ಯಃ ಸ್ನಾತಿ ನಿಯತಂ ಸದಾ ।
ಸ ತು ಸಂತರತೇ ಘೋರಂ ಸಂಸಾರಂ ದುಃಖದಂ ನರಃ ॥೭॥

ದ್ವಿಜೋ ವರ್ಣೀ ಗೃಹಸ್ಥೋ ವಾ ಯತಿರ್ವಾಪಿ ವನಾಶ್ರಮೀ ।
ತ್ರಿಕಾಲಂ ಭಸ್ಮನಿರತೋ ದೇವದೇವಪ್ರಸಾದಭಾಕ್ ॥೮॥

---

ಅದರ ಮಹಿಮೆಯನ್ನು ಹೇಳುವೆನು ಕೇಳು.' ನಿತ್ಯವೂ ಶಿವಾರಾಧನೆಮಾಡುವವನು ಭಸ್ಮದಿಂದ ದೇಹವನ್ನು ಲೇಪಿಸಿಕೊಂಡು ಪೂಜಿಸಬೇಕು. ಭಸ್ಮಧಾರಣೆಮಾಡದವರಿಗೆ ಶಿವಪ್ರಸಾದವು ನಿಜವಾಗಿಯೂ ಲಭಿಸಲಾರದು. ॥೩-೪॥

ಭಸ್ಮವನ್ನು ಧರಿಸಿಕೊಳ್ಳದವರಿಗೂ, ಅದರಲ್ಲಿಯೂ ಭಸ್ಮರಹಿತರಾದ ದ್ವಿಜರಿಗಂತೂ ನೂರಾರು ಜನ್ಮಗಳು ಕಳೆದರೂ ಜ್ಞಾನವು ಉದಯಿಸಲಾರದು. ಭಸ್ಮವು ಜ್ಞಾನಸಾಧನವನ್ನಾಗಿ ಕಲ್ಪಿಸಿಯೇ ಶಂಕರನು ಭಸ್ಮವನ್ನು ಸೃಷ್ಟಿಸಿರುವನು. ಯಾರು ಕೇವಲ ಬಾಯಿಯಿಂದಲೇ ಭಸ್ಮಶಬ್ದವನ್ನುಚ್ಚರಿಸುವರೋ ಅವರು ಸಕಲ ಪಾಪಗಳಿಂದಲೂ ಮುಕ್ತರೆನಿಸುವರು. ॥೫-೬॥

ತಲೆಯಿಂದ ಕಾಲಿನವರೆಗೂ ಯಾವನು ಶರೀರವನ್ನು ಭಸ್ಮದಿಂದ ಲೇಪಿಸಿಕೊಳ್ಳುವನೋ ಅವನು ಬಹು ದುಃಖಪ್ರದವಾದ ಸಂಸಾರದ ದುಃಖದಿಂದ ಪಾರಾಗುವನು. ದ್ವಿಜರಲ್ಲಿ ಬ್ರಹ್ಮಚಾರಿ, ಗೃಹಸ್ಥ, ಯತಿ, ವಾನಪ್ರಸ್ಥಾಶ್ರಮಿ ಇವರು ಯಾರೇ ಆದರೂ, ತ್ರಿಕಾಲದಲ್ಲಿಯೂ ಭಸ್ಮಧಾರಣೆಮಾಡಿಕೊಳ್ಳುತ್ತಾ ದೇವದೇವನಾದ ಶಂಕರನ ಅನುಗ್ರಹವನ್ನು ಸಂಪಾದಿಸಿಕೊಳ್ಳುವರು. ॥೭-೮॥

ಭಸ್ಮಸ್ನಾನವಿಹೀನಾತ್ಮಾ ಕೃತ್ವಾ ಕರ್ಮಾಣ್ಯಪಿ ದ್ವಿಜಃ ।
ನೈವ ತತ್ಫಲಮಾಪ್ನೋತಿ ಕುರ್ವನ್ ಯತ್ಕಿಂಚಿದಪ್ಯನ್ಯೆ ॥೯॥

ಪ್ರತ್ಯವೈತಿ ದ್ವಿಜೋ ವಾಪಿ ಭವತ್ಯೇವ ನ ಸಂಶಯಃ ।
ಭಸ್ಮಪ್ರಭಾವೋ ವೇದಾಂತೈಃ ಸರ್ವದಾ ಪ್ರತಿಪಾದ್ಯತೇ ॥೧೦॥

ಅಥರ್ವಶಿರಸಿ ಸ್ವೈರಂ ಭಸ್ಮಪ್ರೋಕ್ತಂ ಹಿ ಪಾವನಂ ।
ಶಿರೋಧೃತಮಿದಂ ಭಸ್ಮ ಸ್ನಾನಮಾಪಾದಮಸ್ತಕಂ ॥೧೧॥

ಅಗ್ನಿರಿತ್ಯಾದಿಭಿರ್ಮಂತ್ರೈಃ ಸ್ನಾತ್ವಾ ಪಾಪೈರ್ವಿಮುಚ್ಯತೇ ।
ಯೋ ವಾ ಕೋಽಪ್ಯಂತ್ಯಜೋ ವಾಪಿ ನಿತ್ಯಂ ಭಸ್ಮತನುರ್ಭವೇತ್ ॥೧೨॥

ಸ ಮಹೇಶಪ್ರಸಾದಸ್ಯ ಪಾತ್ರಂ ಭವತಿ ನಿಶ್ಚಿತಂ ।
ದ್ವಿಜೋ ವಾಪ್ಯುತ್ತಮಾಚಾರೋ ಭಸ್ಮಸ್ನಾನವಿವರ್ಜಿತಃ ॥೧೩॥

ತಸ್ಯೋತ್ಪತ್ತೌ ಚ ಸಾಂಕರ್ಯಮನುಮೇಯಂ ವಿಪಶ್ಚಿತಾ ।
ಯೋ ಭಸ್ಮಧಾರಿಣಂ ದೃಷ್ಟ್ವಾ ನಾಭಿನಂದತಿ ದುರ್ಮತಿಃ ॥೧೪॥

---

ದ್ವಿಜನಾದವನು ಭಸ್ಮಧಾರಣೆಯಿಲ್ಲದೆ ಯಾವ ಶ್ರೌತಾದಿ ಕರ್ಮಗಳನ್ನಾಚರಿಸಿದರೂ ಅವನಿಗೆ ಅದರ ಫಲವು ದೊರೆಯಲಾರದು. ಕೇವಲ ಭಸ್ಮಧಾರಣೆಯಿಂದಲೇ ಸಕಲ ಕರ್ಮಫಲವು ದ್ವಿಜನಿಗೆ ದೊರೆಯುವುದರಲ್ಲಿ ಸಂಶಯವಿಲ್ಲ. ಭಸ್ಮಪ್ರಭಾವವು ಸಕಲ ಉಪನಿಷತ್ತುಗಳಲ್ಲಿಯೂ ಪ್ರತಿಪಾದಿತವಾಗಿದೆ. ॥೯-೧೦॥

ಅಥರ್ವಶೀರ್ಷೋಪನಿಷತ್ತಿನಲ್ಲಿ ಭಸ್ಮದ ಪವಿತ್ರತೆಯು ವಿಸ್ತಾರವಾಗಿ ವರ್ಣಿತವಾಗಿದೆ. 'ಅಗ್ನಿರಿತಿಭಸ್ಮ' ಮುಂತಾದ ಉಪನಿಷದ್ಭಾಗಪಠನೆಯಿಂದ ಭಸ್ಮವನ್ನು ಶಿರಸ್ಸಿನಲ್ಲಿಟ್ಟುಕೊಂಡರೆ ಆಪಾದಮಸ್ತಕವಾಗಿ ಭಸ್ಮಸ್ನಾನಮಾಡಿದಂತಾಗುವುದು. ಜಾತಿಯಿಂದ ಅಂತ್ಯಜನೇ ಆದರೂ ಭಸ್ಮಲಿಪ್ತಗಾತ್ರನಾದವನು ಮಹೇಶ್ವರನ ಕೃಪಾಕಟಾಕ್ಷಕ್ಕೆ ಪಾತ್ರನಾಗುವನು. ॥೧೧-೧೨॥

ದ್ವಿಜರ ವರ್ಗದಲ್ಲಿ ಸೇರಿರಲಿ, ಅಥವಾ ಮತ್ತಾವ ಉತ್ತಮ ಜಾತಿಯವನೇ ಆಗಿರಲಿ, ಅವನು ಭಸ್ಮಸ್ನಾನದಿಂದ ಶುದ್ಧನಾಗದಿದ್ದರೆ ಮತ್ತು ಭಸ್ಮಧಾರಿಯನ್ನು ನೋಡಿ ಸಂತೋಷಪಡದೆ ಅವನ ವಿಷಯದಲ್ಲಿ ಉದಾಸೀನವನ್ನು ತೋರ್ಪಡಿಸುವುದಾದರೆ, ಅಂತಹವನ ಜನ್ಮವು ಶುದ್ಧವಾದುದಲ್ಲವೆಂದೂ, ಅವನ ಉತ್ಪತ್ತಿಯ

ತಸ್ಯೋತ್ಪತ್ತೌ ಚ ಸಾಂಕರ್ಯಮನುಮೇಯಂ ವಿಪಶ್ಚಿತಾ ।
ಯತಿರ್ವೇದಾಂತನಿಷ್ಠೋಽಪಿ ಭಸ್ಮಧಾರಣವರ್ಜಿತಃ ॥೧೫॥

ಪತನ್ನಾ ಪಾತಯನ್ವಾಪಿ ನೈವ ತಜ್ಜ್ಞಾನಮಾಪ್ನುಯಾತ್ ।
ಜೀವಾತ್ಮೈಕ್ಯಂ ಸುವಿಜ್ಞಾನಂ ಭಸ್ಮಸ್ನಾನೇನ ಜಾಯತೇ ॥೧೬॥

ಭಸ್ಮಾಭ್ಯಕ್ತತನುರ್ನಿತ್ಯಂ ತ್ರಿಪುಂಡ್ರಪರಿಚಿಹ್ನಿತಃ ।
ಸ ತಪಸ್ವೀ ಸ ದಾನಾರ್ಹೋ ಸರ್ವಕರ್ಮಾರ್ಹಕೋ ಭವೇತ್ ॥೧೭॥

ತ್ರಿನೇತ್ರದಯಯಾ ಪಾತ್ರಂ ಪವಿತ್ರೋ ಭವತಿ ಧ್ರುವಂ ।
ಮಿತ್ರಭೂತಃ ಸುರಾಣಾಂ ಚ ಭವತ್ಯೇವ ನ ಸಂಶಯಃ ॥೧೮॥

ಭಸ್ಮಧಾರಣಹೀನೋ ಯಃ ಶಿವಲಿಂಗಂ ಸಮರ್ಚಯೇತ್ ।
ನ ತಸ್ಯ ಪೂಜಾಂ ಗೃಹ್ಣಾತಿ ಮಹಾದೇವಃ ಪರಾಙ್ಮುಖಃ ॥೧೯॥

ಭವಿಷ್ಯತಿ ನ ಸಂದೇಹಃ ಪ್ರತ್ಯುತ ಪ್ರತ್ಯವೈತಿ ಚ ।
ಸರ್ವದಾ ಸರ್ವಕಾಲೇಷು ಭಸ್ಮಧೃಕ್ಪಾವನಃ ಶುಚಿಃ ॥೨೦॥

---

ವಿಷಯದಲ್ಲಿ ಅನುಮಾನವಿರುವುದೆಂದು ವಿವೇಕಿಗಳು ಭಾವಿಸಬೇಕು. ಸಂನ್ಯಾಸಿಯಾದವನು ಎಷ್ಟೇ ಉಪನಿಷತ್ಸಾರವನ್ನು ಗ್ರಹಿಸಿದ್ದರೂ ಆತನು ಭಸ್ಮಧಾರಿಯಾಗದಿದ್ದರೆ ಆತನ ವ್ಯಾಸಂಗವೂ ಆತನ ಬೋಧನೆಯೂ ಆವಸಿಗಾಗಲಿ ಅವನ ಶಿಷ್ಯರಿಗಾಗಲಿ ಜ್ಞಾನಪ್ರದವಾಗಲಾರದು. ॥೧೩-೧೪-೧೫॥

ಮತ್ತು ಸನ್ಯಾಸಿಗಳಿಗೆ ಜೀವಾತ್ಮೈಕ್ಯರೂಪವಾದ ಅದ್ವೈತಭಾವವು ನಿಜವಾಗಿ ಮೂಡಬೇಕಾದರೆ ಭಸ್ಮಸ್ನಾನದಿಂದಲೇ ಎಂದು ತಿಳಿಯಬೇಕು. ಭಸ್ಮಸ್ನಾನದಿಂದ ದೇಹವನ್ನು ಶುದ್ಧಿಗೊಳಿಸಿ, ಭಸ್ಮತ್ರಿಪುಂಡ್ರದಿಂದ ಅಲಂಕೃತನಾದವನೇ, ತಪಸ್ಸಿಗೂ, ದಾನಪ್ರತಿಗ್ರಹಕ್ಕೂ, ಸಕಲ ಕರ್ಮಾಚರಣೆಗೂ ಅರ್ಹನೆನಿಸುವನು. ॥೧೬-೧೭॥

ಅಲ್ಲದೆ ತ್ರಿನಯನನೆನಿಸಿದ ಪರಶಿವನ ಅನುಗ್ರಹಕ್ಕೂ ಪಾತ್ರನಾಗಿ ಸಕಲ ದೇವತೆಗಳಿಗೂ ಮಿತ್ರನೆನಿಸುವನು. ಭಸ್ಮಧಾರಣೆಯಿಲ್ಲದೆ ಮಾಡಿದ ಶಿವಾರಾಧನೆಯನ್ನು ಶಿವನು ಅಸಮಾಧಾನದಿಂದ ತಿರಸ್ಕರಿಸಿಬಿಡುವನು. ಅಷ್ಟೇ ಅಲ್ಲದೆ ವಿರುದ್ಧ

ಯಃ ಸ್ನಾತಿ ಸ್ನಾನದಶಕೈರ್ವಿದ್ಯಾಬುದ್ಧ್ಯಾಪಿ ಮಾನವಃ ।
ಭಸ್ಮಸ್ನಾನಾದ್ವಿನಿರ್ಮುಕ್ತಃ ಸ ಶುಚಿಸ್ಸರ್ವಕರ್ಮಣಿ ॥೨೧॥

ಪವಿತ್ರಕರಮೇತದ್ವೈ ಭಸ್ಮೇವ ಶ್ರುತಿಚೋದಿತಂ ।
ಶ್ರೌತಾನಲೋದ್ಭವಂ ಭಸ್ಮ ಮಹಾಪಾಪನಿವರ್ತಕಂ ॥೨೨॥

ಮುಕ್ತಿದಂ ಜ್ಞಾನದಂ ಪುಂಸಾಂ ಅಗ್ನಿರಿತ್ಯಾದಿಮಂತ್ರಿತಂ ।
ಭಸ್ಮಧೃತ್ವೈವ ಸಂಧ್ಯಾಯಾಮಧಿಕಾರೀ ನ ಸಂಶಯಃ ॥೨೩॥

ಅಧೃತ್ವಾ ಯದಿ ತದ್ಭಸ್ಮ ಸಂಧ್ಯಾಂ ಕುರ್ಯಾದ್ದ್ವಿಜಾಧಮಃ ।
ಭಸ್ಮ ಧೃತ್ವಾ ಪುನಸ್ಸಂಧ್ಯಾಮಾಚರೇತ್ಸಂಧ್ಯಯೋರ್ದ್ವಯೋಃ ॥೨೪॥

ಶ್ರಾದ್ಧಂ ಯಜ್ಞಂ ತಥಾ ಹೋಮೋ ವಿವಾಹೋಪನಯಾದಿಕಂ ।
ದೇವತಾಭ್ಯರ್ಚನಂ ನಿತ್ಯಂ ಕಾಮ್ಯಂ ಸ್ವಾಧ್ಯಾಯತರ್ಪಣಂ ॥೨೫॥

---

ವಾದ ಫಲವನ್ನೂ ಕೊಡಬಲ್ಲನು. ಆದ್ದರಿಂದ ಯಾವನು ಸದಾ ಭಸ್ಮಧಾರಿಯಾಗಿರುವನೋ ಅವನೇ ಮಹಾತ್ಮನು ಮತ್ತು ಪವಿತ್ರನು. ॥೧೮-೧೯-೨೦॥

ಮೃತ್ತಿಕಾಸ್ನಾನವೇ ಮೊದಲಾದ ದಶವಿಧಸ್ನಾನಗಳಿಂದ ಶುದ್ಧನಾದರೂ ಭಸ್ಮಸ್ನಾನವಿಲ್ಲದಿದ್ದರೆ ಅವನು ಶುಚಿಯಾಗಲಾರನು. ಒಟ್ಟಿನಲ್ಲಿ ಭಸ್ಮವೆಂಬುದು ಪವಿತ್ರತರವಾದದ್ದೆಂದು ಶ್ರುತಿಯು ಪ್ರತಿಪಾದಿಸುತ್ತಿದೆ. ಅದರಲ್ಲಿಯೂ ಶ್ರೌತಾಗ್ನಿಯಿಂದ ನಿಷ್ಪನ್ನವಾದ ಭಸ್ಮವು ಮಹಾಪಾಪಪರಿಹಾರಕವಾದದ್ದು. ॥೨೧-೨೨॥

ಅಗ್ನಿರಿತಿಭಸ್ಮ, ಮುಂತಾದ ಮಂತ್ರದಿಂದ ಪರಿಶುದ್ಧವಾದ ಭಸ್ಮವು ಜ್ಞಾನ ಮತ್ತು ಮುಕ್ತಿಪ್ರದವಾದದ್ದು. ಅಂತಹ ಭಸ್ಮವನ್ನು ಧರಿಸಿಕೊಳ್ಳದಿದ್ದವನು ಸಂಧ್ಯಾವಂದನೆಗೂ ಅಧಿಕಾರಿಯಾಗಲಾರನು. ಒಂದುವೇಳೆ ದ್ವಿಜನಾದವನು ಮರೆತು ಭಸ್ಮಧಾರಣೆಮಾಡದೆ ಸಂಧ್ಯಾವಂದನೆ ಮಾಡಿದರೆ, ಮತ್ತೆ ಭಸ್ಮವನ್ನು ಧರಿಸಿಕೊಂಡು ಪುನಃ ಸಂಧ್ಯಾವಂದನೆಯನ್ನಾಚರಿಸಬೇಕು. ಹೀಗೆ ಎರಡು ಸಂಧ್ಯಾಕಾಲಗಳಲ್ಲಿಯೂ ಭಸ್ಮಧಾರಣೆಯಿಂದಲೇ ಸಂಧ್ಯಾವಂದನೆಯನ್ನು ನಡೆಸಬೇಕು. ॥೨೩-೨೪॥

ಶ್ರಾದ್ಧಕರ್ಮವೇ ಮೊದಲಾದ ಪೈತೃಕಕರ್ಮಗಳು, ಯಾಗ, ಹೋಮ, ವಿವಾಹ, ಉಪನಯನ, ದೇವತಾರಾಧನೆ, ಇನ್ನೂ ಕಾಮ್ಯವ್ರತಗಳು, ವೇದಾಧ್ಯಯನ, ತರ್ಪಣ ಮುಂತಾದ ಸಕಲ ಕರ್ಮಗಳನ್ನು ಆಚರಿಸಬೇಕಾದರೂ ಭಸ್ಮ

ಸರ್ವಂ ಭಸ್ಮಧೃಗೇವಾಶು ಸರ್ವೇಷಾಂ ಫಲಮಶ್ನುತೇ ।
ಸ ತಪಸ್ವೀ ಸದಾ ಪಾತ್ರಂ ಸರ್ವಾನ್ ಸಂತಾರಯೇನ್ನರಾನ್ ॥೨೬॥

ಭಸ್ಮಧಾರಣಮಾತ್ರೇಣ ದುಃಖಂ ತರತಿ ಮಾನವಃ ।
ಅಶುಚಿರ್ಭಿನ್ನಮರ್ಯಾದೋ ಭಸ್ಮಧೃಕ್ಪಾವನೋ ಭವೇತ್ ॥೨೭॥

ಅಭಕ್ಷ್ಯಭಕ್ಷಣಂ ಕೃತ್ವಾ ಗತ್ವಾಽಗಮ್ಯಾಮಪಿ ದ್ವಿಜಃ ।
ಭಸ್ಮನಃ ಸ್ನಾನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥೨೮॥

ವರಾಹಂ ಮೂಷಿಕಂ ಬಾಲಂ ಉನ್ಮತ್ತಂ ಶ್ವಾನರಾಸಭೌ ।
ಸ್ಪೃಷ್ಟ್ವಾ ದೃಷ್ಟ್ವಾ ದ್ವಿಜೋ ನಿತ್ಯಂ ಭಸ್ಮಸ್ನಾನಂ ಸಮಾಚರೇತ್ ॥೨೯॥

ಉದಕೀಂ ಸೂತಕೀಂ ದೃಷ್ಟ್ವಾ ಯಃ ಸ್ನಾತಿ ಶಿವಭಸ್ಮನಾ ।
ಭಸ್ಮಸ್ನಾನೇನ ಪಾಪಾನಾಂ ರಾಶಿರ್ವೈ ಭಸ್ಮಸಾದ್ಭವೇತ್ ॥೩೦॥

---

ಧಾರಿಯಾಗಿಯೇ ಇರಬೇಕು. ಹಾಗೆ ಭಸ್ಮಧಾರಿಯಾದವನೇ ಸತ್ಪಾತ್ರನು. ಅವನೇ ಸರ್ವರನ್ನೂ ಉದ್ಧರಿಸುವವನು. ॥೨೫-೨೬॥

ಮಾನವನು ಕೇವಲ ಭಸ್ಮಧಾರಣೆಯಿಂದಲೇ ದುಃಖನಿರ್ಮುಕ್ತನಾಗುವನು. ಅಶುಚಿಯಾಗಿ, ಮರ್ಯಾದೆಯನ್ನು ಮೀರಿದವನಾದರೂ, ಭಸ್ಮಧಾರಣೆಯಿಂದ ಪರಿಶುದ್ಧನೆನಿಸುವನು. ತಿನ್ನಬಾರದ ವಸ್ತುವನ್ನು ತಿಂದವರೂ, ಗಮಿಸಲಾಗದ ಸ್ತ್ರೀಯಲ್ಲಿ ರಮಿಸಿದವನೂ, ಭಸ್ಮಸ್ನಾನಮಾತ್ರದಿಂದ ಪರಿಶುದ್ಧನೆನಿಸುವನು. ॥೨೭-೨೮॥

ಹಂದಿ, ಇಲಿ, ಹುಚ್ಚುಹುಡುಗ, ನಾಯಿ, ಕತ್ತೆ ಮುಂತಾದುವುಗಳ ಸ್ಪರ್ಶನದಿಂದಲೂ, ದರ್ಶನದಿಂದಲೂ ಲಭಿಸಿದ ಅಶುಚಿತ್ವವನ್ನು ಭಸ್ಮಸ್ನಾನದಿಂದ ಕಳೆದುಕೊಳ್ಳಬಹುದು. ಹಾಗೆಯೇ ರಜಸ್ವಲೆಯಾದವಳು, ಪ್ರಸುವಿಸಿದವಳು, ಇವರ ಸ್ಪರ್ಶನದರ್ಶನಗಳಿಂದ ಲಭಿಸಿದ ಪಾಪವನ್ನು ಶಿವಭಸ್ಮಸ್ನಾನದಿಂದ ಕಳೆದುಕೊಳ್ಳಬಹುದು. ಒಟ್ಟಿನಲ್ಲಿ ಪಾಪರಾಶಿಯು ಭಸ್ಮದಿಂದ ಭಸ್ಮವಾಗಿ ಹೋಗುವುದು. ॥೨೯-೩೦॥

ಭಸ್ಮಧೃಕ್ಸರ್ವದಾ ಪೂಜ್ಯೋ ಯಥಾ ಶಿವಮಯೋ ಹಿ ಸಃ ।
ಸಂಧ್ಯಯೋರಥ ಮಧ್ಯಾಹ್ನೇ ನಿಶೀಥೇ ಭಸ್ಮದೃಗ್ಭವೇತ್ ॥೩೧॥

ಸಾಚಾರೋಽಪಿ ದುರಾಚಾರೋ ಭಸ್ಮಧೃಕ್ಪಾವನೋ ಭವೇತ್ ।
ಭಸ್ಮತ್ರಿಪುಂಡ್ರಸಹಿತೋ ನಿತ್ಯಮರ್ಚಯೀತ ಶಂಕರಂ ॥೩೨॥

ತೇನ ದತ್ತಂ ಜಲಂ ಪುತ್ರ ಸಾಕ್ಷಾದ್ಗೃಹ್ಣಾತಿ ಶಂಕರಃ ।
ಹವ್ಯಂ ಗೃಹ್ಣಂತಿ ಚ ಸುರಾ ಕವ್ಯಂ ಪಿತೃಗಣಾಸ್ತಥಾ ॥೩೩॥

ಭಸ್ಮಧಾರಣಮಾತ್ರೇಣ ಶಿವಸ್ತಸ್ಮೈ ಪ್ರಸೀದತಿ ।
ಪ್ರಸಾದಃ ಶಾಂಕರೋ ಯಸ್ಯ ಮುಕ್ತಿಸ್ತಸ್ಯಕರೇ ಸ್ಥಿತಾ ॥೩೪॥

ದಾನಂ ಯದ್ದೀಯತೇ ದಾತ್ರಾ ಯೋ ಗೃಹ್ಣಾತ್ಯಪಿ ವೈ ದ್ವಿಜಃ ।
ಭಸ್ಮಧಾರಣಮಾತ್ರೇಣ ಉಭಯೋರ್ವರ್ಧಿತಂ ಫಲಂ ॥೩೫॥

ಪ್ರಾತಸ್ತ್ಯಜತಿ ಯೋ ವಿಪ್ರೋ ಭಸ್ಮನಾಪಾದಮಸ್ತಕಂ ।
ತ್ರಿಪುಂಡ್ರಧೃಕ್ಸ ಮಂತ್ರೈಶ್ಚ ಸಪ್ತಭಿರ್ನಿಶಿ ಪಾತಕೈಃ ॥೩೬॥

---

ಭಸ್ಮಧಾರಿಯು ಸರ್ವದಾ ಪೂಜ್ಯನಾಗುವನು. ಏಕೆಂದರೆ ಆತನು ಶಿವಸ್ವರೂಪಿಯೇ ಆಗುವನು. ಎರಡು ಸಂಧ್ಯಾಕಾಲದಲ್ಲಿಯೂ, ಮಧ್ಯಾಹ್ನ ಮತ್ತು ಮಧ್ಯರಾತ್ರಿಗಳಲ್ಲಿಯೂ ಆತನು ಭಸ್ಮಧಾರಿಯಾಗುವನು. ಭಸ್ಮಧಾರಿಯಾದವನು ಆಚಾರವಿಶಿಷ್ಟನಾದರೂ, ದುರಾಚಾರನಾದರೂ ಪವಿತ್ರನೆನಿಸುವನು. ಶಂಕರನನ್ನು ಪೂಜಿಸುವವರು ನಿತ್ಯವೂ ಭಸ್ಮತ್ರಿಪುಂಡ್ರವನ್ನು ಧರಿಸಿಕೊಂಡಿರಲೇಬೇಕು. ॥೩೧-೩೨॥

ವತ್ಸ ಗರುಡನೇ, ಭಸ್ಮಧಾರಿಯಾದವನಿಂದ ಕೊಡಲ್ಪಟ್ಟ ನೀರನ್ನು ಸಹ ಶಂಕರನು ಪ್ರೀತಿಯಿಂದ ತಾನೇ ಸ್ವೀಕರಿಸುವನು. ಇದೇ ರೀತಿ ಭಸ್ಮಧಾರಣಾನಂತರ ಕೊಡಲ್ಪಟ್ಟ ಹವಿಸ್ಸನ್ನು ದೇವತೆಗಳೂ, ಕವ್ಯವನ್ನು ಪಿತೃಗಳೂ, ತಾವೇ ಸ್ವೀಕರಿಸುವರು. ಭಸ್ಮವನ್ನು ಬಳಿದುಕೊಂಡಿರುವವರನ್ನು ನೋಡಿದರೆ ಶಂಕರನು ಪ್ರಸನ್ನನಾಗುವನು. ಹಾಗೆ ಶಿವಪ್ರಸನ್ನತೆಯನ್ನು ಪಡೆಯುವುದರಿಂದ ಮುಕ್ತಿಯು ಕರಗತವಾದಂತೆಯೇ ಸರಿ. ॥೩೩-೩೪॥

ದಾನಕೊಡುವವನು, ದಾನವನ್ನು ಪ್ರತಿಗ್ರಹಿಸುವವನು ಇವರಿಬ್ಬರೂ ಭಸ್ಮಧಾರಿಗಳಾಗಿದ್ದರೆ ಅವರಿಬ್ಬರ ಪುಣ್ಯವೂ ಅಭಿವೃದ್ಧಿಹೊಂದುವುದು. ಯಾವನು ಪ್ರಾತಃ

ತ್ರಿಯಾಯುಷಂ ತ್ರಿಪುಂಡ್ರೋಂಕಃ ರಾತ್ರಿಪಾಪಾದ್ವ್ಯಪೋಹತಿ ।
ಮಧ್ಯಾಹ್ನೇಽಪಿ ತಥಾ ಪ್ರಾಪ್ತಪಾತಕೈಃ ಪ್ರವಿಮುಚ್ಯತೇ ॥೩೭॥

ಸಾಯಂಕಾಲೇ ಭಸ್ಮಧಾರೀ ಅಪರಾಹ್ಣಾದಘಾತ್ಸದಾ ।
ಮುಕ್ತೋ ಭವತಿ ಗೌರೀಶಪ್ರಿಯಕೃತ್ಸ ಭವಿಷ್ಯತಿ ॥೩೮॥

ಭಸ್ಮಾಭ್ಯಕ್ತತನುರ್ಭವೇದಥ ಮಹಾರುದ್ರಾಕ್ಷಮಾಲಾಧರೋ
ರುದ್ರಾಧ್ಯಾಯಜಪಾದರಃ ಶಿವಮಹಾಪಂಚಾಕ್ಷರಂ ಸಾದರಃ ।
ಶ್ರೀಮತ್ತ್ರ್ಯಂಬಕಪಾದಪಂಕಜವರೇ ಧ್ಯಾಯನ್ವಿಮುಕ್ತೋ ಭವೇತ್
ಪಾಪೌಘಾದ್ಭವಸಾಗರಾದ್ಧರ ಮಹಾದೇವಾಶ್ರಯಾದ್ಭಾವತಃ ॥೩೯॥

ಲಿಂಗಂ ಶಾಂಗಮಪಾರಬಿಲ್ವಜದಲೈ ರಕ್ತಾಂಬುಜೈರರ್ಚಯನ್
ದುರ್ಭಿಕ್ಷಪ್ರಭವೇ ಮಹಾಘಗಣನಾತೂಲಾನಲೋ ವೈ ಭವೇತ್ ।

---

ಕಾಲ ಎದ್ದೊಡನೆಯೇ ಭಸ್ಮಸ್ನಾನಮಾಡಿ ಮಂತ್ರಪೂರ್ವಕವಾಗಿ ಭಸ್ಮತ್ರಿಪುಂಡ್ರವನ್ನು ಧರಿಸಿಕೊಳ್ಳುವನೋ, ಅವನು ಏಳುರಾತ್ರಿಯಿಂದ ಸಂಪಾದಿಸಿದ್ದ ಪಾಪರಾಶಿಯನ್ನೆಲ್ಲಾ ಸುಲಭವಾಗಿ ಕಳೆದುಕೊಳ್ಳುವನು. ॥೩೫-೩೬॥

ತ್ರ್ಯಾಯುಷಮಿತ್ಯಾದಿ ಮಂತ್ರಗಳಿಂದ ಭಸ್ಮತ್ರಿಪುಂಡ್ರವನ್ನು ಧರಿಸಿಕೊಂಡವನು ರಾತ್ರಿ ಪ್ರಾಪ್ತವಾದ ಪಾಪದಿಂದಲೂ, ಸಾಯಂಕಾಲದಲ್ಲಿ ಭಸ್ಮವನ್ನು ಧರಿಸಿಕೊಂಡವನು, ಮಧ್ಯಾಹ್ನ ಮತ್ತು ಅಪರಾಹ್ಣಗತವಾದ ಪಾಪಗಳಿಂದಲೂ ಮುಕ್ತನಾಗುವನು. ಹಾಗೆ ಪಾಪನಿರ್ಮುಕ್ತನಾಗಿ ಸದಾಶಿವಪ್ರಿಯನೆನಿಸುವನು. ॥೩೭-೩೮॥

ಭಸ್ಮಲಿಪ್ತಗಾತ್ರನೂ, ರುದ್ರಾಕ್ಷಿಮಾಲೆಗಳಿಂದ ಅಲಂಕೃತನಾದವನೂ, ರುದ್ರಾಧ್ಯಾಯ, ಶಿವಪಂಚಾಕ್ಷರ ಇವುಗಳನ್ನು ಜಪಿಸುವುದರಲ್ಲಿ ಆಸಕ್ತನಾದವನೂ, ಶಂಕರನ ಪಾದಪದ್ಮಧ್ಯಾನದಲ್ಲಿಯೇ ಸದಾ ಕಾಲಕಳೆಯುವವನೂ, ಪಾಪರಾಶಿಯಾಗಿರುವ ಸಂಸಾರಸಾಗರವನ್ನು ದಾಟಿ ಪರಶಿವನ ಸಾನ್ನಿಧ್ಯವನ್ನು ಪಡೆದು ಹಾಗೆಯೇ ಶಿವಸ್ವರೂಪಿಯಾಗಿ ಮುಕ್ತನೆನಿಸುವನು. ॥೩೯॥

ಶಿವಲಿಂಗವನ್ನು ಅತಿಶಯವಾದ ಬಿಲ್ವದಳಗಳಿಂದಲೂ, ಕೆಂಪು ಕಮಲಗಳಿಂದಲೂ ಭಕ್ತಿಯಿಂದ ಪೂಜಿಸುವವನು ತನ್ನ ಮಹಾಪಾಪರಾಶಿಯೆಂಬ ಹತ್ತಿಯ

ವಿಘ್ನಾದ್ರಿಂ ತ್ವಥ ನಾಶಯೇಜ್ಜನಿಜರಾರೋಗಪ್ರಣಾಶೋ ಭವೇ
ದೇವಂ ದೇವಮಹರ್ನಿಶಂ ವಿಭವತೋ ಭುಕ್ತಿಂ ಲಭಸ್ವಾದರಾತ್ ॥೪೦॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ಭೀಮಾಖ್ಯೇ
ನವಮೋಽಧ್ಯಾಯಃ

---

ರಾಶಿಗೆ ಅಗ್ನಿಯಂತಾಗುವನು. ಮತ್ತು ಜನನ, ಮರಣ, ರೋಗ, ಮುಪ್ಪು ಮೊದಲಾದ ಸಕಲ ಸಾಂಸಾರಿಕ ದುಃಖಗಳಿಂದಲೂ ಮುಕ್ತನಾಗಿ ಸಕಲ ವಿಘ್ನರಾಶಿಯನ್ನು ದೂರಗೊಳಿಸುವನು. ಜೈಗೀಷವ್ಯ ಮಹರ್ಷಿಯೇ, ಆದ್ದರಿಂದ ನೀನೂ ಸಹ ಇನ್ನು ಮುಂದೆ ದೇವದೇವನೆನಿಸಿದ ಮಹಾದೇವನನ್ನು ಪೂಜಿಸುತ್ತಾ ಸ್ಥಿರಮುಕ್ತಿಯನ್ನು ಪಡೆ, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸಿ ಹೇಳಿದನು. ॥೪೦॥

ಇಲ್ಲಿಗೆ ಶ್ರೀಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ದಶಮೋಽಧ್ಯಾಯಃ

॥ ಕಶ್ಯಪ ಉವಾಚ ॥

ಭಸ್ಮನಃ ಪಂಚ ನಾಮಾನಿ ಶ್ರುತಿಗೀತಾನಿ ವೈ ದ್ವಿಜ ।
ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಚ ಕ್ರಮಾತ್ ॥೧॥

ಭಾಸಕಜ್ಞಾನದಾನೇನ ಭಸ್ಮೇತ್ಯತ್ರ ಕೀರ್ತಿತಂ ಸದಾ ।
ಐಶ್ವರ್ಯದಾನಾತ್ಸಾ ಭೂತಿರ್ಭಸಿತಂ ಪಾಪನಾಶನಾತ್ ॥೨॥

ಕ್ಷಾರಂ ಪಾಪಕ್ಷರಣತೋ ರಕ್ಷಾ ರಕ್ಷಣತಃ ಸ್ಮೃತಾ ।
ಭಸ್ಮನಾಮೇಶ್ವರೇಣಾಥ ಪಂಚಧಾ ತತ್ಪ್ರಕೀರ್ತಿತಂ ॥೩॥

---

## ಹತ್ತನೆಯ ಅಧ್ಯಾಯ

ಕಶ್ಯಪಮಹರ್ಷಿಯು ತನ್ನ ಮಗನಾದ ಗರುಡನಿಗೆ ಭಸ್ಮಮಹಿಮೆಯನ್ನು ಈರೀತಿ ಮುಂದುವರಿಸಿದನು—ಭಸ್ಮಕ್ಕೆ, ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷ ಎಂಬುದಾಗಿ ಐದು ಹೆಸರುಗಳಿವೆ. ವಸ್ತುನಿಜಸ್ಥಿತಿಯನ್ನು ಪ್ರತಿಫಲಿಸುವ ಸುಜ್ಞಾನಕ್ಕೆ ಇದು ಮುಖ್ಯಸಾಧನವಾದುದರಿಂದ ಇದಕ್ಕೆ ಭಸ್ಮವೆಂದು ಹೆಸರು ಬಂದಿದೆ. ತನ್ನನ್ನು ಧರಿಸಿದವರಿಗೆ ಸಕಲ ಐಶ್ವರ್ಯವನ್ನೂ ಒದಗಿಸುವುದರಿಂದ ಇದಕ್ಕೆ ಭೂತಿಯೆಂದೂ, ಸಕಲ ಪಾಪನಾಶಕವಾದುದರಿಂದ ಭಸಿತವೆಂದೂ ಹೆಸರುಂಟಾಗಿದೆ ॥೧-೨॥

ಪಾಪನಾಶಕವಾದ್ದರಿಂದ ಕ್ಷಾರವೆಂದೂ, ಸರ್ವವಿಧದಲ್ಲಿಯೂ ರಕ್ಷಣೆ ಕೊಡುವುದರಿಂದ ರಕ್ಷೆಯೆಂತಲೂ, ಒಟ್ಟಿನಲ್ಲಿ ಭಸ್ಮಕ್ಕೆ ಅನ್ವರ್ಥಕವಾದ ಐದು ಹೆಸರುಗಳನ್ನು

ಜಾಬಾಲೈರ್ನಿರತಾ ಮುಕ್ತಂ ಭಸ್ಮ ಪಾಪಭಯಾಪಹಂ ।
ಭಸ್ಮ ಮುಕ್ತಿಪ್ರದತ್ವಾಚ್ಚ ಪ್ರಸಾದಕರಣಂ ಮಹತ್ ॥೪॥

ಯೋ ಭಸ್ಮರಹಿತೋ ವಿಪ್ರಃ ಸ ಏವ ಶ್ವಪಚೋಽಂತ್ಯಜಃ ।
ಸ ನಿತ್ಯಸೂತಕೀ ಭೂಯಾದ್ಭಸ್ಮಧಾರಣವರ್ಜಿತಃ ॥೫॥

ತೇನಾಧೀತಂ ತಥೈವೇಷ್ಟಂ ಜಪ್ತಂ ಸರ್ವಂ ಚ ನಿಷ್ಫಲಂ ।
ಆಮನಂತಿ ಸದಾ ಭಸ್ಮ ಶ್ವೇತಾಶ್ವತರಶಾಖಿನಃ ॥೬॥

ಆಮನಂತಿ ಸದಾ ಭಸ್ಮ ಅಥರ್ವಶಿರಸಿ ಸ್ಥಿತಾಃ ।
ಆಮನಂತಿ ಸದಾ ಭಸ್ಮ ಬೃಹಜ್ಜಾಬಾಲಶಾಖಿನಃ ॥೭॥

ಶ್ರುತಯೋ ಭಸ್ಮಮಾಹಾತ್ಮ್ಯಂ ವದಂತಿ ಬಹುಧಾ ದ್ವಿಜ ।
ಮುನಯೋ ಬ್ರಹ್ಮವಿಷ್ಣ್ವಾದ್ಯಾ ಭಸ್ಮಮಾಹಾತ್ಮ್ಯವೇದಿನಃ ॥೮॥

ದೇವೈಸ್ಸದೈವ ಸುಧೃತಂ ಭಸ್ಮೇದಂ ಪಾವನಂ ಪರಂ ।
ಬ್ರಹ್ಮಣಾ ವಿಷ್ಣುನೇಂದ್ರೇಣ ಧೃತಂ ರುದ್ರೈಃ ಸ ದೈವ ಹಿ ॥೯॥

---

ಶಂಕರನೇ ಇಟ್ಟಿರುವನು. ಜಾಬಾಲಮಹರ್ಷಿಗಳು ಈ ಭಸ್ಮಮಹಿಮೆಯನ್ನು ಬಹುವಾಗಿ ಕೊಂಡಾಡಿರುವರು. ಏಕೆಂದರೆ ಇದು ಪಾಪನಾಶಮಾಡಿ, ಈಶ್ವರಾನುಗ್ರಹವನ್ನು ಒದಗಿಸಿ, ಮುಕ್ತಿಯನ್ನು ಹಸ್ತಗತವನ್ನಾಗಿ ಮಾಡುವುದು. ||೩-೪||

ಶ್ವೇತಾಶ್ವತರೋಪನಿಷತ್ತಿನಲ್ಲಿ, ಭಸ್ಮಧಾರಿಯಾಗದವನು ಶ್ವಪಚನಾದ ಚಂಡಾಲನಿಗೆ ಸಮನೆಂದು ಉಕ್ತವಾಗಿದೆ. ಅಲ್ಲದೆ ಆತನು ನಿತ್ಯಸೂತಕಿಯೆಂದೂ, ಆತನಿಂದ ಜಪಿಸಲ್ಪಟ್ಟ ಸರ್ವಮಂತ್ರಗಳೂ ನಿಷ್ಫಲವಾಗುವುವೆಂದೂ ವರ್ಣಿತವಾಗಿದೆ. ||೫-೬||

ಅಥರ್ವಶೀರ್ಷೋಪನಿಷತ್ತಿನಲ್ಲಿಯೂ, ಜಾಬಾಲೋಪನಿಷತ್ತಿನಲ್ಲಿಯೂ ಭಸ್ಮಮಹಿಮೆಯನ್ನು ವಿಶೇಷವಾಗಿ ತಿಳಿಸಿರುವರು. ವೇದವಾಕ್ಯಗಳೂ, ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೂ ಭಸ್ಮದ ಮಹಿಮೆಯನ್ನೂ, ಭಸ್ಮಪ್ರಾಶಸ್ತ್ಯವನ್ನೂ ಬಹುವಾಗಿ ತಿಳಿದಿರುವರು. ||೭-೮||

ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಮುಂತಾದ ದೇವಶ್ರೇಷ್ಠರೂ, ದೇವತಾ

ದೇವಸ್ತ್ರೀಭಿರ್ಧೃತಂ ಭಸ್ಮ ಸರ್ವದಾ ತತ್ರಿಪುಂಡ್ರವತ್ ।
ದೇವ್ಯಾ ಚ ಗಣಪೇನೈವ ಸ್ಕಂದೇನ ಚ ಧೃತಂ ಪರಂ ॥೧೦॥

ಸ್ತ್ರೀಭಿರ್ಧಾರ್ಯಮಿದಂ ಭಸ್ಮ ಮಂಗಳಂ ತದ್ಭ್ರುವೋಂತರಾ ।
ಸ ಭರ್ತೃಕಾಭಿಸ್ಸತತಂ ಶಿವಾರಾಧನಸಾಧನಂ ॥೧೧॥

ಜ್ಞಾನಾಂಗತ್ವೇನ ಕಥಿತಂ ಸರ್ವದಾ ಪಾವನಂ ಪರಂ ।
ಶ್ರೌತಂ ತ್ರಿಪುಂಡ್ರಮೇವೇದಂ ತ್ಯಕ್ತ್ವಾ ತನ್ನರಕಂ ವ್ರಜೇತ್ ॥೧೨॥

ಊರ್ಧ್ವಪುಂಡ್ರಂ ಮೃದಾ ಕುರ್ವನ್ ದ್ವಿಜೋಪಿ ಶ್ವಪಚಾಧಮಃ ।
ಊರ್ಧ್ವಪುಂಡ್ರಂ ಭ್ರಮೇಣಾಪಿ ನೈವ ಕುರ್ಯಾದ್ದ್ವಿಜಸ್ಸದಾ ॥೧೩॥

ಅಶ್ರೌತಮೂರ್ಧ್ವಪುಂಡ್ರಂಸ್ಯಾನ್ನ ಧಾರ್ಯಂ ಸರ್ವಥಾ ದ್ವಿಜೈಃ ।
ಊರ್ಧ್ವಪುಂಡ್ರೇಣ ಯಃ ಕುರ್ಯಾಚ್ಛಿವಲಿಂಗಸ್ಯ ಪೂಜನಂ ॥೧೪॥

ಸ ಪಾಪಭಾಗ್ಭವತ್ಯೇವ ನಾತ್ರ ಸಂದೇಹಕಾರಣಂ ।
ಶಿವಪ್ರಸಾದಜನಕಂ ಭಸ್ಮಧಾರಣಮುತ್ತಮಂ ॥೧೫॥

---

ಸ್ತ್ರೀಯರೂ, ಪಾರ್ವತಿ, ಗುಹ, ಗಣಪರೂ, ಉಳಿದ ಸಕಲ ದೇವಗಣವರ್ಗವೂ ಈ ಭಸ್ಮತ್ರಿಪುಂಡ್ರವನ್ನು ತಪ್ಪದೆ ಸದಾ ಧರಿಸಿರುವರು. ॥೯-೧೦॥

ಸ್ತ್ರೀಯರೂ ಇದನ್ನು ಧರಿಸಬಹುದು. ಗಂಡನುಳ್ಳ ಸತಿಯರು ಶಿವಾರಾಧನ ಸಾಧಕವಾದ ಈ ಭಸ್ಮವನ್ನು ಎರಡು ಹುಬ್ಬುಗಳ ಮಧ್ಯದಲ್ಲಿ ಇಟ್ಟುಕೊಳ್ಳಬೇಕು. ಈ ಭಸ್ಮವು ಜ್ಞಾನಸಾಧನವಾಗಿ, ಪವಿತ್ರತಮವೆನಿಸಿಕೊಂಡು, ಶ್ರುತಿಪ್ರತಿಪಾದಿತ ವಾಗಿರುವುದರಿಂದ ಇದನ್ನು ಧರಿಸದವನು ನಿಜವಾಗಿಯೂ ನರಕಕ್ಕೆ ಹೋಗುವನು. ॥೧೧-೧೨॥

ಮಣ್ಣಿನಿಂದ ಹಣೆಯಲ್ಲಿ ಊರ್ಧ್ವಪುಂಡ್ರವನ್ನಿಡುವವನು ಚಂಡಾಲನೆನಿಸು ವನು. ಅದು ಶ್ರುತ್ಯುಕ್ತನಾದ ಪುಂಡ್ರವೆನಿಸುವುದಿಲ್ಲ. ಆದ್ದರಿಂದ ಅಕಸ್ಮಾತ್ತಾಗಿಯೂ ದ್ವಿಜನಾದವನು ಮೃತ್ತಿಕೆಯ ಊರ್ಧ್ವಪುಂಡ್ರವನ್ನು ಧರಿಸಬಾರದು. ಒಂದುವೇಳೆ ಆ ಚಿಹ್ನೆಯಿಂದ ಶಂಕರನನ್ನು ಪೂಜಿಸಿದರೆ ಅವನು ನರಕಭಾಗಿಯಾಗುವುದು ನಿಜ. ಏಕೆಂದರೆ ಶಿವಾನುಗ್ರಹಕ್ಕೆ ಮುಖ್ಯಕಾರಣವಾದುದು ಭಸ್ಮಧಾರಣೆಯೇ ಅಲ್ಲವೇ ? ॥೧೩-೧೪-೧೫॥

ಶಿವಪ್ರಸಾದಜನಕಂ ತ್ರಿಪುಂಡ್ರಪರಿಧಾರಣಂ ।
ಶಿರೋಲಲಾಟವಕ್ಷಸ್ಸು ದೋರ್ದ್ವಯೋರ್ಯಸ್ತ್ರಿಪುಂಡ್ರಧೃಕ್ ॥೧೬॥

ಸ ಏವ ಪ್ರಿಯಕೃಚ್ಛ್ರೇಷ್ಠೋ ಮಹೇಶಸ್ಯ ಗಣೇಶ್ವರಃ ।
ಯೋ ಭಸ್ಮಧಾರಣಂ ತ್ಯಕ್ತ್ವಾ ಮೃದೋರ್ಧ್ವಂ ಪುಂಡ್ರಧೃಙ್ನರಃ ॥೧೭॥

ಸ ನರೋ ಜಾರಜೋ ವಿಪ್ರಃ ಸ ಏವ ಶ್ವಪಚಾಧಮಃ ।
ಭಸ್ಮನಾ ಪೂತಫಾಲೋ ಯಃ ಸ ತಪಸ್ವೀ ಸ ತು ದ್ವಿಜಃ ॥೧೮॥

ಸ ಏವ ಪ್ರೇಮಸದನಂ ಮದನಾಂತಕರಸ್ಯ ಚ ।
ಭಸ್ಮಧೃಙ್ಮುಚ್ಯತೇ ಪಾಪೈರ್ಮಹದ್ಭಿರಪಿ ಕೃತ್ಸ್ನಶಃ ॥೧೯॥

ಭಸ್ಮಫಾಲತ್ರಿಪುಂಡ್ರಾಂಕಂ ದೃಷ್ಟ್ವಾ ಭೀತೋ ಯಮಸ್ಸದಾ ।
ನೃಗಣಾಶ್ಚ ಪಿಶಾಚಾಶ್ಚ ಗ್ರಹಾಶ್ಚೈವ ವಿನಾಯಕಾಃ ೨೦॥

ತಂ ನರಂ ನೋಪಸರ್ಪಂತಿ ಸರ್ವದಾ ಭಸ್ಮಧಾರಿಣಂ ।
ಭಸ್ಮಧಾರಣಮಾತ್ರೇಣ ಸದಾ ಶಾಮ್ಯಂತಿ ವೈ ಗ್ರಹಾಃ ॥೨೧॥

---

ಶಿರಸ್ಸು, ಹಣೆ, ಎದೆ, ಎರಡು ತೋಳು, ಇವುಗಳಲ್ಲಿ ತ್ರಿಪುಂಡ್ರವನ್ನಿಟ್ಟು ಶಿವಾರಾಧನೆ ಮಾಡುವವನೇ ಶಿವಾನುಗ್ರಹಕ್ಕೆ ಪಾತ್ರನಾಗುವನು. ಅವನೇ ಶ್ರೇಷ್ಠನು. ಈಶ್ವರನ ಗಣಗಳಿಗೆ ಪತಿಯೆನಿಸುವವನೂ ಅವನೇ. ಭಸ್ಮಧಾರಣೆ ಮಾಡದೆ ಮೃತ್ತಿಕೆಯಿಂದ ಊರ್ಧ್ವಪುಂಡ್ರವನ್ನಿಡುವವನು ಜಾರಜನೆಂದೂ, ಚಂಡಾಲನೆಂದೂ ಹೇಳಿಸಿಕೊಳ್ಳುವನು. ಯಾವನ ಹಣೆಯು ಭಸ್ಮದಿಂದ ಪವಿತ್ರವೆನಿಸುವುದೋ ಅವನೇ ತಪಸ್ವಿ, ಆತನೇ ದ್ವಿಜ. ॥೧೬-೧೭-೧೮॥

ಆತನೇ ಪರಶಿವ ಪ್ರಿಯಭಕ್ತನು. ಆತನು ಭಸ್ಮಧಾರಣೆಯಿಂದಲೇ ಮಹಾಪಾಪಗಳನ್ನು ಕಳೆದುಕೊಳ್ಳುವನು. ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ನೋಡಿದೊಡನೆಯೇ, ಯಮನೂ, ಭೂತಪ್ರೇತಪಿಶಾಚಗಳೂ, ಗ್ರಹಾತಂಕಗಳೂ ಆತನನ್ನು ಪೀಡಿಸಲಾರವು. ಭಸ್ಮದರ್ಶನದಿಂದಲೇ ಸಕಲ ಗ್ರಹಗಳೂ ಶಾಂತವಾಗಿ ಹೋಗುವುವು. ॥೧೯-೨೦-೨೧॥

ಪಂಚಾಕ್ಷರೇಣ ಯೋ ಭಸ್ಮ ಅಭಿಮಂತ್ರ್ಯೈವ ಧಾರಯೇತ್ ।
ಆರ್ದ್ರೈಃ ಶುಷ್ಕೈಸ್ತಥಾ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೨೨॥

ಭಸ್ಮೈವ ಪರಮಂ ತುರ್ಯಂ ಪಾವನಂ ಜ್ಞಾನಭಾಸಕಂ ।
ಯೋ ವಿನಿಂದತಿ ಭಸ್ಮೇದಂ ಸ ನಿಂದ್ಯಾಂ ಯೋನಿಮಾಪ್ನುಯಾತ್॥೨೩॥

ಭಸ್ಮದಿವ್ಯತ್ರಿಪುಂಡ್ರಾಂಕಂ ಭೋಜಯಿತ್ವಾ ತು ಶಾಂಭವಂ ।
ಸ ಭೋಜಯತಿ ಗೌರೀಶಂ ತೇನ ತುಷ್ಟೋ ಮಹೇಶ್ವರಃ ॥೨೪॥

ಪವಿತ್ರಾಣಾಂ ಪವಿತ್ರಂ ವೈ ಭಸ್ಮೈವ ದ್ವಿಜಪುಂಗವ ।
ನ ಭಸ್ಮಾತ್ಪಾವನತರಂ ತ್ರಿಷು ಲೋಕೇಷು ವಿದ್ಯತೇ ॥೨೫॥

ನ ಭೂತ್ಯಾ ಪ್ರಮದೇತ್ಯೈವ ಇತಿ ಶ್ರುತ್ಯನುಶಾಸನಂ ।
ಭಸ್ಮನಾ ಪೂಜಯೇಲ್ಲಿಂಗಂ ತ್ರ್ಯಂಬಕೇಣ ಸ ಮುಚ್ಯತೇ ॥೨೬॥

ಸರ್ವಸ್ಮಾದಪಿ ಪಾಪೇಭ್ಯೋ ಸ ಮುಕ್ತೋ ನೋಚಯೇತ್ಪರಾನ್ ।
ಸ ಜೀವಂಛಿವತಾಮೇತಿ ಸಾಕ್ಷಾದ್ರುದ್ರಸಮೋ ಭವೇತ್ ॥೨೭॥

---

ಶಿವಪಂಚಾಕ್ಷರೀಮಂತ್ರಪುರಶ್ಚರಣೆಯಿಂದ ಭಸ್ಮಧಾರಣೆ ಮಾಡುವವನ ಹಳೆಯ ಅಥವಾ ಹೊಸ ಪಾಪಗಳೆಲ್ಲವೂ ನಾಶವಾಗುವುವು. ಭಸ್ಮವೆಂಬುದು ಪವಿತ್ರವೂ, ಜ್ಞಾನಭಾಸಕವೂ ಆಗಿರುವುದರಿಂದ, ಯಾವನು ಈ ಭಸ್ಮವನ್ನು ನಿಂದಿಸುವನೋ ಅವನು ಕುತ್ಸಿತವಾದ ಯೋನಿಯಿಂದ ಜನ್ಮತಾಳುವನು. ॥೨೨-೨೩॥

ದಿವ್ಯ ಭಸ್ಮತ್ರಿಪುಂಡ್ರವನ್ನು ಧರಿಸಿರುವ ಶಾಂಭವನನ್ನು ಭೋಜನದಿಂದ ತೃಪ್ತಿಪಡಿಸಿದವನು ಶಂಕರನಿಗೆ ಊಟವಿಟ್ಟಂತೆಯೇ ಸರಿ. ಆದರಿಂದ ಮಹಾದೇವನು ತೃಪ್ತನಾಗುವನು. ಪವಿತ್ರವಸ್ತುಗಳಲ್ಲೆಲ್ಲಾ ಪರಮಪವಿತ್ರವೆನಿಸುವುದು ಭಸ್ಮವಷ್ಟೆ. ಅದಕ್ಕಿಂತ ಪರಿಶುದ್ಧವಾದ ವಸ್ತು ಲೋಕತ್ರಯದಲ್ಲಿಯೂ ಕಂಡುಬರುವುದಿಲ್ಲ. ॥೨೪-೨೫॥

ವಿಭೂತಿಧಾರಣೆಯನ್ನು ಯಾವಾಗಲೂ ಮರೆಯಬಾರದು. ಶ್ರದ್ಧೆಯಿಂದ ಅದನ್ನು ಧರಿಸಬೇಕೆಂದು ಶ್ರುತಿ ಹೇಳುತ್ತಿದೆ. ಭಸ್ಮದಿಂದಲೇ ಶಿವಲಿಂಗವನ್ನು ಪೂಜಿಸಬೇಕೆಂದು ಶಿವನೇ ಅಭಿಪ್ರಾಯಪಡುವನು. ಹಾಗೆ ಭಸ್ಮದಿಂದ ಆರಾಧಿಸಿ

ನಿತ್ಯಾಶುಚಿರಯಂ ದೇಹೋ ಭಸ್ಮನಾ ಶುಚಿಭಾಗ್ಭವೇತ್ ।
ಭಸ್ಮ ಏತದ್ವಿಹಾಯೈವಮನ್ಯಪುಂಡ್ರಧರೋ ಯದಿ ॥೨೮॥

ಮುಕ್ತೋ ವಿಂದೇತ ಚೇದಸ್ಮಾತ್ಸಾಗರೇ ಸಂಪ್ಲವಿಷ್ಯತಿ ।
ವಿಷಪಾನೇನ ನಿತ್ಯತ್ವಂ ಯದಿ ವಿಂದೇತ ಮಾನವಃ ॥೨೯॥

ಭಸ್ಮಸ್ನಾನವಿಹೀನೋ ಯಃ ಸ ಭವೇನ್ಮಾಯಯಾವೃತಃ ॥೩೦॥

ಯೋ ಭಸ್ಮಸ್ನಾನಮುಕ್ತೋ ಭವತಿ ಸುರನರೋ ಸ ದ್ವಿಜೋ ವಾಥನೋ ವಾ
ನೈವಾನ್ಯೋ ಭಗವತ್ಪ್ರಮೋದಜನಕಂ ಜ್ಞಾನಂ ಮಹತ್ ಪ್ರಾಪ್ನುಯಾತ್ ।
ಧೃತ್ವೋರ್ಧ್ವಂ ಫಲಕೇ ಲಲಾಟತಟಕೇ ಪಾದ್ಮಾ (?) ಮೃದಾದೌರತೋ
ನಿರ್ದಗ್ಧಾಖಿಲವಂಶಕಂ ಕರ ಮಹಾಪಾಪೌಘದುಃಖೌಘಯುಕ್ ॥೩೧॥

ಯೋ ಭಸ್ಮಾಭ್ಯಕ್ತದೇಹೋ ಭವತಿ ಜನಿಜರಾನಾಶಪಾಪಾದ್ವಿಹೀನಃ
ಪಾಪೈಸ್ತ್ರಾಪಜ ದುಃಖಭಾಗ ನಿಕರಾತ್ ಜ್ಞಾನಂ ಮಹದ್ವಿಂದತಿ ।

---

ದವನು ಸಶರೀರನಾಗಿಯೇ ಶಿವಸಾಯುಜ್ಯವನ್ನು ಹೊಂದಿ ರುದ್ರದೇವರಿಗೆ ಸಮ ನೆನಿಸುವನು. ॥೨೬-೨೭॥

ನಿತ್ಯವೂ ಅಶುಚಿಯಾಗಿಯೇ ಕಂಡುಬರುವ ಈ ದೇಹವು ಕೇವಲ ಭಸ್ಮ ಧಾರಣೆಯಿಂದಲೇ ಶುಚಿತ್ವವನ್ನು ಹೊಂದಬೇಕು. ಭಸ್ಮತ್ರಿಪುಂಡ್ರಧಾರಣೆಯಿಲ್ಲದೆ ಇತರ ಚಿಹ್ನೆಗಳನ್ನು ಧರಿಸುವುದರಿಂದ ಮೋಕ್ಷವು ಲಭಿಸುವುದೆಂದು ತಿಳಿಯುವು ದಾದರೆ, ಸಾಗರದಲ್ಲಿ ಈಜುವಂತೆಯೂ, ವಿಷಪಾನದಿಂದ ಸ್ಥಿರಜೀವಿಯಾಗು ವಂತೆಯೂ ಆ ಪ್ರಸಂಗವು ಮಿಥ್ಯೆಯೆನಿಸೀತು. ಒಟ್ಟಿನಲ್ಲಿ ಭಸ್ಮಸ್ನಾನವಿಹೀನ ನಾದವನು ಅಜ್ಞಾನದಿಂದ ಆವೃತನಾಗಿ ಜ್ಞಾನಬಾಹಿರನೆನಿಸುವನು. ॥೨೮-೨೯-೩೦॥

ಮಾನವರಾಗಲಿ, ದೇವತೆಗಳಾಗಲಿ, ದ್ವಿಜರಾಗಲಿ, ಚಂಡಾಲರಾಗಲಿ ಭಸ್ಮ ಧಾರಣೆ ಮಾಡಿದುದೇ ಆದರೆ ಅವರು ಜ್ಞಾನಿಗಳಾಗುವರು ಮತ್ತು ಪರಶಿವನ ಪ್ರೀತಿಗೆ ಪಾತ್ರರಾಗುವರು. ಹಾಗಿಲ್ಲದೆ ದೊಡ್ಡ ಹಲಗೆಯಂತಿರುವ ಹಣೆಯ ಒಂದು ಭಾಗದಲ್ಲಿ ಮಣ್ಣಿನಿಂದ ಊರ್ಧ್ವಪುಂಡ್ರವಿಡುವವರು, ವಂಶನಾಶಕವಾಗುವಂತಹ ಮಹಾಪಾಪಗಳ ಮತ್ತು ಮಹಾದುಃಖಗಳ ರಾಶಿಯನ್ನು ಹೊಂದಿ ಅದರಲ್ಲಿ ವ್ಯಥೆ ಪಡುವರು. ಇದು ನಿಜ. ॥೩೧॥

ಒಟ್ಟಿನಲ್ಲಿ ಭಸ್ಮದಿಂದ ಲಿಪ್ತವಾದ ದೇಹವುಳ್ಳವನು, ಮುಪ್ಪು, ಮರಣ,

ಭುಕ್ತ್ವಾ ಸೌಖ್ಯಮತೀವ ಶಾಂಕರ ಶ್ರೇಷ್ಠೋಽಪ್ಯರವ್ಯಾಕೃತಿ
ಭೂರ್ಯಯಾದೇವ ಮಹಾಪ್ರಭಾವ ಸಹಿತೋ ವಿಪ್ರೋಽಥ ಮುಕ್ತೋ
ಭವೇತ್ ॥೩೨॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ಭೀಮಾಖ್ಯೇ
ದಶಮೋಽಧ್ಯಾಯಃ

---

ರೋಗ ಮೊದಲಾದ ಪಾಪಫಲಗಳಿಂದ ದೂರನಾಗಿ, ಯಾವ ವಿಪತ್ತುಗಳಿಗೂ ಒಳಗಾಗದೆ, ಮಹಾಜ್ಞಾನಿಯಾಗಿ ಈ ಲೋಕದ ಸಕಲ ದುಃಖಗಳನ್ನೂ ಕಳೆದು ಕೊಂಡು, ಸಮಸ್ತ ಸುಖವನ್ನೂ ಅನುಭವಿಸಿ, ಮುಂದೆ ಈಶ್ವರನ ಗಣಶ್ರೇಷ್ಠ ನಾಗಿದ್ದು, ಮತ್ತೆ ಮಹಾಮಹಿಮನೆನಿಸಿ, ಭೂಲೋಕದಲ್ಲಿ ಉತ್ತಮಜ್ಞಾನಿಗಳೆಸಿಸಿ ದವರ ಕುಲದಲ್ಲಿ ಜನಿಸುವನು. ಅಲ್ಲಿಯೂ ಸನ್ಮಾರ್ಗದಲ್ಲಿದ್ದು ಕೊನೆಗೆ ಮಹಾದೇವ ನಲ್ಲಿ ಐಕ್ಯಹೊಂದುವನು ಎಂದು ಕಶ್ಯಪಮಹರ್ಷಿಯು ಮಗನಾದ ಗರುಡನಿಗೆ ಭಸ್ಮಪ್ರಭಾವವನ್ನು ತಿಳಿಸಿದನು. ॥೩೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಏಕಾದಶೋಽಧ್ಯಾಯಃ

॥ ಕಶ್ಯಪ ಉವಾಚ ॥

ರುದ್ರಾಕ್ಷಧಾರಣಂ ಪುಣ್ಯಂ ಶಿವಪ್ರೀತಿಕರಂ ಸದಾ ।
ಪ್ರಸಾದಜನಕಂ ಸಾಕ್ಷಾಚ್ಛಂಭೋರ್ನಿತ್ಯಂ ಪಿನಾಕಿನಃ ॥೧॥

ರುದ್ರನೇತ್ರಸಮುದ್ಭೂತಾ ರುದ್ರಾಕ್ಷತರವೋಽಭವನ್ ।
ಬಿಂದವಸ್ತ್ರೈಪುರೇ ಯುದ್ಧೇ ಮೀಲಿತಾಕ್ಷೇಣ ಶಂಭುನಾ ॥೨॥

ಪತಿತಾ ಭೂತಲೇ ವತ್ಸ ತೇ ಭೂಮೌ ತರವೋಽಭವನ್ ।
ದ್ವಾತ್ರಿಂಶದಕ್ಷಜಾತೀಯಾ ಸಕಲಾಃ ಸುಷಿರಾವೃತಾಃ ॥೩॥

---

## ಹನ್ನೊಂದನೆಯ ಅಧ್ಯಾಯ

ವಿನಯದಿಂದ ಶಿವಧರ್ಮವನ್ನು ಆಲಿಸುತ್ತಿದ್ದ ಪುತ್ರನಾದ ಗರುಡನನ್ನು ಕುರಿತು ಕಶ್ಯಪಮಹರ್ಷಿಯು ರುದ್ರಾಕ್ಷಿಯ ಮಹಿಮೆಯನ್ನೂ, ಅದು ಉತ್ಪತ್ತಿಯಾದ ಕ್ರಮವನ್ನೂ ಹೀಗೆ ಉಪದೇಶಿಸತೊಡಗಿದನು—ರುದ್ರಾಕ್ಷಿಯೆಂಬುದು ಶಿವಪ್ರೀತಿಕರವಾದುದು. ಅದನ್ನು ಧರಿಸುವವರಲ್ಲಿ ಶಂಕರನು ಪ್ರಸನ್ನನಾಗುವನು. ರುದ್ರಾಕ್ಷಿಯ ಮರಗಳು ರುದ್ರನೇತ್ರದಿಂದ ಹುಟ್ಟಿದವುಗಳು. ತ್ರಿಪುರಾಸುರರನ್ನು ನಾಶಮಾಡುವಕಾಲದಲ್ಲಿ ಶಂಕರನು ಕಣ್ಣುಮುಚ್ಚಿದಾಗ, ಆ ಕಣ್ಣಿನಿಂದ ನೀರಿನ ಹನಿಗಳು ಭೂಲೋಕಕ್ಕೆ ಬಿದ್ದುವು. ॥೧-೩॥

ಆ ಹನಿಗಳೇ ರುದ್ರಾಕ್ಷಿಯ ಮರಗಳಾಗಿವೆ. ರುದ್ರಾಕ್ಷಿಯಲ್ಲಿ ಮೂವತ್ತೆರಡು ವಿಧಗಳಿವೆ. ಎಲ್ಲಕ್ಕೂ ರಂಧ್ರಗಳುಂಟು. ರುದ್ರಾಕ್ಷಿಯಲ್ಲಿ ಬಿಳಿಯವು ಬ್ರಾಹ್ಮಣ

ಬ್ರಾಹ್ಮಣಾ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ಇತಿ ವಿಶ್ರುತಾಃ ।
ಬ್ರಾಹ್ಮಣಾಃ ಶ್ವೇತಜಾತೀಯಾಃ ಕ್ಷತ್ರಿಯಾ ರಕ್ತವರ್ಣಕಾಃ ॥೪॥

ವೈಶ್ಯಾಃ ಪೀತಾಸ್ತು ವಿಜ್ಞೇಯಾಃ ಶೂದ್ರಾಃ ಕೃಷ್ಣಾಃ ಪ್ರಕೀರ್ತಿತಾಃ ।
ತತ್ತದ್ವರ್ಣಕ್ರಮೇಣೈವ ಧಾರ್ಯಾ ವರ್ಣೈರನುಕ್ರಮಾತ್ ॥೫॥

ಬ್ರಾಹ್ಮಣೋ ಬಿಭೃಯಾನ್ಮೂರ್ಧ್ನಿ ಸರ್ವಾಂಗೇಷು ವಿಶೇಷತಃ ।
ಕ್ಷತ್ರಿಯೋಽಪಿ ಚ ವಕ್ಷಸ್ಸು ಬಾಹ್ವೋರಪಿ ವಿಶೇಷತಃ ॥೬॥

ವೈಶ್ಯಃ ಕಂಠೇ ವಕ್ಷಸಿ ಚ ಶೂದ್ರೋ ಮೂರ್ಧನಿ ಧಾರಯೇತ್ ।
ಬ್ರಾಹ್ಮಣೈರಪಿ ಸರ್ವಾಂಗೇ ಧಾರ್ಯಂ ತ್ರ್ಯಂಬಕೇಣ ತು ॥೭॥

ಅಘೋರೇಣೈವ ಮಂತ್ರೇಣ ಕ್ಷತ್ರಿಯೋ ಧಾರಯೇಚ್ಛುಭಾನ್ ।
ವಾಮದೇವೇತಿ ಮಂತ್ರೇಣ ವೈಶ್ಯೈರ್ಧಾರ್ಯಾಃ ಸದಾಕ್ಷಕಾಃ ॥೮॥

ಶೂದ್ರಶ್ಶಿವೇತಿ ನಾಮ್ನೈವ ಧೃತ್ವಾ ಮುಕ್ತೋ ಭವಿಷ್ಯತಿ ।
ಯತಿಸ್ತು ಪ್ರಣವೇನೈವ ಸ್ತ್ರೀಣಾಂ ಪಂಚಾಕ್ಷರೇಣ ತು ॥೯॥

---

ರಿಗೂ, ಕೆಂಪು ಕ್ಷತ್ರಿಯರಿಗೂ, ಹಳದಿಯು ವೈಶ್ಯರಿಗೂ, ಕಪ್ಪು ಶೂದ್ರರಿಗೂ ಶ್ರೇಷ್ಠ ವೆಂದು ಉಕ್ತವಾಗಿದೆ. ಈ ಕ್ರಮವನ್ನು ಅನುಸರಿಸಿಯೇ ಆಯಾ ಜಾತಿಯವರು ಆಯಾ ವರ್ಣದ ರುದ್ರಾಕ್ಷಿಯನ್ನು ಧರಿಸಬೇಕು. ॥೩-೪-೫॥

ಬ್ರಾಹ್ಮಣನಾದವನು ಸರ್ವಾಂಗದಲ್ಲಿಯೂ ರುದ್ರಾಕ್ಷಿಯನ್ನು ಧರಿಸಬಹುದು. ತಲೆಯಲ್ಲಿ ಮಾತ್ರ ವಿಶೇಷವಾಗಿ ಧರಿಸಲೇಬೇಕು. ಕ್ಷತ್ರಿಯನು ಎದೆಯ ಮೇಲೂ, ತೋಳುಗಳ ಮೇಲೂ ಧರಿಸಿರಬೇಕು. ವೈಶ್ಯನು ಕಂಠದಲ್ಲಿಯೂ, ಎದೆಯ ಮೇಲೆಯೂ, ಶೂದ್ರನು ಶಿರಸ್ಸಿನ ಮೇಲೆಯೂ ಧರಿಸಬೇಕು. ಬ್ರಾಹ್ಮಣರು ತ್ರ್ಯಂಬಕದೇವತಾಕವಾದ 'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದಲೂ, ಕ್ಷತ್ರಿಯರು ಅಘೋರದೇವತಾಕವಾದ 'ಅಘೋರೇಭ್ಯ' ಎಂಬ ಮಂತ್ರದಿಂದಲೂ, ವೈಶ್ಯನು 'ವಾಮದೇವಾಯನಮಃ' ಎಂಬ ಮಂತ್ರದಿಂದಲೂ, ರುದ್ರಾಕ್ಷಿಗಳನ್ನು ಧರಿಸಬೇಕು. ॥೬-೭-೮॥

ಕೇವಲ ಶಿವನಾಮೋಚ್ಚಾರಣೆಯಿಂದಲೇ ಶೂದ್ರನು ರುದ್ರಾಕ್ಷಿಯನ್ನು ಧರಿಸ ಬಹುದು. ಯತಿಯಾದವನು ಪ್ರಣವದಿಂದಲೂ, ಸ್ತ್ರೀಯರು ಪಂಚಾಕ್ಷರೀಮಂತ್ರ

ಸಭರ್ತೃಕಾ ಕಂಠದೇಶೇ ಧೃತ್ವೈಕಂ ಚಾಕ್ಷಮುತ್ತಮಂ ।
ಪಾಕಾದಿಕರಣೇ ಯೋಗ್ಯಾ ರಜಸಾಪಿ ಪರಿಪ್ಲುತಾ ॥೧೦॥

ರತ್ನೈಃ ಸ್ವರ್ಣೇನ ವಾ ಧಾರ್ಯೋ ರಾಜತೇನಾಥವಾ ಸದಾ ।
ಸೂತ್ರೇಣ ಕ್ಷೌಮಜೇನಾಪಿ ಸರ್ವೈರ್ಧಾರ್ಯೋ ಯಥಾರುಚಿ ॥೧೧॥

ಅಶುಚಿರ್ವಾ ಶುಚಿರ್ವಾಪಿ ಸರ್ವಾವಸ್ಥಾಂ ಗತೋಽಪಿ ವಾ ।
ರುದ್ರಾಕ್ಷಮಾಲಾಭರಣಃ ಪವಿತ್ರೋ ನಾತ್ರ ಸಂಶಯಃ ॥೧೨॥

ತ್ರಿನೇತ್ರಪ್ರಿಯಪಾತ್ರಂ ಸ ಇತಿ ಶಾಸ್ತ್ರವಿದಾಂ ಮತಂ ।
ಏಕಾನನಃ ಶಿವಸ್ಸಾಕ್ಷಾತ್ತಂ ಧೃತ್ವಾ ಶಿವಸಾದ್ಭವೇತ್ ॥೧೩॥

ದ್ವಿಮುಖಂ ಪಾರ್ವತೀಶಂಭುಸ್ತಂ ಧೃತ್ವಾ ಪಾಪಮೋಚಿತಃ ।
ತ್ರಿಮುಖೋ ವಹ್ನಿರೂಪಾತ್ಮಾ ತಂ ಧೃತ್ವಾ ಭಸ್ಮ್ಯಪಾಪಮುಕ್॥೧೪॥

ಚತುರ್ವಕ್ತ್ರಃ ಸ್ವಯಂ ಬ್ರಹ್ಮಾ ತಂ ಧೃತ್ವಾ ಬ್ರಹ್ಮಲೋಕಗಃ ।
ಪಂಚವಕ್ತ್ರಃ ಸ್ವಯಂ ಶಂಭುಸ್ತಂ ಧೃತ್ವಾ ಪಂಚಪಾತಕೈಃ ॥೧೫॥

---

ದಿಂದಲೂ ಧರಿಸಬೇಕು. ಪತಿಯುಳ್ಳ ಸುವಾಸಿನಿಯು ಕಂಠದಲ್ಲಿ ಒಂದು ಉತ್ತಮವಾದ ರುದ್ರಾಕ್ಷಿಯನ್ನು ಧರಿಸಿಕೊಂಡಿರಬೇಕು. ಆಗ ಆಕೆಯು ಒಂದುವೇಳೆ ರಜಸ್ವಲೆಯಾದರೂ ಅಡಿಗೆ ಮೊದಲಾದ ಕಾರ್ಯನಿರ್ವಹಣಕ್ಕೆ ಯೋಗ್ಯಳೆನಿಸುವಳು. ॥೯-೧೦॥

ಈ ರುದ್ರಾಕ್ಷಿಯನ್ನು ಸುವರ್ಣ, ರತ್ನ ಅಥವಾ ಬೆಳ್ಳಿ ಇದರ ಮಧ್ಯದಲ್ಲಿಟ್ಟು ಧರಿಸಿಕೊಳ್ಳಬಹುದು. ಅಥವಾ ರೇಶ್ಮೆಯ ದಾರದಲ್ಲಿ ಪೋಣಿಸಿ ಹಾಕಿಕೊಳ್ಳಬಹುದು. ರುದ್ರಾಕ್ಷಿಯ ಸರವನ್ನು ಸರ್ವಾಂಗದಲ್ಲಿಯೂ ಧರಿಸಿರುವವನು ಎಂತಹ ಅಶುಚಿಯೇ ಆಗಿರಲಿ, ಶುಚೀಭೂತನಾಗಿರಲಿ, ಆತನನ್ನು ಪವಿತ್ರನೆಂದೇ ತಿಳಿಯಬೇಕು. ॥೧೧-೧೨॥

ಮತ್ತು ಆತನೇ ಶಿವಪ್ರಿಯನೆಂದೂ ಭಾವಿಸಬೇಕು. ಇನ್ನು ರುದ್ರಾಕ್ಷಿಯಲ್ಲಿ ಒಂದು ಮುಖದ ರುದ್ರಾಕ್ಷಿಯು ಕೇವಲ ಶಿವಸ್ವರೂಪವಾದದ್ದು. ಅದನ್ನು ಧರಿಸಿದವನು ಶಿವಸದೃಶನಾಗುವನು. ಎರಡು ಮುಖದ ರುದ್ರಾಕ್ಷಿಯೇ ಭವಾನೀ ಶಂಕರರುದ್ರಾಕ್ಷಿಯು. ಅದು ಪಾಪಮೋಚಕವಾದುದು. ಮೂರು ಮುಖದ

ವಿಮುಚ್ಯೇತ ಕ್ಷಣೇನೈವ ಸಾಕ್ಷಾತ್ತ್ರ್ಯಕ್ಷಪ್ರಸಾದಭಾಕ್ ।
ಷಡಾಸ್ಯಂ ಸ್ಕಂದದೈವತ್ಯಂ ಧೃತ್ವಾ ಸ್ಕಂದಸ್ಯ ಲೋಕಗಃ ॥೧೬॥

ಸಪ್ತಾನನಂ ಸ್ವಯಂ ದೇವೀ ತಂ ಧೃತ್ವಾ ವಹ್ನಿಲೋಕಗಃ ।
ಅಷ್ಟಾನನಂ ತು ರುದ್ರಾಕ್ಷಂ ಅಷ್ಟಮೂರ್ತೇಃ ಪ್ರಿಯಂ ಸದಾ ॥೧೭॥

ತಂ ಧಾರಣಾದಷ್ಟವಸುಲೋಕೇಽಸೌ ಮೋದತೇ ಚಿರಂ ।
ನವಾನನಂ ಸ್ವಯಂ ಭೀಮೋ ಭೀಮಪಾಪೈಃ ಪ್ರಮುಚ್ಯತೇ ॥೧೮॥

ದಶಾಸ್ಯಂ ಚ ಸದಾ ಧೃತ್ವಾ ನ ಯಾಮೀಂ ಯಾತಿ ಯಾತನಾಂ ।
ಏಕಾದಶಾಸ್ಯಂ ರುದ್ರಾಕ್ಷಂ ತಲ್ಲೋಕೇ ನಿವಸೇಚ್ಛ ಧೃಕ್ ॥೧೯॥

ದ್ವಾದಶಾಸ್ಯಂ ಸೋಮಧಾಮ ಪ್ರದೋಷಾಘವಿನಾಶಕಂ ।
ತ್ರಯೋದಶಾಸ್ಯಂ ಪಾಪಘ್ನಂ ಧೃತ್ವಾ ವಿಷ್ಣುಪದಪ್ರದಂ ॥೨೦॥

---

ರುದ್ರಾಕ್ಷಿಯು ಅಗ್ನಿರೂಪಿಯು. ಅದರ ಧಾರಣೆಯಿಂದ ಆಹಾರ ದೋಷವು ನಿವೃತ್ತಿಯಾಗುವುದು. ನಾಲ್ಕು ಮುಖದ ರುದ್ರಾಕ್ಷಿಯು ಬ್ರಹ್ಮಸ್ವರೂಪವಾದುದು. ಅದರ ಧಾರಣೆಯಿಂದ ಬ್ರಹ್ಮಲೋಕಪ್ರಾಪ್ತಿಯಾಗುವುದು. ಐದು ಮುಖದ ರುದ್ರಾಕ್ಷಿಯು ಪಂಚಮಹಾಪಾಪಗಳಿಂದಲೂ ಮುಕ್ತನನ್ನಾಗಿ ಮಾಡುವುದು. ಮತ್ತು ಶಿವಾನುಗ್ರಹವನ್ನು ಒದಗಿಸುವುದು. ॥೧೪-೧೫॥

ಆರು ಮುಖದ ರುದ್ರಾಕ್ಷಿಯು ಸ್ಕಂದದೇವತಾಕವಾದುದು. ಅದನ್ನು ಧರಿಸಿದವನು ಸ್ಕಂದಲೋಕವನ್ನು ಸೇರುವನು. ಏಳು ವದನದ ರುದ್ರಾಕ್ಷಿಯು ದೇವಿಗೆ ಪ್ರೀತಿಕರವಾದುದು. ಅದನ್ನು ಧರಿಸಿದವನು ಅಗ್ನಿಲೋಕವನ್ನು ಕುರಿತು ತೆರಳುವನು. ಎಂಟು ಮುಖದ ರುದ್ರಾಕ್ಷಿಯು ಅಷ್ಟಮೂರ್ತಿಪ್ರಿಯವೆಂದೆನಿಸಿ, ಅಷ್ಟವಸುಲೋಕವನ್ನು ಒದಗಿಸಿಕೊಡುವುದು. ಅದು ಭಯಂಕರವಾದ ಪಾಪರಾಶಿಯನ್ನು ನಿವಾರಿಸುವುದು. ॥೧೬-೧೭-೧೮॥

ಹತ್ತು ಮುಖದ ರುದ್ರಾಕ್ಷಿಯನ್ನು ಧರಿಸಿದವನಿಗೆ ಯಮಯಾತನೆಯೇ ಇರುವುದಿಲ್ಲ. ಹನ್ನೊಂದು ವದನದ ರುದ್ರಾಕ್ಷಿಯನ್ನು ಧರಿಸಿದವನು ಏಕಾದಶ ರುದ್ರರ ಲೋಕದಲ್ಲಿ ವಾಸಿಸುವನು. ಹನ್ನೆರಡು ವದನದ ರುದ್ರಾಕ್ಷಿಯು ಸೋಮದೇವತಾಕವಾದುದು. ಅದು ಪ್ರಕೃಷ್ಟವಾದ ದೋಷರಾಶಿಯನ್ನೆಲ್ಲಾ ನಾಶಗೊಳಿಸು

ಚತುರ್ದಶಾಸ್ಯಂ ರುದ್ರಾಕ್ಷಂ ಶಿವಜ್ಞಾನಪ್ರದಂ ಶುಭಂ ।
ಏವಂ ಚತುರ್ದಶಮುಖಂ ರುದ್ರಾಕ್ಷಂ ಧಾರಯೇತ್ಕ್ರಮಾತ್ ॥೨೦॥

ಸರ್ವಪಾಪೈರ್ವಿಮುಕ್ತಶ್ಚ ಪಶ್ಚಾನ್ಮುಕ್ತೋ ಭವಿಷ್ಯತಿ ।
ದ್ವಿಜೋ ವಾ ಶ್ವಪಚೋ ವಾಪಿ ಯೋ ರುದ್ರಾಕ್ಷಾಣಿ ಧಾರಯೇತ್ ॥೨೨॥

ಸ ತಪಸ್ವೀ ಸ ಮೂರ್ಧನ್ಯಃ ವದಾನ್ಯೋ ಮುಕ್ತ ಏವ ಹಿ ।
ಸದಾಶಿವಪ್ರಸಾದಸ್ಯ ಪಾತ್ರಂ ನಾತ್ರ ವಿಚಾರಣಾ ॥೨೩॥

ಮುಖಂ ಮುಖೇನ ಸಂಯೋಜ್ಯ ಧಾರ್ಯಾ ರುದ್ರಾಕ್ಷಮಾಲಿಕಾ ।
ನೋ ಚೇತ್ಸ್ತತಪಸಾಂ ಹಾನಿರ್ಭವಿಷ್ಯತಿ ಶಿವಾಜ್ಞಯಾ ॥೨೪॥

ಕಂಠಸ್ಥಾನೇ ತು ದ್ವಾತ್ರಿಂಶತ್ ಷಟ್ ಷಟ್ ಕರ್ಣಯುಗೇ ತಥಾ ।
ಬಾಹ್ವೋಃ ಷೋಡಶ ಧಾರ್ಯಾ ವೈ ಮಣಿಬಂಧೇ ತು ದ್ವಾದಶ ॥೨೫॥

ವಕ್ಷಸ್ಯಷ್ಟಾಧಿಕಶತಂ ಭ್ರುವೋಶ್ಚೈಕಂ ಶಿಖಾಸ್ವಪಿ ।
ದ್ವಿಚತ್ವಾರಿಂಶತಿಂ ಮೂರ್ಧ್ನಿ ಸಂಗ್ರಹೋಽಯಂ ಪ್ರಕೀರ್ತಿತಃ ॥೨೬॥

---

ವುದು. ಹದಿಮೂರು ಮುಖದ ರುದ್ರಾಕ್ಷಿಯು ಪಾಪನಾಶಕವಾದುದಲ್ಲದೆ ವಿಷ್ಣು ಲೋಕವನ್ನು ದೊರಕಿಸುವುದು. ॥೧೯-೨೦॥

ಹದಿನಾಲ್ಕು ವದನದ ರುದ್ರಾಕ್ಷಿಯು ಶಿವಜ್ಞಾನಪ್ರದವಾದುದು. ಆದ್ದರಿಂದ ಅದು ಧಾರಣೆಗೆ ಶ್ರೇಷ್ಠವಾದುದು. ಅದನ್ನು ಧರಿಸಿದವನು ಪಾಪಮುಕ್ತನಾಗಿ ಮೋಕ್ಷವನ್ನು ಪಡೆಯುವನು. ರುದ್ರಾಕ್ಷಿಗಳನ್ನು ಧರಿಸಿದವನು ಬ್ರಾಹ್ಮಣನಾಗಲಿ, ಚಂಡಾಲನಾಗಲಿ, ಅವನು ತಪಸ್ವಿಯೆನಿಸುವನು. ಅವನೇ ವೈದಿಕಮೂರ್ಧನ್ಯನು. ದಾನಶೂರನು ; ಮತ್ತು ಮುಕ್ತಿಪ್ರಾಪ್ತಿಗೆ ಅರ್ಹನು. ಅವನಿಗೆ ಈಶ್ವರಾನುಗ್ರಹವು ಸಂಪೂರ್ಣವಾಗಿ ಲಭಿಸುವುದು. ॥೨೧-೨೩॥

ರುದ್ರಾಕ್ಷಿಯನ್ನು ಮಾಲೆಯಾಗಿ ಪೋಣಿಸುವಾಗ ಒಂದು ರುದ್ರಾಕ್ಷಿಯು ಮತ್ತೊಂದು ರುದ್ರಾಕ್ಷಿಯ ಮುಖಕ್ಕೆ ತಗುಲುವಂತೆ ಜೋಡಿಸಿರಬೇಕು. ಇದಕ್ಕೆ ವಿರುದ್ಧವಾಗಿ ಜೋಡಿಸಿ ಪೋಣಿಸುವುದರಿಂದ ತಪೋಹಾನಿಯುಂಟಾಗುವುದು. ಇದು ಶಿವಾಜ್ಞೆ. ಇನ್ನು ಶರೀರಾವಯವಗಳಲ್ಲಿ ಧರಿಸಲು ರುದ್ರಾಕ್ಷಿಯ ಸಂಖ್ಯೆ ಈ ರೀತಿ ಇರಬೇಕು. ಕಂಠಪ್ರದೇಶದಲ್ಲಿ ಮೂವತ್ತೆರಡು, ಎರಡು ಕಿವಿಗಳಲ್ಲಿಯೂ

ಸಹಸ್ರಂ ಬಿಭೃಯಾನ್ನಿತ್ಯಂ ಮಾಲಾ ವಾ ಯಾವತೀ ಭವೇತ್ ।
ಕಂಚುಕಂ ವಾ ಯಥಾ ಜೋಷಂ ಮಕುಟಂ ಮೂರ್ಧ್ನಿ ಧಾರಯೇತ ॥ ॥೨೭॥

ಸಹಸ್ರಮಧಮಂ ಪ್ರೋಕ್ತಮಿಂದ್ರಲೋಕಪ್ರದಾಯಕಂ ।
ದಶಸಾಹಸ್ರಧೃಙ್ಮರ್ತ್ಯಃ ಸೋಮಲೋಕಮವಾಪ್ನುಯಾತ್ ॥೨೮॥

ಅಯುತಂ ಸೂರ್ಯಲೋಕಸ್ಥೋ ಲಕ್ಷೇಣ ಬ್ರಹ್ಮಲೋಕಗಃ ।
ಕೋಟಿಂ ತು ಬಿಭೃಯಾದಕ್ಷಾನ್ ಸ ಚ ವಿಷ್ಣುಸಮೋ ಭವೇತ್ ॥೨೯॥

---

ಆರು ಆರು ಇರಬೇಕು. ಪ್ರತಿ ತೋಳುಗಳಿಗೆ ಹದಿನಾರು, ಹದಿನಾರು, ಮುಂಗೈ ಮೇಲೆ ಹನ್ನೆರಡು, ಎದೆಯ ಮೇಲೆ ನೂರೆಂಟು, ಹುಬ್ಬಿನ ಮೇಲೆ (?) ತಲೆಗೂದಲಿನಲ್ಲಿ ಒಂದೊಂದು, ತಲೆಯಲ್ಲಿ ಪ್ರದಕ್ಷಿಣಾಕಾರವಾಗಿ ನಲವತ್ತೆರಡು, ಹೀಗೆ ಸಂಗ್ರಹವಾಗಿ ರುದ್ರಾಕ್ಷಿಗಳನ್ನು ಧರಿಸಬೇಕು. ॥೨೩-೨೪-೨೫-೨೬॥

(ಈ ರುದ್ರಾಕ್ಷಿ ಸಂಖ್ಯೆಯು ರುದ್ರಾಕ್ಷಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಸಂಖ್ಯೆಗಿಂತ ಕೆಲವೆಡೆ ಭಿನ್ನವಾಗಿ ತೋರುತ್ತಿದೆ)

ಒಟ್ಟಿನಲ್ಲಿ ಶರೀರದಲ್ಲಿ ಧರಿಸುವ ಎಲ್ಲಾ ಅವಯವಗಳಲ್ಲಿಯೂ ಒಟ್ಟು ರುದ್ರಾಕ್ಷಿಯ ಸಂಖ್ಯೆಯು ಸಾವಿರವಿರಬೇಕು. ಇದು ಪ್ರಶಸ್ತ. ಹಾಗೆಯೇ ರುದ್ರಾಕ್ಷಿಯ ಮಾಲೆ, ಅಂಗಿ, ಕಿರೀಟ ಇವುಗಳನ್ನೂ ಧರಿಸಬಹುದು. ಅದರಲ್ಲಿ ಸಹಸ್ರರುದ್ರಾಕ್ಷಿಗಳಿಗಿಂತಲೂ ಕಮ್ಮಿ ಧರಿಸಬಾರದು. ಅದೇ ಅಧಮವೆಂದು ಹೇಳಲ್ಪಟ್ಟಿದೆ. ಸಹಸ್ರರುದ್ರಾಕ್ಷಿಧಾರಿಗೆ ಇಂದ್ರಲೋಕಪ್ರಾಪ್ತಿಯಾಗುವುದು. ಹತ್ತುಸಾವಿರ ರುದ್ರಾಕ್ಷಿಯನ್ನು ಧರಿಸಿದವನು ಸೋಮಲೋಕವನ್ನು ಸೇರುವನು. ॥೨೭-೨೮॥

ದಶಸಹಸ್ರರುದ್ರಾಕ್ಷಿಗಳ ಧಾರಣೆಯಿಂದ ಸೂರ್ಯಲೋಕವೂ, ಲಕ್ಷಸಂಖ್ಯೆಯಿಂದ ಬ್ರಹ್ಮಲೋಕವೂ, ಕೋಟಿಸಂಖ್ಯೆಯಿಂದ ವಿಷ್ಣುತ್ವವೂ, ಅದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ರುದ್ರಾಕ್ಷಿಯನ್ನು ಧರಿಸುವುದರಿಂದ ಶಿವಸ್ವರೂಪವೂ ಲಭಿಸು

---

ವಿ. ಸೂ.—ರುದ್ರಾಕ್ಷಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಪ್ರಕಾರ, ಶಿಖೆಯಲ್ಲಿ ೧, ಶಿರಸ್ಸಿನಲ್ಲಿ ೩೦೦, ಕಂಠದಲ್ಲಿ ೩೬, ಎರಡು ತೋಳುಗಳಲ್ಲಿ ೩೨, ಎರಡು ಮುಂಗೈಗಳಲ್ಲಿ ೨೪, ಹೆಗಲಿನ ಮೇಲೆ ಬರುವ ಸರದಲ್ಲಿ ೫೦೦, ಎದೆಯ ಮೇಲಿನ ಹಾರದಲ್ಲಿ ೧೦೮, ಹೀಗೆ ಧರಿಸುವುದರಿಂದ ಒಟ್ಟು ರುದ್ರಾಕ್ಷ ಸಂಖ್ಯೆಯು ೧೦೦೧ ಆಗುವುದು. ಇಲ್ಲಿ ಹೇಳಿರುವುದು ಅಷ್ಟಾಗುವುದಿಲ್ಲ. ಆದ್ದರಿಂದಲೇ ಇದನ್ನು ಸಂಗ್ರಹವೆಂದು ತಿಳಿಯಬೇಕು

ಅನಂತಾಕ್ಷಸ್ಯ ಧರಣೇ ಶಿವ ಏವ ಭವಿಷ್ಯತಿ ।
ರುದ್ರಾಕ್ಷಮಾಲಯಾ ಜಪ್ತೋ ಮಂತ್ರೋಽನಂತ ಫಲಪ್ರದಃ ॥೩೦॥

ರುದ್ರಾಕ್ಷಧಾರಣೇ ಲಜ್ಜಾ ಯೇಷಾಮಸ್ತಿ ಸ್ವಭಾವತಃ ।
ತೇ ಸರ್ವೇ ಜಾರಜಾ ಜ್ಞೇಯಾ ಅಬ್ರಾಹ್ಮಣ್ಯಾಃ ಸದೈವ ತೇ ॥೩೧॥

ರುದ್ರಾಕ್ಷೇತಿ ವದನ್ ಮರ್ತ್ಯೋ ದಶ ಗೋದಾನಜಂ ಫಲಂ ।
ಪ್ರಾಪ್ನೋತಿ ಶಿವಸಾರೂಪ್ಯಂ ತೇನ ದೇಹೇನ ಮುಚ್ಯತೇ ॥೩೨॥

ಮೃನ್ಮಯೇನಾಪಿ ರುದ್ರಾಕ್ಷಂ ಕೃತ್ವಾ ಯತ್ನೇನ ಧಾರಯೇತ್ ।
ರುದ್ರಾಕ್ಷಧಾರಣಾದ್ರುದ್ರೋ ಭವತ್ಯೇವ ನ ಸಂಶಯಃ ॥೩೩॥

ತೇಷಾಮೇವಾತ್ಮವಿಜ್ಞಾನಂ ಯೇ ವೈ ರುದ್ರಾಕ್ಷಧಾರಿಣಃ ।
ಭಿಕ್ಷವೋಽಪಿ ಚ ರುದ್ರಾಕ್ಷಾನ್ ಧೃತ್ವಾ ಮುಕ್ತಾ ಭವಂತಿ ಹಿ ॥೩೪॥

ರುದ್ರಾಕ್ಷಮಾಲಾಭರಣಃ ಶಿವಲಿಂಗಂ ಪ್ರಪೂಜಯೇತ್ ।
ತತ್ಕೃತಾಮೇವ ತಾಂ ಪೂಜಾಂ ಗೃಹ್ಣಾತಿ ಪರಮೇಶ್ವರಃ ॥೩೫॥

---

ವುದು. ಅಲ್ಲದೆ ರುದ್ರಾಕ್ಷಿಮಾಲೆಯಿಂದ ಜಪಸಂಖ್ಯೆಯನ್ನು ಎಣಿಸುತ್ತಾ ಜಪ ಮಾಡಿದವನಿಗೆ ಅನಂತಪುಣ್ಯಪ್ರಾಪ್ತಿಯಾಗುವುದು. ॥೨೯-೩೦॥

ರುದ್ರಾಕ್ಷಿಧಾರಣೆಯಲ್ಲಿ ಯಾರಿಗೆ ನಾಚಿಕೆ ಹುಟ್ಟುವುದೋ ಅಂತಹವರನ್ನು ದುಷ್ಕುಲಪ್ರಸೂತರೆಂದು ತಿಳಿಯಬೇಕು. ಜಾತ್ಯಾ ಬ್ರಾಹ್ಮಣರೆನಿಸಿದ್ದರೂ ಅವರನ್ನು ಬ್ರಾಹ್ಮಣರಲ್ಲವೆಂದೇ ಭಾವಿಸಬೇಕು. ರುದ್ರಾಕ್ಷಿ ಎಂಬ ಪದದ ಪಠನದಿಂದಲೇ ಹತ್ತು ಗೋದಾನಫಲವು ಲಭಿಸುವುದು. ಆತನು ಅದೇ ದೇಹದಿಂದಲೇ ಸ್ವರ್ಗ ಸುಖವನ್ನು ಅನುಭವಿಸುವನು. ॥೩೧-೩೨॥

ವೃಕ್ಷಜನ್ಯವಾದ ರುದ್ರಾಕ್ಷಿಯು ಒಂದುವೇಳೆ ದೊರೆಯದಿದ್ದರೂ, ಮೃತ್ತಿಕೆಯಿಂದಲಾದರೂ ರುದ್ರಾಕ್ಷಿಯನ್ನು ನಿರ್ಮಿಸಿಕೊಂಡು ಧರಿಸಿಕೊಳ್ಳಬಹುದು. ರುದ್ರಾಕ್ಷಿಧಾರಣೆಯಿಂದ ಮಾನವನು ರುದ್ರಸಮನಾಗುವನು. ರುದ್ರಾಕ್ಷಿಧಾರಕನೇ ಆತ್ಮಜ್ಞಾನಸಂಪಾದನೆಗೆ ಅರ್ಹನು. ಭಿಕ್ಷುಕರಾಗಿದ್ದರೂ, ಅವರು ರುದ್ರಾಕ್ಷಿಯನ್ನು ಧರಿಸಿಕೊಳ್ಳುವುದರಿಂದ ಮುಕ್ತರಾಗುವರು. ॥೩೩-೩೪॥

ಶಿವಲಿಂಗವನ್ನು ಪೂಜಿಸುವವನು ರುದ್ರಾಕ್ಷಿಯನ್ನು ಧರಿಸಿರಲೇಬೇಕು.

ಅರುದ್ರಾಕ್ಷಕೃತಾಂ ಪೂಜಾಂ ನ ಗೃಹ್ಣಾತಿ ಮಹೇಶ್ವರಃ ।
ಯೋ ಭಸ್ಮಧಾರೀ ನಿಯತಂ ಸ ರುದ್ರಾಕ್ಷಧರೋ ಭವೇತ್ ॥೩೬॥

ಅನ್ಯಪುಂಡ್ರಧರಶ್ಚಾಪಿ ನ ರುದ್ರಾಕ್ಷಾಣಿ ಧಾರಯೇತ್ ।
ಪುಂಡ್ರಾಂತರಂ ಯೋ ಧೃತ್ವೈವ ರುದ್ರಾಕ್ಷಮಪಿ ಧಾರಯೇತ್ ॥೩೭॥

ಪ್ರತ್ಯುತೋ ನಾರಕೀ ಭೂಯಾದಿತಿ ಜಾಬಾಲಿಕೀ ಶ್ರುತಿಃ ॥೩೮॥

ಯೋ ರುದ್ರಾಕ್ಷೋರುಹಾರಃ ಸಿತಭಸಿತಮಹಾಪುಂಡ್ರಮಸ್ತೋರು ಬಾಹುಃ
ಸಂಪೂಜ್ಯ ಪ್ರಮಥಾಧಿನಾಥಮಜರಂ ಭಕ್ತ್ಯೋಥ ಮುಕ್ತಿಂ ಲಭೇತ್ ।
ಭೂಯಾಚ್ಛಂಕರ ಕಿಂಕರೋಽಪಿ ಸ ಮಹಾರುದ್ರಾಕ್ಷಭಸ್ಮಾಂಗಕೋ
ಮಾರಾರಾತಿಪದಾಂಬುಜಾರ್ಚನರತಃ ಕಿಂ ಕಿಂ ನ ವಿಂದೇತ್ಸಹಿ ॥೩೯॥

ಯೋ ರುದ್ರಾಕ್ಷೋರುವಕ್ಷಾಃ ಸಿತಭಸಿತಲಸತ್ಫಾಲಬಾಹ್ವಕ್ಷಿಮೂಲೋ
ಲೀಲಾ ಶೀಲಾ ಹಿ ಫಾಲಜ್ವಲದನಲ ಕುಲವ್ಯಾಲಮಾಲಾತ್ತಶೂಲಂ ।

---

ಹಾಗೆ ರುದ್ರಾಕ್ಷಿಯನ್ನು ಧರಿಸದೆ ಮಾಡುವ ಪೂಜೆಯನ್ನು ಪರಶಿವನು ಸ್ವೀಕರಿಸಲಾರನು. ರುದ್ರಾಕ್ಷಧಾರಕನ ಪೂಜೆಯೇ ಶಿವತೃಪ್ತಿಕರವಾದುದು. ಯಾವನು ಭಸ್ಮವನ್ನು ಧರಿಸುವನೋ ಅವನು ರುದ್ರಾಕ್ಷಿಯನ್ನು ಧರಿಸಿರಲೇಬೇಕು.॥೩೫-೩೬॥

ಭಸ್ಮವನ್ನು ಬಿಟ್ಟು ಇತರ ವಸ್ತುಗಳಿಂದ ಪುಂಡ್ರವನ್ನು ಧರಿಸುವವನು ರುದ್ರಾಕ್ಷಿಯನ್ನು ಧರಿಸಬಾರದು. ಅದರಿಂದ ಆತನು ಸುಖಹೊಂದುವುದಕ್ಕೆ ಬದಲು ನರಕವನ್ನು ಸೇರುವನು. ಎಂದು ಜಾಬಾಲಿಕೋಪನಿಷತ್ತಿನಲ್ಲಿ ಉಕ್ತವಾಗಿದೆ. ॥೩೭-೩೮॥

ರುದ್ರಾಕ್ಷಿಯ ಸರವನ್ನು ಧರಿಸಿ, ಭಸ್ಮಲಿಪ್ತಗಾತ್ರನಾಗಿ, ಭಸ್ಮತ್ರಿಪುಂಡ್ರದಿಂದ ರಂಜಿಸುತ್ತಾ, ಪ್ರಮಥಾಧಿಪತಿಯೂ, ದೇವಾದಿದೇವನೂ, ಜರಾಮರಣವರ್ಜಿತನೂ ಆದ ಪರಮೇಶ್ವರನನ್ನು ಯಾರು ಭಕ್ತಿಯಿಂದ ಅರ್ಚಿಸುವರೋ, ಅಂತಹವರು ಅನಾಯಾಸವಾಗಿ ಶಾಶ್ವತಮೋಕ್ಷಸುಖವನ್ನು ಪಡೆಯುವರು. ಹಾಗೆ ಯಾರು ಶಿವಾರ್ಚನೆಮಾಡಿ ಶಿವಕಿಂಕರರೆನಿಸಿ, ಶಿವಪ್ರೀತಿಯನ್ನು ಸಂಪಾದಿಸುವರೋ, ಅಂತಹವರಿಗೆ ದುರ್ಲಭವಾದ ವಸ್ತುವು ಪ್ರಪಂಚದಲ್ಲಿ ಯಾವುದಿರುವುದು? ॥೩೯॥

ರುದ್ರಾಕ್ಷಿಯ ಸರವನ್ನು ಎದೆಯಲ್ಲಿಯೂ, ಭಸ್ಮತ್ರಿಪುಂಡ್ರವನ್ನು ಹಣೆ, ತೋಳು, ಕಣ್ಣಿನ ಪಕ್ಕ ಮುಂತಾದ ಸ್ಥಳಗಳಲ್ಲಿಯೂ ಧರಿಸಿಕೊಂಡು, ಸದ್ಗತಿಪ್ರದ

ಧ್ಯಾಯನ್ ಬುದ್ಧ್ಯಾನಿಶಂ ಧ್ಯಾಯತಿ ಗತಿದಹೃದಾ ಧನ್ಯಮಾನ್ಯೋರುಮಲ್ಪಂ
ಲೋಕಾಧ್ಯಕ್ಷಾನುಶಿಕ್ಷಾಕ್ಷಪಿತ ಕಲುಷಧೀರ್ಮುಕ್ತಯೇ ಶಾಂಭವೋ ಯಃ
॥೪೦॥

ಇತಿ ಶ್ರೀಶಿವರಹಸ್ಯೇ ಅಷ್ಟಮಾಂಶೇ ಏಕಾದಶೋಽಧ್ಯಾಯಃ

---

ನಾಗಿಯೂ, ನಾಗಾಭರಣನಾಗಿಯೂ, ಅಗ್ನಿನೇತ್ರನಾಗಿಯೂ, ತ್ರಿಶೂಲಧಾರಿಯಾಗಿಯೂ ಇರುವ ಮಹಾದೇವನನ್ನು ದೃಢಭಕ್ತಿಯಿಂದ ಪೂಜಿಸಿದ ಶಾಂಭವನು ಅಸದೃಶವಾದ ಆತ್ಮಜ್ಞಾನವನ್ನು ಸಂಪಾದಿಸಿ, ಅದರಿಂದ ಚಿತ್ತಶುದ್ಧಿಯನ್ನು ಪಡೆದು ಸ್ಥಿರಮುಕ್ತಿಯನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ. ಎಂದು ಕಶ್ಯಪ ಮಹರ್ಷಿಗಳು ಪುತ್ರನಾದ ಗರುಡನಿಗೆ ರುದ್ರಾಕ್ಷಿಧಾರಣೆಯ ಪ್ರಭಾವವನ್ನು ವಿವರಿಸಿ ಹೇಳಿದರು. ॥೪೦॥

ಇಲ್ಲಿಗೆ ಶ್ರೀಶಿವರಹಸ್ಯದ ಎಂಟನೆಯ ಅಂಶದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ದ್ವಾದಶೋಽಧ್ಯಾಯಃ

॥ ಮುನಿರುವಾಚ ॥

ಶ್ರೀರುದ್ರಮಂತ್ರಾನ್ ಪ್ರಜಪೇನ್ನಿಯತಂ ಭಸ್ಮಧಾರ್ಯಪಿ ।
ರುದ್ರಮಂತ್ರಂ ಜಪನ್ವಿಪ್ರೋ ಧ್ಯಾಯೇದ್ದೇವಮುಮಾಪತಿಂ ॥೧॥

ವೇದಾನಾಂ ಮಧ್ಯಗಂ ಸಾಕ್ಷಾದ್ಯಜುಷಾಂ ಮಧ್ಯಗಂ ಪರಂ ।
ಶತಶಾಖಾಗತಂ ತ್ವೇತದ್ರುದ್ರಮಂತ್ರಂ ಶಿವಪ್ರಿಯಂ ॥೨॥

ರುದ್ರಪ್ರಿಯಕರಂ ಸಾಕ್ಷಾದ್ರುದ್ರಮಂತ್ರಂ ಶ್ರುತಿಶ್ರುತಂ ।
ರುದ್ರಾಧ್ಯಾಯಾರ್ಥವಿಜ್ಞಾನೀ ಪದಾರ್ಥಜ್ಞಾನವಾನ್ನರಃ ॥೩॥

---

### ಹನ್ನೆರಡನೆಯ ಅಧ್ಯಾಯ

ಕಶ್ಯಪಮಹರ್ಷಿಯು ಪುತ್ರನಾದ ಗರುಡನಿಗೆ ರುದ್ರಮಂತ್ರಮಹಿಮೆಯನ್ನು ವಿವರಿಸತೊಡಗಿದನು. ಶ್ರೀರುದ್ರಾಧ್ಯಾಯಗತವಾದ ಮಂತ್ರಗಳನ್ನು ಭಸ್ಮಧಾರಿಯಾಗಿ ಸರ್ವದಾ ಜಪಿಸಬೇಕು. ಅದು ಶಿವಾನುಗ್ರಹಪ್ರದವಾದುದು. ಈ ರುದ್ರಮಂತ್ರವು ವೇದಮಧ್ಯದಲ್ಲಿ ಯಜುರ್ವೇದಾಂತಃಪಾತಿಯಾಗಿ, ಶತಶಾಖಾಸಹಿತವಾಗಿದೆ. ॥೧-೨॥

ರುದ್ರಮಂತ್ರವು ಶ್ರೀ ರುದ್ರಪ್ರೀತಿಕರವಾದುದು ಮತ್ತು ಶ್ರುತಿಯಲ್ಲಿ ಶ್ರೇಷ್ಠವಾದುದೆಂದು ಉಕ್ತವಾಗಿದೆ. ರುದ್ರಾಧ್ಯಾಯದ ಅರ್ಥವನ್ನು ತಿಳಿದವನು ನಿಜವಾಗಿಯೂ ಪದಾರ್ಥಗಳ ನಿಜಸ್ವರೂಪವನ್ನು ಅರಿಯಬಲ್ಲನು. ಶಿವನನ್ನು ಧ್ಯಾನಿಸ

ನಮೋಂತೇನ ಶಿವಂ ಧ್ಯಾಯಂತ್ಸರ್ವಪಾಪೈಃ ಪ್ರಮುಚ್ಯತೇ ।
ನಮೋಂತೇನ ಚ ತದ್ರೂಪಧಾರಿಣಂ ಶಿವಮೇವ ಹಿ ॥೪॥

ಧ್ಯಾಯೇನ್ಮಹೇಶಂ ತದ್ರೂಪಂ ಪತೀನಾಂ ಪರಮೇಶ್ವರಂ ।
ಸರ್ವೇಷಾಮಪ್ಯುಮಾಕಾಂತಂ ನಿತಾಂತಂ ಶಾಂತಮವ್ಯಯಂ ॥೫॥

ರುದ್ರಮಧ್ಯಗತೈರ್ಮಂತ್ರೈರ್ನಮೋಂತೈರುಭಯೋರಪಿ ।
ಏಕದ್ವಿಶೋ ನಮಸ್ಕಾರೈರ್ಧ್ಯಾಯೇದ್ದೇವಂ ಪಿನಾಕಿನಂ ॥೬॥

ಸರ್ವದೇವಾಧಿದೇವೇಶಂ ವಿಶ್ವೇಶಂ ರುದ್ರಸೂಕ್ತತಃ ।
ಧ್ಯಾಯನ್ ಮಂತ್ರಾನ್ ಜಪೇದ್ರುದ್ರಾನ್ ತತ್ತದರ್ಥಾವಬೋಧತಃ ॥೭॥

ಶ್ರೀರುದ್ರಮಂತ್ರಂ ಪ್ರಜಪೇದ್ಭಸ್ಮಧಾರಣಪೂರ್ವಕಂ ।
ಭಸ್ಮಧಾರ್ಯಧಿಕಾರೀ ಚ ತಥಾ ರುದ್ರಾಕ್ಷಧಾರ್ಯಪಿ ॥೮॥

ರುದ್ರಾಧ್ಯಾಯಜಪೇ ಯೋಗ್ಯಾಸ್ತ ಏವ ಭುವನೇ ದ್ವಿಜ ।
ನಾನ್ಯಪುಂಡ್ರಧರಾಸ್ಸರ್ವೇ ನಾಧಿಕಾರಿಣ ಏವ ಹಿ ॥೯॥

---

ಬೇಕಾದರೂ, ಪೂಜಿಸಬೇಕಾದರೂ ನಮಶ್ಶಬ್ದವನ್ನೇ ಅಂತವನ್ನಾಗಿ ಮಾಡಿಕೊಂಡು ಶಿವರೂಪವನ್ನರಿಯಬೇಕು. ರುದ್ರಾಧ್ಯಾಯದಲ್ಲಿ ಹಾಗೆಯೇ ಇರುವುದು. ॥೩-೪॥

ಲೋಕದಲ್ಲಿ ಒಡೆಯರೆನಿಸಿದವರಿಗೆಲ್ಲಾ ಒಡೆಯನಾಗಿರುವ ಪರಶಿವನನ್ನು ಶಾಂತರೂಪಿಯೆಂದೂ, ನಾಶರಹಿತನಾದವನೆಂದೂ ಭಾವಿಸಿ ಧ್ಯಾನಿಸಬೇಕು. ನಮಶ್ಶಬ್ದಾಂತವಾದ ರುದ್ರಮಂತ್ರಗಳಿಂದ ಪ್ರತಿಮಂತ್ರಕ್ಕೂ ಒಂದೊಂದುಸಾರಿ ನಮಸ್ಕಾರ ಕ್ರಿಯೆಯನ್ನು ಮನಸ್ಸಿನಲ್ಲಿ ಭಾವಿಸುತ್ತಾ ಮಂತ್ರಪುರಶ್ಚರಣೆಮಾಡಬೇಕು. ॥೫-೬॥

ಸರ್ವದೇವಾಧಿದೇವನೂ, ವಿಶ್ವೇಶ್ವರನೂ ಆದ ಪರಶಿವನನ್ನು ರುದ್ರಾಧ್ಯಾಯ ಮಂತ್ರಗಳಿಂದ, ಅರ್ಥಜ್ಞಾನವನ್ನು ಪಡೆದು ಅನುಸಂಧಾನಮಾಡಬೇಕು. ಭಸ್ಮ ರುದ್ರಾಕ್ಷಿಗಳನ್ನು ಧರಿಸಿಕೊಂಡಿರುವವನೇ ನಿಜವಾಗಿ ರುದ್ರಾಧ್ಯಾಯಜಪಕ್ಕೆ ಅಧಿಕಾರಿಯೆನಿಸುವನು. ॥೭-೮॥

ಭಸ್ಮತ್ರಿಪುಂಡ್ರವನ್ನಲ್ಲದೆ ಮತ್ತಾವ ಚಿಹ್ನೆಯನ್ನು ಧರಿಸುವವನೂ ರುದ್ರ ಮಂತ್ರಜಪಕ್ಕೆ ಅಧಿಕಾರಿಯಲ್ಲ. ರುದ್ರಮಂತ್ರವನ್ನು ಭಸ್ಮಧಾರಿಯಲ್ಲದವನು ಜಪಿಸುವುದರಿಂದ ಪಾಪಸಂಚಯಮಾಡಿಕೊಳ್ಳುವನು. ನಿಯಮವತ್ತಾಗಿ ರುದ್ರ

ಪ್ರತ್ಯುಕೋ ರುದ್ರಮಂತ್ರಾಂಶ್ಚ ಪ್ರಜಪನ್ ಪಾಪಭಾಗ್ಭವೇತ್ ।
ಯಸ್ತು ರುದ್ರಾನ್ ಜಪೇನ್ನಿತ್ಯಂ ಧ್ಯಾಯಮಾನೋ ಮಹೇಶ್ವರಂ ॥೧೦॥

ಸರ್ವಪಾಪವಿಶುದ್ಧಾತ್ಮಾ ಶಿವತ್ವಮುಪಗಚ್ಛತಿ ॥ ॥೧೧॥

ಸ್ತೇಯಂ ಕೃತ್ವಾ ಬ್ರಹ್ಮವಧಾಂ ಚ ಕೃತ್ವಾ
ಮದ್ಯಂ ಪೀತ್ವಾ ಗುರುದಾರಾಂಶ್ಚ ಗತ್ವಾ ।
ಭಸ್ಮಚ್ಛನ್ನೋ ಭಸ್ಮಶಯ್ಯಾಶಯಾನೋ
ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ ॥೧೨॥

ಏಕವಾರಂ ಜಪಾನ್ ರುದ್ರಂ ಪಾಪೈರ್ಮುಕ್ತೋ ಭವಿಷ್ಯತಿ ।
ದ್ವಿತೀಯವಾರಂ ಜಪ್ತ್ವೈವ ರುದ್ರಂ ಧ್ಯಾಯನ್ಮಹೇಶ್ವರಂ ॥೧೩॥

ಗಾಣಾಪತ್ಯಮವಾಪ್ನೋತಿ ಶಿವಸ್ಯ ಪರಮಾತ್ಮನಃ ।
ತೃತೀಯವಾರಂ ಪ್ರಜಪಂಛಿವೇ ಲೀಯೇತ ಸರ್ವದಾ ॥೧೪॥

ಏಕಾದಶಾನುವಾರಂ ಯೋ ರುದ್ರಮಂತ್ರಾನ್ ಜಪೇದ್ದ್ವಿಜಃ ।
ಶಂಚಮೇತ್ಯಾದಿ ಜಪನ್ ಕ್ರಮಾದೇಕಾದಶಾವೃತಂ ॥೧೫॥

---

ಮಂತ್ರಜಪದಿಂದ ಮಹೇಶ್ವರನನ್ನು ಧ್ಯಾನಮಾಡುವವನು ಸರ್ವಪಾಪಮುಕ್ತನಾಗಿ ಶಿವಸ್ವರೂಪವನ್ನೈದುವನು. ॥೯-೧೦-೧೧॥

ಕಳ್ಳತನ, ಬ್ರಹ್ಮಹತ್ಯೆ, ಮದ್ಯಪಾನ, ಗುರುದಾರಾಭಿಗಮನ, ಇವೇ ಮೊದಲಾದ ಮಹಾಪಾಪಗಳಿಂದ ಮುಕ್ತನಾಗಬಯಸುವವನು ಭಸ್ಮಶಯ್ಯೆಯಲ್ಲಿ ಮಲಗಿ, ಭಸ್ಮಲೇಪವಮಾಡಿಕೊಂಡು, ರುದ್ರಾಧ್ಯಾಯವನ್ನು ಜಪಿಸಬೇಕು. ಹಾಗೆ ಜಪಿಸಿದರೆ ಸರ್ವಪಾಪಮುಕ್ತನಾಗುವನು. ॥೧೨॥

ಒಂದುಸಾರಿ ರುದ್ರಾಧ್ಯಾಯವನ್ನು ಜಪಿಸುವುದರಿಂದ ಮಾನವರು ಪಾಪಮುಕ್ತರಾಗುವರು. ಎರಡುಸಾರಿ ಜಪಿಸುವುದರಿಂದ, ಶಿವನ ಸಮೀಪದಲ್ಲಿ ಗಾಣಾಪತ್ಯಪದವಿಯನ್ನು ಹೊಂದುವರು. ಮೂರು ಸಾರಿ ಜಪಿಸುವುದರಿಂದ ಶಿವನಲ್ಲಿಯೇ ಐಕ್ಯನಾಗುವನು. ॥೧೩-೧೪॥

ಮತ್ತು ಚಮಕಾಧ್ಯಾಯದ ಮಧ್ಯದಲ್ಲಿ ಬರುವ "ಶಂಚಮೇಮಯಶ್ಚ ಮೇ" ಎಂಬ ಅನುವಾಕವನ್ನು ಮೊದಲು ಹೇಳಿಕೊಂಡು, ಅನಂತರ ರುದ್ರಾಧ್ಯಾಯಮಂತ್ರ

ಜಪಾಲ್ಲಿಂಗೇಭಿಷೇಕೋ ವೈ ಶಂಭೋಃ ಪ್ರಿಯತಮೋ ಮತಃ ।
ವಸ್ತ್ರಪೂತೇನ ತೋಯೇನ ಅವಿಚ್ಛಿನ್ನಾಂ ಪ್ರಕಲ್ಪಯೇತ್ ॥೧೬॥

ಧಾರಾವೃತಾಂ ಪ್ರಕಲ್ಪ್ಯೇತ ಶಿವಲಿಂಗೇ ದ್ವಿಜೋತ್ತಮಃ ।
ರುದ್ರಾಧ್ಯಾಯೇಣಾಭಿಷಿಂಚೇಜ್ಜಪಾದಪ್ಯುತ್ತಮೋ ಭವೇತ್ ॥೧೭॥

ಜಪಾದ್ದಶಗುಣಃ ಪ್ರೋಕ್ತೋ ಅಭಿಷೇಕೋ ಮಹೇಶ್ವರೇ ।
ಚಂದನೈರ್ಬಿಲ್ವಪತ್ರೈಶ್ಚ ಪೂಜಯೇದಿಂದುಶೇಖರಂ ॥೧೮॥

ರುದ್ರಾಧ್ಯಾಯಾದಿನಾಮ್ನಾ ಚ ಪೂಜಯೇತ್ಪರಮೇಶ್ವರಂ ।
ರುದ್ರೈಃ ಸ್ತುವೀತ ದೇವೇಶಂ ಸಾಂಬಂ ಸಂಸಾರಭೇಷಜಂ ॥೧೯॥

ಸ್ತುತ್ವಾ ರುದ್ರೈರ್ಮಹಾದೇವಸನ್ನಿಧೌ ಗಣಪೋ ಭವೇತ್ ।
ರುದ್ರೈರ್ಹೋಮಂ ಪ್ರಕುರ್ವೀತ ಚರುಣಾ ಮಧುಸರ್ಪಿಷಾ ॥೨೦॥

---

ವನ್ನು ಹನ್ನೊಂದುಸಾರಿ ಪಠಿಸುತ್ತಾ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ಈ ಅಭಿಷೇಕವು ಕೇವಲ ಜಪಕ್ಕಿಂತ ಹೆಚ್ಚಾಗಿ ಶಿವಪ್ರೀತಿಕರವಾಗುವುದು. ಅಭಿಷೇಕದಲ್ಲಿ ವಸ್ತ್ರದಿಂದ ಸೋಸಿದ ಶುದ್ಧೋದಕವನ್ನು ಸಂತತಧಾರೆಯಿಂದ ಶಂಕರನಿಗೆ ಅಭಿಷೇಕ ಮಾಡಬೇಕು. ಇದರಿಂದ ಮಾನವನು ಶಿವಾನುಗ್ರಹವನ್ನು ಪಡೆಯುವನು. ಕೇವಲ ರುದ್ರಜಪಕ್ಕಿಂತ ಆದರಿಂದ ಶಿವಲಿಂಗಾಭಿಷೇಕಮಾಡುವುದು ಉತ್ತಮವಾದುದು. ॥೧೫-೧೬-೧೭॥

ಜಪದಿಂದ ಬರುವ ಪುಣ್ಯಕ್ಕೆ ಹತ್ತರಷ್ಟು ಪುಣ್ಯವು ಅಭಿಷೇಕದಿಂದ ಬರುವುದು ಹಾಗೆಯೇ ರುದ್ರಾಧ್ಯಾಯದಲ್ಲಿ ಬರುವ ಶಿವನಾಮಗಳಿಂದ ಚಂದನ, ಬಿಲ್ವಪತ್ರೆ ಮುಂತಾದ ಪೂಜಾಸಾಮಗ್ರಿಗಳನ್ನು ಪರಶಿವನಿಗೆ ಅರ್ಪಿಸುತ್ತಾ, ಸಂಸಾರದುಃಖ ನಾಶಕನಾದ ಪರಶಿವನನ್ನು ರುದ್ರಮಂತ್ರಗಳಿಂದಲೇ ಸ್ತೋತ್ರಮಾಡಬೇಕು. ॥೧೮-೧೯॥

ಹಾಗೆ ಶಿವನನ್ನು ಪೂಜಿಸಿದವರು ಮಹಾದೇವನ ಸನ್ನಿಧಿಯಲ್ಲಿ ಗಾಣಾಪತ್ಯ ಪದವಿಯನ್ನು ಹೊಂದುವರು. ಮನೆಯಲ್ಲಿ ಯಾವುದಾದರೂ ತೊಂದರೆಯುಂಟಾ ದಾಗ, ತನಗೆ ಅನಿಷ್ಟವೊದಗಿದಾಗ, ದೇಶಕ್ಕೆ ಉತ್ಪಾತಗಳು, ಭೂಕಂಪ, ಈತಿಬಾಧೆ ಗಳು, ಕ್ಷಾಮ, ರಾಜರಿಂದ, ಕಳ್ಳರಿಂದ, ದೇಶಕ್ಕೆ ಹಾನಿತಟ್ಟಿದಾಗ, ಪ್ರಜಾಕ್ಷಯ,

ನಾಮಭಿರ್ದೇವದೇವಸ್ಯ ಸ್ವಾಹಾಂತೈಶ್ಚ ಪೃಥಕ್ಪೃಥಕ್ ।
ಗೃಹಾರಿಷ್ಟೇ ಸ್ವಸ್ಯದೃಷ್ಟೇ ಉತ್ಪಾತಕ್ಷ್ಮಾದಿಕಂಪನೇ ॥೨೧॥

ದೇಶೋಪಸರ್ಗೇ ದುರ್ಭಿಕ್ಷೇ ರಾಜಚೋರಾದ್ಯುಪದ್ರವೇ ।
ಪ್ರಜಾಪಶುಮೃತೌ ಚಾಪಿ ಜಪಹೋಮಾರ್ಚನಂ ಚರೇತ್ ॥೨೨॥

ರುದ್ರಮಂತ್ರೈರಯುತಶೋ ಧ್ಯಾಯನ್ ದೇವಂ ಪಿನಾಕಿನಂ ।
ಬ್ರಾಹ್ಮಣೈಶ್ಶಾಂಭವೈರೇವ ಭಸ್ಮರುದ್ರಾಕ್ಷಧಾರಿಭಿಃ ॥೨೩॥

ಕಾರಯೇದ್ವಿಧಿವದ್ರಾಜಾ ಧನಾಢ್ಯೋsಪಿ ವಾಪಿ ಕಶ್ಚನ ।
ಗಾವೋ ಭೂಮಿಂ ಹಿರಣ್ಯಾದಿ ಪ್ರದೇಯಾ ಶಕ್ತಿಸಾರತಃ ॥೨೪॥

ಶಾಂಭವೇಭ್ಯಸ್ಸದಾರೇಭ್ಯಃ ತಾಪಪಾಪೈಃ ಪ್ರಮುಚ್ಯತೇ ।
ರುದ್ರಮಂತ್ರಜಪೇ ಯೋಗ್ಯಾ ಶಾಂಭವಾ ಏವ ಕೇವಲಂ ॥೨೫॥

ಅತಿರುದ್ರವಿಧಾನಂ ವಾ ಮಹಾರುದ್ರಮಥಾಪಿ ವಾ ।
ಕುರ್ಯಾತ್ಸರ್ವೋಪಸರ್ಗೇಭ್ಯೋ ನ ಭಯಂ ಜಾಯತೇ ಕ್ವಚಿತ್ ॥೨೬॥

---

ಪಶುಕ್ಷಯ ಇವು ತಲೆದೋರಿದಾಗ, ಮಾನವರು ರುದ್ರಮಂತ್ರಗಳಿಂದ ಜಪ ಹೋಮಾದಿಗಳನ್ನು ನಡೆಸಬೇಕು. ಅನ್ನ, ಜೇನುತುಪ್ಪ, ತುಪ್ಪ ಈ ದ್ರವ್ಯಗಳಿಂದ ರುದ್ರಾಧ್ಯಾಯಪ್ರೋಕ್ತವಾದ ಮಂತ್ರಗಳನ್ನುಚ್ಚರಿಸುತ್ತಾ ಹೋಮಮಾಡಬೇಕು. ||೨೦-೨೧-೨೨||

ರಾಜನಾದವನು ಅಥವಾ ಶ್ರೀಮಂತನಾದವನು ಹತ್ತುಸಾವಿರಸಾರಿ ರುದ್ರ ಮಂತ್ರಗಳಿಂದ ಪಿನಾಕಿಯಾದ ಮಹಾದೇವನನ್ನು ಧ್ಯಾನಮಾಡಬೇಕು. ಅಥವಾ ಶಾಂಭವರಾದ ಮತ್ತು ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡಿರುವ ಬ್ರಾಹ್ಮಣರಿಂದ ವಿಧಿವತ್ತಾಗಿ ಅಷ್ಟುಸಂಖ್ಯೆಯಲ್ಲಿ ರುದ್ರಮಂತ್ರವನ್ನು ಜಪಿಸುವಂತೆ ಏರ್ಪಡಿಸಬೇಕು. ಅನಂತರ ಅವರಿಗೆ ಯಥಾಶಕ್ತಿಯಾಗಿ, ಭೂಮಿ, ಗೋವು, ಸುವರ್ಣ ಮುಂತಾದುವು ಗಳನ್ನು ದಾನವಾಗಿ ಕೊಡಬೇಕು. ||೨೩-೨೪||

ಈ ರುದ್ರಮಂತ್ರವನ್ನು ಜಪಿಸುವುದಕ್ಕೆ ಶಾಂಭವರೇ ಯೋಗ್ಯರಾದವರು, ಮಹಾರುದ್ರಹೋಮ ಇವುಗಳನ್ನು ವಿಧಿವತ್ತಾಗಿ ನಡೆಸುವವರು ಸಮಸ್ತಪಾಪ

ಘೃತಧಾರಾಂ ಪಾತಯೇಚ್ಛಾವಿಚ್ಛಿನ್ನಾಂ ರುದ್ರಮಂತ್ರತಃ ।
ವಹ್ನಿಕುಂಡೇ ಶಿವಂ ಧ್ಯಾತ್ವಾ ಶಾಂಭವಾಷ್ಟೋತ್ತರೈಶ್ಶತೈಃ ॥೨೭॥

ಏಕಾದಶಾನುವೃತ್ತ್ಯೈವ ಮಂಡಲಂ ಧನಧಾನ್ಯವಾನ್ ।
ಮುಕ್ತಿಶ್ಚೈವಮುಯೋ ಭೂಯಾದಕಾಮಃ ಕಾಮವಾನ್ಯದಿ ॥೨೮॥

ಸರ್ವಾನ್ ಕಾಮಾನವಾಪ್ನೋತಿ ವತ್ಸರಾಂತೇನ ಸಂಶಯಃ ।
ಗೋಷ್ಠೇ ವಾಪಿ ನದೀತೀರೇ ರುದ್ರಕ್ಷೇತ್ರೇ ಶತೋತ್ತರಂ ॥೨೯॥

ಜಪ್ತ್ವೈತತ್ಕರ್ಮ ಕೃತ್ವಾಪಿ ಫಲಂ ವಿಂದೇದ್ದಶೋತ್ತರಂ ।
ಕ್ಷೀರಾಭಿಷೇಕಂ ಲಿಂಗೇತು ರುದ್ರಮಂತ್ರೈಸ್ಸಮಾಚರೇತ್ ॥೩೦॥

---

ಗಳಿಂದಲೂ ಮುಕ್ತರಾಗುವರು. ಸಕಲ ತೊಂದರೆಗಳಿಂದಲೂ ನಾನಾಭಯಗಳಿಂದಲೂ ದೂರವಾಗುವರು. ॥೨೫-೨೬॥

ರುದ್ರಾಧ್ಯಾಯಮಂತ್ರಗಳಿಂದ ಅವಿಚ್ಛಿನ್ನವಾಗಿ ತುಪ್ಪದ ಧಾರೆಯಿಂದ ಅಗ್ನಿ ಕುಂಡದಲ್ಲಿ ಶಿವಪ್ರೀತಿಕರವಾಗಿ ಪೂರ್ಣಾಹುತಿಕೊಡಬೇಕು. ಇದು ಅತಿರುದ್ರಾದಿ ರುದ್ರಹೋಮಗಳಲ್ಲಿ ಮಾಡುವ ವಿಧಾನ. ಸಾಮಾನ್ಯವಾಗಿ ನಡೆಸುವುದಾದರೆ ಏಕಾದಶವಾರರುದ್ರಾಭಿಷೇಕಮಾಡಿ ಶಿವಾಷ್ಟೋತ್ತರಶತನಾಮಾರ್ಚನೆ ಇವುಗಳನ್ನು ಮಾಡಬಹುದು. ಇದರಿಂದ ನಿಷ್ಕಾಮನಾದವನು ಮೋಕ್ಷವನ್ನೂ, ಕಾಮ್ಯದಿಂದ ಪೂಜೆನಡೆಸುವವನು ಧನಧಾನ್ಯಾದಿಸಂಪತ್ತನ್ನೂ ಪಡೆಯುವನು. ॥೨೭-೨೮॥

ಕಾಮ್ಯವ್ರತವನ್ನಾಗಿ ಶಿವಾರಾಧನೆಯನ್ನು ನಡೆಸುವವನಿಗೆ ಒಂದುವರ್ಷ ದೊಳಗಾಗಿ ಅವನ ಇಷ್ಟಾರ್ಥಗಳೆಲ್ಲಾ ಸಿದ್ಧಿಸುವುವು. ಈ ಕರ್ಮಗಳನ್ನು ಅಂದರೆ, ಜಪ, ಹೋಮ, ಪೂಜೆ ಇತ್ಯಾದಿಗಳನ್ನೂ, ಗೋವುಗಳನ್ನು ಕಟ್ಟುವ ಪ್ರದೇಶದ ಲ್ಲಾಗಲಿ, ನದೀತೀರ, ಅಥವಾ ಶಿವಕ್ಷೇತ್ರಗಳಲ್ಲಾಗಲಿ ನಡೆಸುವವರು ದಶಗುಣವಾದ ಅಂದರೆ ತಾವು ಅಪೇಕ್ಷಿಸಿದ ಹತ್ತರಷ್ಟು ಫಲವನ್ನು ಪಡೆಯುವರು. ಯಾರು ರುದ್ರಮಂತ್ರಗಳಿಂದ ಪರಶಿವಲಿಂಗಕ್ಕೆ ಕ್ಷೀರಾಭಿಷೇಕಮಾಡುವರೋ, ಅವರು ಮತ್ತೊಂದು ಜನ್ಮತಾಳಿ ಮಾತೃವಿನ ಎದೆಹಾಲನ್ನು ಕುಡಿಯುವ ತೊಂದರೆಯನ್ನು ಪರಿಹರಿಸಿಕೊಳ್ಳುವರು. ಅಂದರೆ ಜನ್ಮರಹಿತವಾದ ಮೋಕ್ಷವನ್ನು ಹೊಂದುವರು. ॥೨೯-೩೦॥

ನ ಭೂಯಸ್ಸ್ತನ್ಯಪೋ ಮಾತುರ್ಭವಿಷ್ಯತಿ ನ ಸಂಶಯಃ ।
ಯೋ ರುದ್ರೈರ್ವಾ ನಮಸ್ಕಾರಂ ಪ್ರದಕ್ಷಿಣಮಥಾಪಿ ವಾ ॥೩೧॥

ಕುರ್ಯಾಚ್ಛಿವಾಲಯಂ ಶಂಭೋಸ್ಸನ್ನಿಧೌ ಸ ತು ಮುಕ್ತಿಭಾಕ್ ।
ರುದ್ರಮಂತ್ರೈಸ್ತ್ರಿಕಾಲಂ ಯಃ ಸ್ತುವನ್ನರ್ತನಮಾಚರೇತ್ ॥೩೨॥

ಸ ಶಂಭೋರ್ಗಣಪೋ ಭೂಯಾದ್ವತ್ಸರೇಣ ನ ಸಂಶಯಃ ।
ಅವಿಮುಕ್ತೇ ಶಿವಕ್ಷೇತ್ರೇಷ್ವನ್ಯೇಷ್ವಪಿ ಯಥಾ ಬಲಂ ॥೩೩॥

ರುದ್ರಂ ಜಪನ್ ಪ್ರಮುಚ್ಯೇತ ಪಾಪೇಭ್ಯೋ ನಾತ್ರ ಸಂಶಯಃ ।
ಯೋ ಬಿಲ್ವಮೂಲೇ ರುದ್ರಾಂಶ್ಚ ಜಪೇದ್ಧ್ಯಾಯೇನ್ಮಹೇಶ್ವರಂ॥೩೪॥

ಸ ಕೋಟಿರುದ್ರಸಾಮ್ಯಸ್ಯ ಫಲಂ ಲಬ್ಧ್ವಾ ವಿಮುಚ್ಯತೇ ।
ಜಾಬಾಲಾ ಅಮನಂತ್ಯೇವ ಮಹಿಮಾ ರುದ್ರಜಾಪಿನಃ ॥೩೫॥

ಕಿಂ ಜಪ್ಯೇನಾಮೃತಮಿತಿ ರುದ್ರೈರೇವೇತಿ ಸಾ ಶ್ರುತಿಃ ।
ಯತಿಶ್ಚ ಪ್ರಜಪೇನ್ನಿತ್ಯಂ ವನೀ ವರ್ಣೀ ಗೃಹೀ ತಥಾ ॥೩೬॥

---

ಶಿವಾಲಯವನ್ನು ಯಾರು ರುದ್ರಮಂತ್ರಪಠನದಿಂದ ಪ್ರದಕ್ಷಿಣೆ ನಮಸ್ಕಾರ ಮಾಡುವರೋ ಅವರು ಶಿವಸನ್ನಿಧಿಯನ್ನು ಸೇರುವರು. ಯಾರು ರುದ್ರಮಂತ್ರಗಳಿಂದ ತ್ರಿಕಾಲದಲ್ಲಿಯೂ ಶಂಕರನನ್ನು ಧ್ಯಾನಿಸುತ್ತಾ ನರ್ತನಮಾಡುವರೋ, ಅವರು ಶಂಕರನ ಗಣದೇವತೆಗಳಲ್ಲಿ ಒಬ್ಬರಾಗುವರು. ಅದು ಅಷ್ಟು ಒಂದು ವರ್ಷದೊಳಗೆ ನಡೆದು ಹೋಗುವುದು. ॥೩೧-೩೨॥

ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಾಗಲಿ, ಇತರ ಯಾವ ಶಿವಕ್ಷೇತ್ರಗಳಲ್ಲಿಯಾಗಲಿ, ರುದ್ರಾಧ್ಯಾಯವನ್ನು ಜಪಿಸುವವನು ಸಕಲ ಪಾಪಗಳಿಂದಲೂ ದೂರನಾಗುವನು. ಇದರಲ್ಲಿ ಸಂಶಯವಿಲ್ಲ. ಬಿಲ್ವವೃಕ್ಷದ ಮೂಲದಲ್ಲಿ ರುದ್ರಾಧ್ಯಾಯವನ್ನು ಜಪಿಸುತ್ತಾ ಮಹೇಶ್ವರನನ್ನು ಅರ್ಚಿಸುವವನು ಕೋಟಿರುದ್ರಮಂತ್ರಜಪದ ಫಲವನ್ನು ಪಡೆಯುವನು. ॥೩೩-೩೪॥

ಜಾಬಾಲಮಹರ್ಷಿಗಳ ಶಿಷ್ಯರು ರುದ್ರವನ್ನು ಜಪಿಸಿದವರ ಮಹಿಮಾವಿಶೇಷವನ್ನು ಅತಿಯಾಗಿ ಅರಿಯುವರು. ಜಪಕ್ಕೆ ಯೋಗ್ಯವಾದ ಮಂತ್ರವೆಂದರೆ ರುದ್ರಮಂತ್ರವೆಂದೂ, ಅದರಿಂದ ದೊರೆಯುವ ಫಲವು ಅಮೃತಸದೃಶವಾದದ್ದೆಂದೂ

ಯಾವನ್ನವೋಂತಂ ತು ಯತೇರನ್ಯಸ್ತು ಗೃಹಮೇಧಿನಃ ।
ಯತ್ರ ಸ್ಥಿತೋ ರುದ್ರಜಾಪೀ ತತ್ರ ಶಂಭುಃ ಸ್ಥಿತಸ್ಸದಾ ॥೩೭॥

ತಸ್ಮೈ ವಿತ್ತಂ ಶಾಂಭವಾಯ ದತ್ತಂ ತಚ್ಛಂಭವೇ ಸದಾ ।
ಗಾಂ ಭೂಮಿಮಥ ವಾಸೋ ವಾ ಧನಂ ಧಾನ್ಯಂ ಹಿರಣ್ಯಕಂ ॥೩೮॥

ದತ್ವಾ ಶಿವಪ್ರಸಾದಸ್ಯ ಪಾತ್ರಂ ಶ್ರೀರುದ್ರಜಾಪಿನೇ ।
ಏಕವಾರಂ ಜಪನ್‌ರುದ್ರಂ ತದ್ಗ್ರಾಮೋ ಶಾಂತಿಮೃಚ್ಛತಿ ॥೩೯॥

ಗ್ರಾಮೇ ಅಸ್ಮಿನ್ನನಾತುರಮಿತಿ ಮಂತ್ರಾರ್ಥಪಾರಗಃ ।
ಶತವಾರಂ ತು ನಗರೇ ಪುರೇಽಯುತಜಪಾದ್ಭವೇತ್ ॥೪೦॥

ತತ್ರಸ್ಥಾನಾಂ ಶುಭಂ ಭೂಯಾದ್ಯತ್ರ ರುದ್ರಜಪೋ ಭವೇತ್ ।
ಕುಂಭಂ ಸಂಸ್ಪೃಶ್ಯ ಯೋ ರುದ್ರಂ ಸೋದಕಂ ಪ್ರಜಪನ್ ದ್ವಿಜಃ ॥೪೧॥

---

ಜಾಬಾಲೋಪನಿಷತ್ತಿನಲ್ಲಿ ಉಕ್ತವಾಗಿದೆ. ಈ ಮಂತ್ರವನ್ನು ಯತಿ, ವಾನಪ್ರಸ್ಥಾಶ್ರಮಿ, ಬ್ರಹ್ಮಚಾರಿ, ಗೃಹಸ್ಥ ಇವರಲ್ಲಿ ಯಾರುಬೇಕಾದರೂ ಜಪಿಸಬಹುದು. ನಮಶ್ಶಬ್ದಾಂತವಾಗಿ ಯತಿಯೂ ಅಲ್ಲಿರುವಂತೆಯೇ ಇತರರೂ ಜಪಮಾಡಬೇಕು. ಈ ರುದ್ರಮಂತ್ರವನ್ನು ಜಪಿಸುವವರಿರುವ ಕಡೆಯಲ್ಲಿಯೂ ಶಂಕರನೂ ವಾಸ ಮಾಡುತ್ತಿರುವನು. ॥೩೫-೩೬-೩೭॥

ಶಾಂಭವನೆನಿಸಿದ ಮಹಾತ್ಮನಿಗೆ ದಾನವಾಗಿ ಕೊಟ್ಟ ಗೋವು, ಭೂಮಿ, ವಸ್ತ್ರ, ಧನ, ಧಾನ್ಯ, ಹಿರಣ್ಯ ಮುಂತಾದುವುಗಳು ಸಾಕ್ಷಾಚ್ಛಂಕರನಿಗೆ ಕೊಟ್ಟಂತೆಯೇ ಆಗುವುದು. ಆದರಲ್ಲಿಯೂ ಶ್ರೀ ರುದ್ರಮಂತ್ರವನ್ನು ಜಪಿಸುವವನಿಗೆ ಕೊಟ್ಟ ಸಕಲ ದಾನದಿಂದಲೂ ಪರಶಿವನು ತುಷ್ಟನಾಗಿ, ಅವನಿಗೆ ಅನುಗ್ರಹಪ್ರದಾನ ಮಾಡುವನು. ॥೩೮-೩೯॥

ಒಂದು ಗ್ರಾಮಕ್ಕೆ ಯಾವುದಾದರೂ ಅನಿಷ್ಟವೊದಗಿದರೆ ಆಗ "ಗ್ರಾಮೇ ಅಸ್ಮಿನ್ ಅನಾತುರಂ" ಎಂಬ ರುದ್ರಮಂತ್ರದ ಅರ್ಥವನ್ನು ಅನುಸಂಧಾನ ಮಾಡುತ್ತಾ, ನೂರುಸಾರಿ, ಹತ್ತುಸಾವಿರ ಸಂಖ್ಯೆಯಲ್ಲಿ ರುದ್ರಜಪಮಾಡಿದರೆ ಆ ಊರಿಗೂ, ಆ ಊರಿನ ಜನರಿಗೂ ಸಕಲ ಉಪದ್ರವಗಳೂ ನಾಶವಾಗಿ ಸುಖಶಾಂತಿಗಳೊದಗುವುವು. ॥೪೦-೪೧॥

ಸ್ನಾಪಯೀತ ಚ ರೋಗಾರ್ತಂ ರೋಗೀ ರೋಗೈಃ ಪ್ರಮುಚ್ಯತೇ ।
ವಂಧ್ಯಾ ಕುಮಾರಂ ಸೂತೇ ಜಾತೀವ ಪ್ರೇಮಾಸ್ಪದಂ ಸ್ಥಿರಂ ॥೪೨॥

ಏವಂ ರಹಸ್ಯಮನಘಂ ಶತರುದ್ರಮಂತ್ರ
ಜಪ್ಯಾಭಿಷೇಕನಿಯಮೈಃ ಶಿವಪೂಜನೇನ ।
ತಸ್ಮೈ ಪ್ರಸೀದತಿ ಸದಾ ಶಶಿಖಂಡಮೌಳಿ
ರಾಖಂಡಲಾಜಹರಿವಂದಿತಪಾದಪದ್ಮಃ ॥೪೩॥

ರುದ್ರಾಧ್ಯಾಯಜಪಾನುರಕ್ತಹೃದಯೋ ರುದ್ರಾಕ್ಷಭಸ್ಮಾದರೋ ।
ಜಪ್ತ್ವಾವಾಪ್ಯಭಿಷಿಚ್ಯ ವಾ ಶಶಿಮಹಾಚೂಡೋರುಲಿಂಗೇ ಸದಾ ।
ಮೂಢೋ ವಾಪ್ಯಥ ಪಂಡಿತೋ ಯತಿವರೋ ಭೂಯಾಚ್ಛಿವಾಗ್ರೇಸರೋ ।
ವಿಷ್ಣುಬ್ರಹ್ಮಮರುದ್ಗಣಾರ್ಚಿತಪದೋ ನಂದೀಶತುಲ್ಯೋ ಗಣಃ ॥೪೪॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ರುದ್ರಾಧ್ಯಾಯ
ಮಹಿಮಾವರ್ಣನಂ ನಾಮ ದ್ವಾದಶೋಽಧ್ಯಾಯಃ

---

ರೋಗದಿಂದ ಪೀಡಿತರಾದವರು, ರುದ್ರಮಂತ್ರಾಭಿಮಂತ್ರಿತವಾದ ಕಲಶೋದಕದಿಂದ ಸ್ನಾನಮಾಡಿದುದೇ ಆದರೆ, ಅವರ ರೋಗಾದ್ಯುಪದ್ರವಗಳೆಲ್ಲಾ ನಾಶವಾಗುವುವು. ಹಾಗೆಯೇ ಪುತ್ರವತಿಯಲ್ಲದವಳು ಆ ರುದ್ರಮಂತ್ರಪೂತವಾದ ಉದಕದಿಂದ ಸ್ನಾನಮಾಡಿದರೆ ಸುಪುತ್ರನನ್ನು ಪಡೆಯುವಳು. ಎಲೈ ಗರುಡನೇ, ಇದು ರಹಸ್ಯವಾದುದು. ಬ್ರಹ್ಮ, ವಿಷ್ಣು, ದೇವೇಂದ್ರ ಇವರೇ ಮೊದಲಾದವರಿಂದ ಪೂಜಿತನಾದ ಪರಶಿವನು, ಯಾರು ರುದ್ರಮಂತ್ರಜಪ, ರುದ್ರಮಂತ್ರಾರಾಧನೆ, ಅಭಿಷೇಕ ಇವುಗಳಿಂದ ತನ್ನನ್ನು ತೃಪ್ತಿಪಡಿಸುವರೋ, ಅಂತಹವರಿಗೆ ಪರಶಿವನು ಸಕಲ ಇಷ್ಟಾರ್ಥಗಳನ್ನೂ ಒದಗಿಸುವನಲ್ಲದೆ ತನ್ನ ಸಾನ್ನಿಧ್ಯವನ್ನು ಅನುಗ್ರಹಿಸುವನು. ॥೪೨-೪೩॥

ರುದ್ರಾಧ್ಯಾಯಮಂತ್ರವನ್ನು ಜಪಿಸುತ್ತಾ, ಭಸ್ಮತ್ರಿಪುಂಡ್ರದಿಂದಲೂ, ರುದ್ರಾಕ್ಷಿಮಾಲೆಯಿಂದಲೂ ಅಲಂಕೃತನಾಗಿ, ಚಂದ್ರಚೂಡನೆನಿಸಿದ ಮಹಾದೇವನನ್ನು ಅವಿಚ್ಛಿನ್ನವಾದ ಭಕ್ತಿಯಿಂದ ಶಿವಲಿಂಗದಲ್ಲಿ ಅಭಿಷೇಕ, ಜಪ, ಆರಾಧನೆ ಮುಂತಾದವುಗಳಿಂದ ತೃಪ್ತಿಪಡಿಸುವವನು, ಮೂಢನೇ ಆಗಲಿ, ಪಂಡಿತನೇ ಆಗಲಿ,

ಸಂನ್ಯಾಸಿಶ್ರೇಷ್ಠನೇ ಆಗಲಿ, ಅವನು ಶೈವಗಣದಲ್ಲಿ ಮುಂದಾಳಾಗಿ, ಶಿವಸನ್ನಿಧಿಯಲ್ಲಿ ಪ್ರಕಾಶಿಸುವನು. ಅಲ್ಲದೆ ವಿಷ್ಣು, ಬ್ರಹ್ಮ, ಮರುದ್ಗಣಗಳು ಇವರಿಂದಲೂ ಪೂಜಿತನಾಗಿ, ಸಾಕ್ಷಾನ್ನಂದೀಶ್ವರನಿಗೆ ಸಮನೆನಿಸಿ, ಖ್ಯಾತಿಪಡೆಯುವವನು ಇದು ನಿಜ. ಇದರಲ್ಲಿ ಸಂಶಯಪಡಬೇಡ ಹೀಗೆಂದು ಕಶ್ಯಪಮಹರ್ಷಿಯು ತನ್ನ ಪುತ್ರನಾದ ಗರುಡನಿಗೆ ಶಿವಧರ್ಮವನ್ನು ವಿವರಿಸಿದನು. ॥೪೪॥

ಇಲ್ಲಿಗೆ ಶ್ರೀಶಿವರಹಸ್ಯದ ಎಂಟನೆಯ ಅಂಶದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ತ್ರಯೋದಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಶ್ರೀಬಿಲ್ವಾರಾಧನಸ್ಯಾಪಿ ಮಹಿಮಾಂ ತೇ ವದಾಮ್ಯಹಂ ।
ಶೃಣುಷ್ವ ಸಾವಧಾನೇನ ಪ್ರಸಾದಪ್ರದಮೀಶಿತುಃ ॥೧॥

ಬಿಲ್ವಃ ಪೂರ್ವಂ ಶಿವೇನೈವ ಮನಸಾ ಕಲ್ಪಿತಸ್ತರುಃ ।
ಸಂಸಾರಸಾಗರೋತ್ತಾರಹೇತವೇ ಪತ್ರಪೂಜನೈಃ ॥೨॥

ಪಾಪತಾಪವಿನಾಶಾಯ ಕೈಲಾಸಾಚಲಗೋ ಹರಃ ।
ಸಮಾನೀಯಾಥ ಭೂಭಾಗೇ ಸ್ಥಾಪಯಾಮಾಸ ಲೀಲಯಾ ॥೩॥

ತಮಾಹ ಗೌರೀ ವಿನಯಾಚ್ಛಶಿಶೇಖರಮೀಶ್ವರಂ ॥೪॥

---

## ಹದಿಮೂರನೆಯ ಅಧ್ಯಾಯ

ಕಶ್ಯಪಮಹರ್ಷಿಯು ಶಿವಧರ್ಮಾನುರಕ್ತನಾದ ತನ್ನ ಪ್ರಿಯಪುತ್ರ ಗರುಡನಿಗೆ ಶಿವಪ್ರಸಾದಜನಕವಾದ ಬಿಲ್ವಾರಾಧನಮಹಿಮೆಯನ್ನು ವಿವರಿಸತೊಡಗಿದನು. ಹಿಂದೆ ಪರಮೇಶ್ವರನು ಸಾಕ್ಷಾತ್ತಾಗಿ ತನ್ನ ಮನಸ್ಸಿನಿಂದಲೇ ಬಿಲ್ವವೃಕ್ಷವನ್ನು ಸೃಷ್ಟಿಸಿದನು. ತನ್ನ ಭಕ್ತರು ಅದರ ಪತ್ರೆಗಳಿಂದ ತನ್ನನ್ನು ಪೂಜಿಸಿ ಮುಕ್ತರಾಗಲೆಂಬುದೇ ಪರಶಿವನ ಪರಮೋದ್ದೇಶ. ॥೧-೨॥

ಕೈಲಾಸಪರ್ವತದಲ್ಲಿ ವಿಹರಿಸುತ್ತಿದ್ದ ಮಹಾದೇವನು ಒಂದು ಸಾರಿ ಬಿಲ್ವವೃಕ್ಷವನ್ನು ಭೂಲೋಕಕ್ಕೆ ತಂದು ಪಾಪಿಗಳ ಉದ್ಧಾರಕ್ಕಾಗಿ ಸ್ಥಾಪಿಸಿದನು. ಅದನ್ನು ನೋಡಿ ಗೌರೀದೇವಿಯು ಪರಮೇಶ್ವರನನ್ನು ಕುರಿತು, ಹೀಗೆ ಪ್ರಶ್ನಿಸಿದಳು.

ಆನೀತೋಽಯಂ ತರುಶ್ರೇಷ್ಠೋ ಭೂಭಾಗೇ ಕೇನ ಹೇತುನಾ ।
ತವ ಪ್ರಿಯಕರೋ ನಿತ್ಯಂ ಕೈಲಾಸೇ ಪರ್ವತೋತ್ತಮೇ ॥೫॥

ರತ್ನಾಲವಾಲಮಧ್ಯಸ್ಥೋ ತನ್ಮೂಲೇಷು ಸ್ಥಿತಂ ತ್ವಯಾ ।
ಯಥಾ ಮಯಿ ತಥಾ ಪ್ರೀತಿರ್ಬಿಲ್ವೇಽಸ್ಮಿನ್ ತವ ಶಂಕರ ॥೬॥

ಸರ್ವದಾ ಸರ್ವಕಾಲೇಷು ಮಯಾ ಸಂಪೂಜಿತೋ ಭವಾನ್ ।
ಕೈಲಾಸಮೌಲಿಲಿಂಗೇಷು ಕೈಲಾಸಾಖ್ಯೇಷು ಶಂಕರ ॥೭॥

ಇತ್ಥಂ ದೇವ್ಯಾ ವಚಶ್ಶ್ರುತ್ವಾ ಸ ಗೌರೀರಮಣೋ ಹರಃ ।
ಉವಾಚ ಸರ್ವಹಿತಕೃದ್ದೇವ್ಯಾ ಪದ್ಮಾನನಂ ಪ್ರಿಯಂ ॥೯॥

ಅಕ್ಷೈರ್ವೀಕ್ಷ್ಯಾಥ ತಾಮಾಹ ಸಂಫುಲ್ಲಮುಖಪಂಕಜಃ ॥೧೦॥

॥ ಈಶ್ವರ ಉವಾಚ ॥

ಧನ್ಯೇ ಮಾನ್ಯೇ ತ್ವಯಾ ಪೃಷ್ಟಂ ಮಮ ಮನ್ಯೇ ಮನೋರಥಂ ।
ತಚ್ಛೃಣುಷ್ವ ಮಹಾದೇವಿ ರಹಸ್ಯಮಿದಮದ್ಭುತಂ ॥೧೧॥

---

"ಮಹಾದೇವನೇ, ಈ ಬಿಲ್ವವೃಕ್ಷವನ್ನು ನಿನಗೆ ಅತ್ಯಂತ ಪ್ರಿಯವೆನಿಸಿದ ಕೈಲಾಸದಿಂದ ತಂದು ಭೂಲೋಕದಲ್ಲಿ ಇಟ್ಟೆ ಏಕೆ? ॥೩-೪-೫॥

ಆ ಬಿಲ್ವವೃಕ್ಷಕ್ಕೆ ರತ್ನಮಯವಾದ ಪಾತಿಯನ್ನು ಕಟ್ಟಿಸಿ, ಅದರ ಮಧ್ಯದಲ್ಲಿ ನೀನು ಸದಾ ನೆಲಸಿದ್ದೆಯಲ್ಲವೆ! ನನ್ನಲ್ಲಿ ತೋರಿಸುತ್ತಿದ್ದ ಪ್ರೀತಿಯನ್ನೇ ಆ ವೃಕ್ಷದಲ್ಲಿಯೂ ತೋರ್ಪಡಿಸುತ್ತಿದ್ದೆಯಷ್ಟೆ. ಸರ್ವಕಾಲದಲ್ಲಿಯೂ ನೀನು ಕೈಲಾಸ ಮೌಳಿಯಲ್ಲಿರುವ ಕೈಲಾಸೇಶ್ವರಲಿಂಗದಲ್ಲಿ ನೆಲಸಿ, ನನ್ನಿಂದ ಬಿಲ್ವಪತ್ರೆಯ ಮೂಲಕ ತೃಪ್ತಿಪಡುತ್ತಿದ್ದೆಯಲ್ಲಾ ? ॥೬-೭॥

ಆದರ ಕೋಮಲವಾದ ಮತ್ತು ಕೆಂಪಾದ ಚಿಗುರುಗಳಿಂದ ತೃಪ್ತಿಹೊಂದುತ್ತಿದ್ದ ನೀನು ಈಗ ಅದನ್ನು ಭೂಲೋಕಕ್ಕೆ ತಂದು ಸರ್ವಸುಲಭವಾಗಿ ಮಾಡಿದುದೇಕೆ ?" ಎಂದು ಪಾರ್ವತಿಯು ವಿನಯದಿಂದ ಪ್ರಾರ್ಥಿಸಲು, ಆಗ ಪರಶಿವನು ಪ್ರೀತಿಯಿಂದ ಪಾರ್ವತಿಯ ಮುಖಕಮಲವನ್ನು ನೋಡುತ್ತಾ ಸಂತೋಷದಿಂದ ಹೀಗೆಂದನು. ॥೮-೯-೧೦॥

"ಮಾನ್ಯಳಾದ ದೇವಿಯೇ, ನೀನೇ ಧನ್ಯಳು. ನನ್ನ ಮನೋಭಿಪ್ರಾಯ

ಗೋಪ್ಯಂ ಹೃದ್ಯಂ ಮನೋದಂ ಹಿ ನ ಪ್ರಕಾಶ್ಯಮಿದಂ ತ್ವಯಾ ।
ಮಮ ನೇತ್ರಸಮುದ್ಭೂತೋ ಮಾರ್ತಾಂಡಶ್ಚಂಡವಿಕ್ರಮಃ ॥೧೨॥

ಸರ್ವೇಷಾಂ ತೇಜಸೋ ರಾಶಿರೀಶಾನಾತ್ಮಕ ಏವ ಸಃ ।
ಸ ಚತುರ್ದಶಲೋಕೋತ್ಥತಮೋ ನಾಶಾಯ ಕಲ್ಪಿತಃ ॥೧೩॥

ಚಂದ್ರೋsಪ್ಯೌಷಧಿರಾಟ್ ಕ್ಲಪ್ತೋ ಮಮ ಸವ್ಯೇತರನೇತ್ರತಃ ।
ಅತಿಫಾಲತಲೋದ್ಭೂತನಯನೋ ಲೋಕದಾಹಕೃತ್ ॥೧೪॥

ನ ತು ಪಾಪವಿನಾಶಾಯ ಕಲ್ಪಿತಃ ಕಶ್ಚನಾಮರಃ ।
ತದರ್ಥಂ ಚಿಂತಯಿತ್ವಾಹಮಸೃಕ್ಷಂ ಬಿಲ್ವಮೇವ ಹಿ ॥೧೫॥

ಮಮ ಪ್ರಿಯಕರೋ ನಿತ್ಯಂ ತರುರಾಜೋsಯಮೀಶ್ವರಿ ।
ಯಥಾ ತ್ವಯಿ ಸದಾ ಪ್ರೀತಿರ್ಬಿಲ್ವೇsಪ್ಯಸ್ಮಿನ್ ಸದಾ ಮಮ ॥೧೬॥

ಮದ್ರೂಪೋ ವೃಕ್ಷರಾಜೋsಯಂ ವೃಕ್ಷಾಣಾಂ ಪತಿರಸ್ತ್ಯಹಂ ।
ರುದ್ರಗೀತೋsಹಮೀಶೇತಿ ಪಾಪಭೇದಾಯ ಸೃಷ್ಟವಾನ್ ॥೧೭॥

---

ವನ್ನರಿತು ಈಗ ನೀನು ಪ್ರಶ್ನೆ ಮಾಡಿರುವೆ. ಅದನ್ನು ಈಗ ನಿನಗೆ ತಿಳಿಸುವೆನು ಕೇಳು. ಈಗ ನಾನು ಹೇಳುವ ವಿಷಯವು ಅತಿ ರಹಸ್ಯವಾದುದು ಮತ್ತು ಮನೋಹರವಾದದ್ದು. ಯಾರಿಗೂ ಇದನ್ನು ವಿಶೇಷವಾಗಿ ತಿಳಿಸಬೇಡ. ನನ್ನ ಬಲಗಣ್ಣಿನಿಂದ ಅಮಿತ ತೇಜಸ್ವಿಯಾದ ಮಾರ್ತಾಂಡ (ಸೂರ್ಯ) ದೇವನು ಜನಿಸಿದನು. ||೧೧-೧೨||

ಆ ಸೂರ್ಯನು ಜಗತ್ತಿನ ಸಕಲ ವಸ್ತುಪ್ರಕಾಶಕನಾಗಿ ಈಶಾನನೆಂಬ ಹೆಸರಿನಿಂದ ಹದಿನಾಲ್ಕು ಲೋಕಗಳ ಕತ್ತಲೆಯನ್ನೆಲ್ಲಾ ನಾಶಗೊಳಿಸುವ ಶಕ್ತಿಯುಳ್ಳವನಾದನು. ಹಾಗೆಯೇ ಸಕಲ ಔಷಧೀನಾಯಕನಾದ ಚಂದ್ರನು ಎಡಗಣ್ಣಿನಿಂದಲೂ ಲೋಕದಾಹಕನಾದ ಅಗ್ನಿಯು ಹಣೆಯಿಂದಲೂ ಜನಿಸಿದರು. ||೧೩-೧೪||

ಇಷ್ಟಾದರೂ. ಪಾಪನಾಶಕವಾದ ವ್ಯಕ್ತಿಯೊಂದೂ ಸೃಷ್ಟಿಸಲ್ಪಡಲಿಲ್ಲವೆಂಬ ಯೋಚನೆಯಿಂದ ನಾನು ಈ ಬಿಲ್ವವೃಕ್ಷವನ್ನು ನಿರ್ಮಾಣಮಾಡಿದೆನು. ಈ ಶ್ರೇಷ್ಠವಾದ ಬಿಲ್ವವೃಕ್ಷವು ನನಗೆ ಅತಿ ಪ್ರಿಯಕರವಾದುದು. ನಿಜವಾಗಿಯೂ ನಿನ್ನಲ್ಲಿರುವಷ್ಟು ಪ್ರೀತಿಯನ್ನೇ ಈ ವೃಕ್ಷದಲ್ಲಿಯೂ ನಾನು ಹೊಂದಿರುವೆನು. ||೧೫-೧೬||

ಸಕಲ ವೃಕ್ಷರಾಜನೆನಿಸಿದ ಈ ನನ್ನ ಸ್ವರೂಪವೇ ಈ ಬಿಲ್ವವೃಕ್ಷ. ರುದ್ರ, ಈಶ ಮುಂತಾದ ಪದಗಳಿಂದ ನನ್ನನ್ನು ಪಾಪಪರಿಹಾರಕ್ಕಾಗಿ ಧ್ಯಾನಮಾಡುವರು.

ಬಹ್ವೃಚಬ್ರಾಹ್ಮಣೇನೋಕ್ತೋ ಜ್ಯೋತಿರ್ಬಿಲ್ವೇತಿ ಪಾರ್ವತಿ ।
ಯತೋ ಮದಕ್ಷಸಂಭೂತ ಆದಿತ್ಯಸ್ಸಮಜಾಯತ ॥೧೮॥

ಬಿಲ್ವೋ ಮಮಾಕ್ಷಸಂಭೂತ ಉಭಯೋರ್ಜನಕಸ್ತ್ವಹಂ ।
ಸೋಽನೋಽಹಮೇವ ಜನಕಸ್ಸರ್ವೇಷಾಂ ಶ್ರುತಿಚೋದಿತಃ ॥೧೯॥

ಬ್ರಹ್ಮಣೋ ಜನಕಶ್ಚಾಹಂ ವಿಷ್ಣೋರಿಂದ್ರಸ್ಯ ಪಾರ್ವತಿ ।
ಮರುತೋ ಜನಿತಾ ಚಾಹಂ ದ್ಯಾವಾಪೃಥ್ವ್ಯೋರ್ಮಮೇವ ಹಿ ॥೨೦॥

ಮತ್ತೋ ಯತೋಽಭವತ್ ಬಿಲ್ವ ಆದಿತ್ಯೋಽಪಿ ಮಹೇಶ್ವರಿ ।
ವೇದೇಪಿ ಯಜುಷೋ ಭಾಗೇ ಪ್ರೋಕ್ತ ಆದಿತ್ಯಸೋದರಃ ॥೨೧॥

ತಮೋ ನಾಶಾಯ ಸೃಷ್ಟೋಽಯಮಾದಿತ್ಯಸ್ತಪತಾಂ ವರಃ ।
ಪಾಪನಾಶಾಯ ಸೃಷ್ಟೋಽಯಂ ಬಿಲ್ವೋ ಭೂತಲಮಾಶ್ರಿತಃ ॥೨೨॥

ಪಾಪಾನಾಂ ಪಾಪಿನಾಂ ಚಾಪಿ ದರ್ಶನಾರ್ಚನತಸ್ಸ್ವಯಂ ।
ಪಾಪಂ ಹರತಿ ವೃಕ್ಷೋಽಸೌ ದರ್ಶನಸ್ಪರ್ಶನಾರ್ಚನೈಃ ॥೨೩॥

---

ಋಗ್ವೇದಬ್ರಾಹ್ಮಣದಲ್ಲಿ ಜ್ಯೋತಿರ್ಬಿಲ್ವನೆಂಬ ಹೆಸರಿನಿಂದ ನನ್ನನ್ನು ಬಹಳವಾಗಿ ಸ್ತುತಿಸಿರುವರು. ಸೂರ್ಯನು ಹೇಗೆ ನನ್ನ ನೇತ್ರದಿಂದ ಉತ್ಪತ್ತಿಯಾದನೋ ಅದರಂತೆಯೇ ಈ ಬಿಲ್ವವೂ ಜನಿಸಿದೆ. ಆದ್ದರಿಂದ ಇವೆರಡಕ್ಕೂ ನಾನೇ ಜನಕನು. ॥೧೭-೧೮॥

ಅಷ್ಟಲ್ಲದೆ ಸಕಲ ವಸ್ತುಜಾಲಕ್ಕೂ ನಾನೇ ಉತ್ಪತ್ತಿಸ್ಥಾನನು. ನನ್ನಿಂದಲೇ ಬ್ರಹ್ಮ, ವಿಷ್ಣು, ಪಾರ್ವತಿ, ವಾಯು, ಭೂಮಿ, ಆಕಾಶ ಇವೆಲ್ಲವೂ ಜನಿಸಿರುವುವು. ॥೧೯-೨೦॥

ಈ ಬಿಲ್ವವೃಕ್ಷ, ಸೂರ್ಯ, ಚಂದ್ರ ಮುಂತಾದುವುಗಳೆಲ್ಲಾ ನನ್ನಿಂದಲೇ ಜನಿಸಿರುವುವು. ಈ ಬಿಲ್ವವು ಆದಿತ್ಯಸೋದರನೆಂದು ಯಜುರ್ವೇದ ಭಾಗದಲ್ಲಿ ಹೇಳಲ್ಪಟ್ಟಿದೆ. ಕತ್ತಲೆಯ ನಾಶಕ್ಕಾಗಿ ಸೂರ್ಯನನ್ನೂ, ಪಾಪನಾಶಕ್ಕಾಗಿ ಬಿಲ್ವವೃಕ್ಷವನ್ನೂ ಭೂಲೋಕದಲ್ಲಿ ಸೃಷ್ಟಿಮಾಡಿರುವೆನು. ॥೨೧-೨೨॥

ಈ ಬಿಲ್ವವೃಕ್ಷವು, ಅರ್ಚನೆಯಿಂದಲೂ, ಸ್ಪರ್ಶದಿಂದಲೂ, ದರ್ಶನದಿಂದಲೂ ಪಾಪಿಗಳ ಪಾಪವನ್ನೆಲ್ಲಾ ನಾಶಗೊಳಿಸುವುದು. ಬಿಲ್ವದಳದಲ್ಲಿರುವ ಮೂರು

ತ್ರಿದಳಂ ಬಿಲ್ವಪತ್ರಂ ಚ ತ್ರಿಗುಣಾತ್ಮಕಮೇವ ಹಿ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ವೃಕ್ಷಪತ್ರಕ್ರಮೇ ಸ್ಥಿತಾಃ ॥೨೪॥

ತಸ್ಮಾದಯಂ ವೃಕ್ಷರಾಜೋ ಮತ್ಪ್ರಿಯಃ ಪಾಪನಾಶಕಃ ।
ಸರ್ವೇಷಾಂ ಸರ್ವಪಾಪಾನಿ ನಾಶಯತ್ಯೇವ ಕೃತ್ಸ್ನಶಃ ॥೨೫॥

ಯಥಾ ತಮೋಗುಣಂ ಕೃತ್ಸ್ನಂ ನಾಶಯೇದ್ದಿವಸಸ್ಥಿತಃ ।
ತಥಾ ಭೂಮಿಗತೋ ಬಿಲ್ವಃ ಪಾಪನಾಶಾಯ ಶಂಕರಿ ॥೨೬॥

ಲೋಕಾನಾಂ ಪಾಪನಾಶಾರ್ಥಂ ಸಮಾನೀತೋ ಮಯಾಂಬಿಕೇ ।
ಕೈಲಾಸಮೌಲಿತೋ ಬಿಲ್ವಃ ಪತ್ರೇಣಾರ್ಚ್ಯಂತು ಮಾಂ ಜನಾಃ॥೨೭॥

ಇತ್ಯೇವಂ ಕೃಪಯಾ ಪಾಪಾನ್ ದೃಷ್ಟ್ವಾ ನರಕದುಃಖಿತಾನ್ ।
ಸ ಸುರಾನ್ ಮಾನವಾಂಶ್ಚಾಪಿ ಮುನೀನಪಿ ಮಹೇಶ್ವರಿ ॥೨೮॥

ಲೋಕಪಾಪಾನುತಾಪೇನ ಸಮಾನೀತೋ ಭುವಂ ಪ್ರಿಯಂ ।
ಅರ್ಚಂತಿ ಮಾಂ ಸುಕೃತಿನೋ ಬಿಲ್ವಪತ್ರೈ ಸ್ತ್ರಿಶಾಖಕೈಃ ॥೨೯॥

---

ಎಸಳುಗಳೂ, ಬ್ರಹ್ಮ ವಿಷ್ಣು ಮಹೇಶ್ವರ ರೂಪದಿಂದ ಸತ್ತ್ವರಜಸ್ತಮೋಗುಣಗಳನ್ನು ತೋರ್ಪಡಿಸುತ್ತಿವೆ. ॥೨೩-೨೪॥

ಈ ವೃಕ್ಷರಾಜನೆನಿಸಿದ ಬಿಲ್ವಮರವು ನನಗೆ ಪ್ರಿಯವಾಗಿದ್ದು, ಭಕ್ತರ ಸಕಲಪಾಪಗಳನ್ನೂ, ಪರಿಹರಿಸುತ್ತಿರುವುದು. ಸೂರ್ಯನು ಹಗಲಿನಲ್ಲಿದ್ದು ಕತ್ತಲೆಯನ್ನೆಲ್ಲಾ ಹೇಗೆ ನಿರ್ಮೂಲಗೊಳಿಸುವನೋ, ಅದೇರೀತಿ ಈ ವೃಕ್ಷವು ಭೂಲೋಕದಲ್ಲಿ ಸಮಸ್ತರ ಪಾಪರಾಶಿಯನ್ನೂ ಪರಿಹರಿಸಬಲ್ಲುದು. ॥೨೫-೨೬॥

ಲೋಕದಲ್ಲಿರುವ ಸಮಸ್ತ ಪಾಪಿಗಳ ಪಾಪಪರಿಹಾರಕ್ಕಾಗಿ ನಾನು ಬಿಲ್ವವೃಕ್ಷವನ್ನು ಕೈಲಾಸಪರ್ವತದಿಂದ ಭೂಲೋಕಕ್ಕೆ ತಂದಿರುವೆನು. ಜನರು ವಿವೇಕದಿಂದ ಬಿಲ್ವಪತ್ರೆಗಳನ್ನು ಕೊಯ್ದು ನನ್ನನ್ನು ಪೂಜಿಸಿ, ಕೃತಾರ್ಥರಾಗಲಿ ಎಂಬುದೇ ನನ್ನ ಉದ್ದೇಶ. ಅನೇಕ ಪಾಪಕರ್ಮಗಳನ್ನಾಚರಿಸಿ, ಅದನ್ನು ಪರಿಹರಿಸಿಕೊಳ್ಳಲಾರದೆ, ದೇವತೆಗಳೂ, ರಾಕ್ಷಸರೂ, ಮಾನವರೂ, ಋಷಿಗಳೂ ನರಕಭಾಗಿಗಳಾಗಿ ನರಳುತ್ತಿರುವರು. ॥೨೭-೨೮॥

ಹೀಗೆ ನನ್ನ ಅನುಗ್ರಹದಿಂದ ಭೂಲೋಕಕ್ಕೆ ಬಂದ ಬಿಲ್ವಪತ್ರೆಗಳಿಂದ

ಕೋಮಲಾರಕ್ತಕೈರ್ವಾಪಿ ಶುಷ್ಕೈಃ ಪರ್ಯುಷಿತೈರಪಿ ।
ತೇನ ಮುಕ್ತಿಂ ಪ್ರಯಾಂತ್ಯೇತೇ ಬಿಲ್ವೈರ್ಲಿಂಗಾರ್ಚನೇನ ಮೇ ॥೩೦॥

ಬಿಲ್ವಪತ್ರಾರ್ಚನಾಭಾವೇ ಮಮ ಪೂಜೈವ ನಿಷ್ಫಲಾ ।
ಸರ್ವೋಪಚಾರಕ್ಲುಪ್ತಾಪಿ ಬಿಲ್ವಪತ್ರವಿವರ್ಜಿತಾ ॥೩೧॥

ತಸ್ಮಾದ್ಬಿಲ್ವಾರ್ಚನೇನೈವ ಸರ್ವೇಷಾಂ ಮುಕ್ತಿದೋಸ್ಮ್ಯಹಂ ।
ಧನ್ಯಃ ಪೂಜಯತೇ ಬಿಲ್ವೈರ್ಧನ್ಯೋ ಮಾಮಭಿವೀಕ್ಷತಿ ॥೩೨॥

ನಾಧನ್ಯಃ ಕೀರ್ತಯೇನ್ನಾಮ ಹಿ ಪೂಜನೇ ತಸ್ಯ ಕಾ ಕಥಾ ।
ಯೋ ಬಿಲ್ವಪತ್ರಂ ಸಂಗೃಹ್ಯ ರಕ್ಷತಿ ಪ್ರೀತಮಾನಸಃ ॥೩೩॥

ಮತ್ಪೂಜಾರ್ಥಂ ಮಹಾದೇವಿ ಶುಷ್ಕಂ ಪರ್ಯುಷಿತಂ ತು ವಾ ।
ತ್ರಿಪತ್ರಮೇಕಪತ್ರಂ ವಾ ಪಾತಯೇಲ್ಲಿಂಗಮೂರ್ಧನಿ ॥೩೪॥

ತೇನ ಸ್ವವಂಶಕೋಟ್ಯೈವ ಮದಗ್ರೇ ಕ್ರೀಡತೇ ಗಣಃ ।
ಏಕೇನಾಪಿ ಚ ಬಿಲ್ವೇನ ಸಕೃತ್ಸಂಪೂಜಯೇದ್ಧಿ ಮಾಂ ॥೩೫॥

---

ಯಾರು ನನ್ನನ್ನು ಭಕ್ತಿಯಿಂದ ಅರ್ಚಿಸುವರೋ, ಅವರೇ ಸುಕೃತಿಗಳೆನಿಸುವರು. ಬಿಲ್ವಪತ್ರೆಯು ಕೋಮಲವಾಗಿ ಕೆಂಪುಚಿಗುರುಗಳುಳ್ಳದ್ದಾಗಿರಲಿ, ಒಣಗಿರಲಿ, ಬಹಳದಿನದ ಹಿಂದೆ ಕೊಯ್ದಿರಲಿ, ಹೇಗಿದ್ದರೂ ಸರಿಯೆ, ಅವುಗಳಿಂದ ಪೂಜಿತನಾದ ಮಾತ್ರಕ್ಕೆ ನಾನು ಅವರಿಗೆ ಶಾಶ್ವತವಾದ ಮುಕ್ತಿಯನ್ನು ಕರುಣಿಸುವೆನು.॥೨೯-೩೦॥

ಶಿವಾರಾಧನೆಗೆ ಬಿಲ್ವಪತ್ರೆಯಿಲ್ಲದಿದ್ದರೆ ಅದು ಸಿದ್ಧಿಸಲಾರದು. ಸಕಲೋಪಚಾರಗಳಿಂದ ಕೂಡಿದ್ದರೂ, ಬಿಲ್ವಪತ್ರೆಯಿಲ್ಲದ ಪೂಜೆಯು ವ್ಯರ್ಥವೇ ಸರಿ. ಬಿಲ್ವಾರಾಧಕರಿಗೆ ನಾನು ನಿಜವಾಗಿ ಮುಕ್ತಿಯನ್ನು ದಯಪಾಲಿಸುವೆನು. ಯಾವನು ಸುಕೃತಿಯೋ ಅವನೇ ಶಿವಲಿಂಗಕ್ಕೆ ಬಿಲ್ವಾರ್ಚನೆಮಾಡಿ, ಅನಂತರ ಶಿವಲಿಂಗವನ್ನು ದರ್ಶನಮಾಡುವನು. ॥೩೧-೩೨॥

ಸುಕೃತಿಯಲ್ಲದವನಿಗೆ ನನ್ನ ನಾಮಕೀರ್ತನೆಯೇ ಬೇಕಿಲ್ಲದಿರುವಾಗ ನನ್ನನ್ನು ಅವರು ಪೂಜಿಸುವುದು ಹೇಗೆ? ನನ್ನ ಪೂಜೆಗಾಗಿ ಬಿಲ್ವಪತ್ರೆಯನ್ನು ಕೂಡಿಟ್ಟು ರಕ್ಷಿಸುವವನು ನಿಜವಾಗಿಯೂ ಧನ್ಯನು. ಒಣಗಿದ ಅಥವಾ ಬಾಡಿದ ಬಿಲ್ವಪತ್ರೆಗಳು ಮೂರು ದಳಗಳಿಂದ ಕೂಡಿರಲಿ, ಅಥವಾ ಒಂದೇ ದಳಯುಕ್ತ

ಸ ಮುಕ್ತೋ ಮೋಚಯೇದನ್ಯಾನಿತಿ ವಿದ್ಧಿ ಮಹೇಶ್ವರಿ ।
ಸರ್ವಪುಷ್ಪಾತ್ಪ್ರಿಯತರಂ ಪತ್ರೈರ್ವಾ ಪರಮೇಶ್ವರಿ ॥೩೬॥

ಬಿಲ್ವಪತ್ರೈಸ್ಸದಾ ದೇವಿ ಯಥಾ ಪ್ರಿಯತರೋ ಗುಹಃ ।
ತಥಾ ಬಿಲ್ವಾರ್ಚನೇನೈವ ಸರ್ವೇಷಾಂ ಮುಕ್ತಿದೋಸ್ಮ್ಯಹಂ ॥೩೭॥

ಕೃತಾನಂತಮಹಾಪಾಪೋ ಪ್ಯನಾಯಾಸೇನ ಮುಚ್ಯತೇ ।
ಬಿಲ್ವಪತ್ರೈಶ್ಚ ಸಂಪೂಜ್ಯ ಮಲ್ಲಿಂಗಮಭಿವೀಕ್ಷ್ಯತೇ ॥೩೮॥

ಪ್ರಾತಸ್ಸಂಗವಮಧ್ಯಾಹ್ನೇ ಸಾಯಂ ಚಾಪಿ ಪ್ರದೋಷಕೇ ।
ಸೋಮವಾರೇ ಚತುರ್ದಶ್ಯಾಂ ಪರ್ವಸ್ವಪಿ ವಿಶೇಷತಃ ॥೩೯॥

ಬಿಲ್ವಪತ್ರೈಸ್ಸಮಭ್ಯರ್ಚ್ಯ ಸರ್ವಾಂ ಸಿದ್ಧಿಂ ಲಭೇನ್ನರಃ ।
ಮಮ ಪ್ರಿಯತರೋ ಭೂಯಾನ್ಮತ್ಪ್ರಸಾದಂ ಚ ವಿಂದತಿ ॥೪೦॥

---

ವಾಗಿರಲಿ, ಅವುಗಳಿಂದ ನನ್ನ ಶಿವಲಿಂಗದ ಶಿರೋಭಾಗವನ್ನಲಂಕರಿಸಿದವರು ನನ್ನ ಎದುರಿಗೆ ಅವನ ಕೋಟಿವಂಶದವರೊಡಗೂಡಿ ವಿಹರಿಸುವರು. ಕೊನೆಗೆ ಒಂದು ಬಿಲ್ವದಳದಿಂದ ನನ್ನನ್ನು ಅರ್ಚಿಸಿದರೂ ಅವರು ಮೋಕ್ಷವನ್ನು ಪಡೆಯುವರೆಂದು ತಿಳಿ. ॥೩೩-೩೪-೩೫॥

ಪ್ರಪಂಚದಲ್ಲಿರುವ ಎಲ್ಲಾ ಪುಷ್ಪಗಳಿಗಿಂತಲೂ, ಸಕಲ ವಿಧವಾದ ಪತ್ರೆಗಳಿಗಿಂತಲೂ, ಬಿಲ್ವಪತ್ರೆಯಲ್ಲಿ ನನಗೆ ಅಧಿಕವಾದ ಪ್ರೀತಿಯಿರುವುದು. ಕುಮಾರಸ್ವಾಮಿಯಲ್ಲಿರುವಷ್ಟು ಅಭಿಮಾನವನ್ನು ನಾನು ಈ ಬಿಲ್ವದಳದಲ್ಲಿ ತೋರ್ಪಡಿಸುವೆನು. ಅದರಿಂದಲೇ ಬಿಲ್ವಾರಾಧಕರಿಗೆ ಮೋಕ್ಷದಾತನಾಗುವೆನೆಂದು ಈಗ ನಿನಗೆ ಹೇಳಿದೆನು. ॥೩೬-೩೭॥

ಬಿಲ್ವಪತ್ರೆಯಿಂದ ಶಿವಲಿಂಗವನ್ನು ಆರಾಧಿಸಿ ದರ್ಶನಮಾಡಿ ಸಂತೋಷಪಟ್ಟವನು ಎಷ್ಟೇ ಪಾಪಿಷ್ಠನಾಗಿದ್ದರೂ, ಅನಾಯಾಸವಾಗಿ ಆ ಮಹಾಪಾಪವನ್ನೆಲ್ಲಾ ಕಳೆದುಕೊಳ್ಳುವನು. ಸೋಮವಾರ, ಚತುರ್ದಶೀ, ಪರ್ವತಿಥಿಗಳು, ಪ್ರದೋಷಕಾಲ ಮತ್ತು ಪ್ರಾತಸ್ಸಂಗವಮಧ್ಯಾಹ್ನಸಾಯಂಕಾಲಗಳಲ್ಲಿ ತಪ್ಪದೆ ಶಿವಲಿಂಗವನ್ನು ಬಿಲ್ವಪತ್ರೆಗಳಿಂದ ಅರ್ಚಿಸುವವನು ಸಕಲ ಸಿದ್ಧಿಯನ್ನೂ ಪಡೆಯುವನಲ್ಲದೆ ನನ್ನ ಅನುಗ್ರಹಕ್ಕೆ ಪಾತ್ರನಾಗಿ, ನನ್ನಿಂದ ಸಕಲ ಶುಭಫಲವನ್ನೂ ಪಡೆಯುವನು. ॥೩೮-೩೯-೪೦॥

ಸುವೃತ್ತೋ ವಾಪಿ ದುರ್ವೃತ್ತೋ ಬಿಲ್ವೈರಭ್ಯರ್ಚ್ಯ ಮಾಂ ಶಿವೇ ।
ಸ ಸರ್ವಪೂಜ್ಯೋ ಭವತಿ ಸ ತಪಸ್ವೀ ಮುನಿಸ್ಸ್ವಯಂ ॥೪೧॥

ಸರ್ವತೀರ್ಥೇಷು ಸುಸ್ನಾತಃ ಸರ್ವಯಜ್ಞೇಷು ದೀಕ್ಷಿತಃ ।
ಸ ಚ ಸರ್ವಮಹಾನಂದಕೃತ್ತಮೋ ಹೃತ್ತಮೋ ಮಮ ॥೪೨॥

ಯೋ ಬಿಲ್ವಪತ್ರಶತಕೈಃ ಸಹಸ್ರೈರಪಿ ಲಕ್ಷಕೈಃ ।
ಕೋಟಿಭಿರ್ಬಿಲ್ವಪತ್ರಾಣಾಂ ಸಮರ್ಚನಕರೋ ಭವೇತ್ ॥೪೩॥

ಸ ಏವ ಧನ್ಯೋ ಮಾನ್ಯೋ ಮೇ ಗಣೇಂದ್ರೋ ರಜತಾಚಲೇ ।
ಯೋ ಬಿಲ್ವಂ ಪೋಷಯೇದ್ಭಕ್ತ್ಯಾ ಜಲದಾನಾದಿಭಿಶ್ಶಿವೇ ॥೪೪॥

ಸ ಚ ವಂಶಯುತೋ ದೇವಿ ಮದಗ್ರೇ ಗಣಪೋ ಭವೇತ್ ।
ಬಿಲ್ವಪತ್ರೈರ್ಬಿಲ್ವಮೂಲೇ ಲಿಂಗಮಭ್ಯರ್ಚಿತಂ ಮಮ ॥೪೫॥

ತೇನ ತ್ರೈಲೋಕ್ಯಲಿಂಗಾನಿ ಪೂಜಿತಾನಿ ನ ಸಂಶಯಃ ।
ಯೋ ಬಿಲ್ವವನಕರ್ತಾರೋ ಬಿಲ್ವನಂದನ ತತ್ಪರಾಃ ॥೪೬॥

---

ಬಿಲ್ವಪತ್ರೆಗಳಿಂದ ನನ್ನನ್ನು ಅರ್ಚಿಸಿದವನು ಸದಾಚಾರಿಯೇ ಆಗಲಿ, ದುರಾಚಾರನೇ ಆಗಲಿ, ಆತನು ಸರ್ವಪೂಜ್ಯನೆನಿಸುವನು. ಆತನೇ ನಿಜವಾದ ತಪಸ್ವಿಯು. ಸಕಲ ತೀರ್ಥಸ್ನಾನ ಮಾಡಿದವನಂತೆ, ಸಕಲ ಯಜ್ಞಗಳಲ್ಲಿಯೂ ದೀಕ್ಷಿತನಾದವನಂತೆ, ಅಸದೃಶವಾದ ಸುಕೃತವನ್ನು ಆತನು ಗಳಿಸುವನು. ತನ್ನ ಮೋಹವನ್ನೆಲ್ಲಾ ಕಳೆದುಕೊಂಡು ಜ್ಞಾನಿಯೆನಿಸಿ ಬ್ರಹ್ಮಾನಂದವನ್ನು ಪಡೆಯಲು ಆತನೇ ಸಮರ್ಥನೆನಿಸುವನು. ॥೪೧-೪೨॥

ನೂರು, ಸಾವಿರ, ಲಕ್ಷ, ಕೋಟಿ ಈ ಸಂಖ್ಯೆಯಲ್ಲಿ ಬಿಲ್ವಾರ್ಚನೆ ಮಾಡಿದವನು ಪರಮಧನ್ಯನೆನಿಸಿ ಕೈಲಾಸಪರ್ವತದಲ್ಲಿ ಪ್ರಮಥಗಣಾಧಿಪನಾಗಿ ವಿಹರಿಸುವನು. ಅಲ್ಲದೆ ಯಾವನು ನೀರನ್ನು ಹೊಯ್ದು ಬಿಲ್ವವೃಕ್ಷವನ್ನು ಪೋಷಿಸುವನೋ ಅವನು ವಂಶಪರಂಪರೆಯೊಡನೆ ಕೂಡಿ ನನ್ನ ಮುಂದೆ ಗಣಾಧಿಪನಾಗಿ ವಿಹರಿಸುವನು. ॥೪೩-೪೪-೪೫॥

ಬಿಲ್ವವೃಕ್ಷದ ಬುಡದಲ್ಲಿ ಶಿವಲಿಂಗವನ್ನಿಟ್ಟು ಬಿಲ್ವಾರ್ಚನೆಯಿಂದ ಆರಾಧಿಸಿದವರು, ಮೂರುಲೋಕದ ಸಕಲ ಲಿಂಗಗಳನ್ನೂ ಪೂಜಿಸಿದಂತಾಗುವುದು.

ಬಿಲ್ವಲಿಂಗಾ ನ ಸಂಸಕ್ತಾಃ ಬಿಲ್ವದರ್ಶನತತ್ಪರಾಃ ।
ಪ್ರಾತರುತ್ಥಾಯ ಯೋ ಬಿಲ್ವಂ ಪ್ರಯಾತಿ ಪ್ರೀತಿಪೂರ್ವಕಂ ॥೪೭॥

ಸ ಕೃತಾಽನಂತಪಾಪೋಪಿ ಮುಚ್ಯತೇ ಸೋಪಿ ಮುಕ್ತಿಗಃ ।
ಭಸ್ಮ ಧೃತ್ವೈವ ಬಿಲ್ವಾನಾಂ ಸರ್ವಮೇವಂ ಸಮಾಚರೇತ್ ॥೪೮॥

ಬಿಲ್ವಯುಕ್ತಂ ವನಂ ಧನ್ಯಂ ತತ್ಸಂಗಾದ್ವೃಕ್ಷಜಾತಯಃ ।
ವಲ್ಲೀಗುಲ್ಮಾದಯಸ್ಸರ್ವೇ ಮಮ ಲೋಕೇ ವಸಂತ್ಯಪಿ ॥೪೯॥

ಸ್ಥಾವರತ್ವಂ ಪರಿತ್ಯಜ್ಯ ಭವಂತಿ ಗಣಪೋತ್ತಮಾಃ ।
ಬಿಲ್ವಸ್ಯೈವಾನುಷಂಗೇಣ ಶಾಂಭವಸ್ಯಾಂಗಸಂಗವತ್ ॥೫೦॥

ಬಿಲ್ವಪತ್ರಾರ್ಚನಕರೌ ಧನ್ಯೌ ಕಂಟಕನುನ್ನಕೌ ।
ಶಂಖಚಕ್ರಾದಿಚಿಹ್ನಾ ತೇ ಭವಂತಿ ಪೃಥಿವೀಭುಜಃ ॥೫೧॥

ಬಿಲ್ವಮೂಲೇ ಪ್ರಜಪ್ತೋ ಯೋ ಮಂತ್ರಃ ಕೋಟಿಗುಣೋ ಭವೇತ್ ।
ಶಾಂಭವಂ ಭೋಜಯೇದ್ದೇವಿ ಬಿಲ್ವಮೂಲೇ ವಿಶೇಷತಃ ॥೫೨॥

ಸ ದರಿದ್ರೋಪಿ ಸಂಪನ್ನೋ ಭವತ್ಯೇವ ನ ಸಂಶಯಃ ।
ಪಾದೌ ಪ್ರಕ್ಷಾಳ್ಯ ನತ್ವಾಥ ಭಸ್ಮಧಾರಣಪೂರ್ವಕಂ ॥೫೩॥

---

ಬಿಲ್ವವನನಿರ್ಮಾಣ, ಬಿಲ್ವನಮಸ್ಕಾರ, ಬಿಲ್ವವೃಕ್ಷಾಲಿಂಗನ, ಬಿಲ್ವದರ್ಶನ, ಪ್ರಾತಃಕಾಲದಲ್ಲಿ ಬಿಲ್ವನಮಸ್ಕಾರ ಇವುಗಳನ್ನು ನಡೆಸಿದವನು ಎಂತಹ ಪಾಪಿಯಾಗಿದ್ದರೂ ಮುಕ್ತನೆನಿಸುವನು. ಬಿಲ್ವವೃಕ್ಷಕ್ಕೆ ಏನು ಮಾಡಬೇಕಾದರೂ ಭಸ್ಮಧಾರಿಯಾಗಿಯೇ ನಡೆಸಬೇಕು. ॥೪೬-೪೭-೪೮॥

ಬಿಲ್ವವನದಲ್ಲಿ ಬೆಳೆದಿರುವ ಇತರಜಾತಿಯ ಮರಗಳೂ, ಬಳ್ಳಿ, ಪೊದರುಗಳೂ ಸಹ ಧನ್ಯವಾಗಿ, ಸ್ಥಾವರವರ್ಗದಲ್ಲಿದ್ದರೂ, ಬಿಲ್ವಸಂಸರ್ಗದಿಂದ ಜಂಗಮರಾಗಿ ಗಣಾಧಿಪರೆನಿಸಿ ನನ್ನ ಲೋಕದಲ್ಲಿ ನೆಲಸುವುವು. ಬಿಲ್ವವೃಕ್ಷದ ಸಂಬಂಧವು ಶಾಂಭವಶ್ರೇಷ್ಠನ ಸಂಸರ್ಗದಂತೆ ಸರ್ವರಿಗೂ ಮುಕ್ತಿಪ್ರದವೆನಿಸುವುದು ॥೪೯-೫೦॥

ಬಿಲ್ವಪತ್ರೆಯನ್ನು ಕೊಯ್ಯುವಾಗ ಮುಳ್ಳುಗಳಿಂದ ಕೈಯ್ಯನ್ನು ಗೀರಿಸಿಕೊಂಡರೆ ಅದು ರಾಜಚಿಹ್ನೆಯೆನಿಸಿದ ಶಂಖಚಕ್ರಾದಿ ಚಿಹ್ನೆಗಳಂತೆ ಫಲಪ್ರದಗಳಾಗುವುವು. ಬಿಲ್ವಮೂಲದಲ್ಲಿ ಕುಳಿತು ಜಪಿಸಿದ ಮಂತ್ರವು ಕೋಟಿಗುಣವಾಗಿ ಫಲ

ಮಂತ್ರಮೇನಂ ಸಮುಚ್ಚಾರ್ಯ ಬಿಲ್ವವೃಕ್ಷಂ ಸಮಾರುಹೇತ್ ।
ನಮಸ್ತೇ ಬಿಲ್ವವೃಕ್ಷಾಯ ನವಾರುಣದಳಾಯ ಚ ॥೫೪॥

ಪತ್ರಂ ತೇ ಶಿವಪೂಜಾರ್ಥಂ ಗೃಹ್ಣಾಮ್ಯದ್ಯ ಕ್ಷಮಸ್ವ ಮೇ ।
ಇತಿ ಪ್ರಾರ್ಥ್ಯ ಮಹಾವೃಕ್ಷ ಗೃಹ್ಣೀಯಾತ್ಪತ್ರಮೇವ ಹಿ ॥೫೫॥

ಉತ್ತರಾಗ್ರೇಣ ಪತ್ರೇಣ ಪೂಜನೀಯೋಽಹಮೇವ ಹಿ ।
ಕಿಂ ಪುನರ್ಬಹುನೋಕ್ತೇನ ಬಿಲ್ವಪತ್ರಂ ಮಮ ಪ್ರಿಯಂ ॥೫೬॥

॥ ಶ್ರೀ ಸ್ಕಂದ ಉವಾಚ ॥

ಇತ್ಯುಕ್ತ್ವಾ ಗಿರಿರಾಜ ರಾಜತನಯಾಮಾಲಿಂಗ್ಯ ಮೋದಾನ್ವಿತೋ
ಕೈಲಾಸೇ ವರಬಿಲ್ವಮೂಲನಿಲಯೇ ಶಾಂಗೇ ಹಿ ಲಿಂಗೇಮುದಾ ।
ತತ್ಪತ್ರೈಃ ಕುಸುಮೈಸ್ತದೀಯಮಗಜಾಕಾಂತೋಽಭಿಜಿಘ್ರಂಸ್ಥಿತೋ
ಬಿಲ್ವಾರ್ಚಾಫಲಮೇತದೇವ ಭಗವಾನ್ ಜ್ಞಾನಾತ್ಮಕಸೌ ಶಂಕರಃ ॥೫೭॥

---

ಕೊಡುವುದು ಮತ್ತು ಬಿಲ್ವವೃಕ್ಷದ ಬುಡದಲ್ಲಿ ಶಾಂಭವರಿಗೆ ಭೋಜನಾದಿಗಳಿಂದ ತೃಪ್ತಿಯನ್ನುಂಟುಮಾಡಿದರೆ ದರಿದ್ರನಾದವನು ಶ್ರೀಮಂತನಾಗುವನು. ॥೫೧-೫೨-೫೩॥

ಬಿಲ್ವವೃಕ್ಷಕ್ಕೆ ಹತ್ತಿ ದಳವನ್ನು ಕೊಯ್ಯುವಾಗ, ಮೊದಲು ಕೈಕಾಲುಗಳನ್ನು ತೊಳೆದುಕೊಂಡು, ಭಸ್ಮಧಾರಿಯಾಗಿ, "ಎಲೈ ಬಿಲ್ವವೃಕ್ಷವೇ, ವೃಕ್ಷರಾಜನೇ, ಕೋಮಲವಾದ ಮತ್ತು ಕೆಂಪಾದ ದಳಗಳುಳ್ಳವನೇ, ನಿನ್ನ ಕೋಮಲವಾದ ದಳವನ್ನು ಶಿವಾರ್ಪಣೆಮಾಡಲೋಸುಗ ಈಗ ನಿನ್ನ ಮರವನ್ನು ಹತ್ತುವೆನು. ನನ್ನ ಅಪರಾಧವನ್ನು ಕ್ಷಮಿಸು" ಎಂದು ಪ್ರಾರ್ಥಿಸುತ್ತಾ ಮರವನ್ನು ಹತ್ತಬೇಕು. ಹಾಗೂ ಮರದಲ್ಲಿ ಉತ್ತರಾಗ್ರವಾಗಿ ಕಂಡುಬರುವ ದಳಗಳನ್ನೇ ಕೊಯ್ದು ಶಿವಾರ್ಪಣೆಮಾಡಬೇಕು. ಎಲೌ ಪಾರ್ವತಿಯೇ, ಹೆಚ್ಚು ಮಾತಿನಿಂದೇನು? ಬಿಲ್ವದಳವು ನನಗೆ ಅತ್ಯಂತ ಪ್ರಿಯವಾದುದೆಂದು ತಿಳಿ" ಎಂದು ಪರಶಿವನು ಪಾರ್ವತಿಗೆ ಬಿಲ್ವಮಹಿಮೆಯನ್ನು ವಿವರಿಸಿ ಹೇಳಿದನು. ॥೫೪-೫೫-೫೬॥

ಅನಂತರ ಪರಮೇಶ್ವರನು ಪಾರ್ವತಿಯನ್ನು ಸಂತೋಷದಿಂದ ಆಲಿಂಗಿಸುತ್ತಾ ಕೈಲಾಸಶಿಖರದಲ್ಲಿರುವ ಬಿಲ್ವವೃಕ್ಷದ ಸಮೀಪಕ್ಕೆ ಹೋಗಿ, ಅಲ್ಲಿರುವ ಶಿವಲಿಂಗದ ಮೇಲೆ ಗಮಗಮಿಸುವ ಬಿಲ್ವದಳ ಮತ್ತು ಫಲಗಳ ಸುವಾಸನೆಯನ್ನು

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಬಿಲ್ವಮಹಿಮಾವರ್ಣನಂ
ನಾಮ ತ್ರಯೋದಶೋಧ್ಯಾಯಃ

---

ಆಘ್ರಾಣಿಸುತ್ತಾ ಕಾಲಕಳೆದನು. ಎಲೈ ಜೈಗೀಷವ್ಯಮಹರ್ಷಿಯೇ, ಬಿಲ್ವವೃಕ್ಷದ ಮಹಿಮೆಯು ಇಷ್ಟು ಅಮೋಘವಾದುದು. ಇದನ್ನು ಸಂಪೂರ್ಣವಾಗಿ ತಿಳಿದಿರುವವನು ಪರಶಿವನೊಬ್ಬನೇ, ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ಶಿವೋಕ್ತವಾದ ಬಿಲ್ವವೃಕ್ಷದ ಮಹಿಮೆಯನ್ನು ವಿವರಿಸಿದನು. ||೫೭||

ಇಲ್ಲಿಗೆ ಶ್ರೀ ಶಿವರಹ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಚತುರ್ದಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಶಿವಪ್ರಸಾದಪಾತ್ರಂ ಶ್ರೀ ಶಾಂಭವಃ ಕೇವಲಂ ಭವೇತ್ ।
ಶಾಂಭವಾಶ್ಶಂಭುಭಕ್ತಾ ಯೇ ಭಸ್ಮರುದ್ರಾಕ್ಷಧಾರಿಣಃ ॥೧॥

ಶಿವಲಿಂಗಾರ್ಚಕಾಶ್ಶೈವಾಃ ಶಿವೈಕಪರದೇವತಾಃ ।
ಶಿವಲಿಂಗೈಕಶರಣಾ ಮರಣೇಪಿ ಪ್ರತಿಕ್ಷಣಂ ॥೨॥

ನಾನ್ಯೇ ಸುರಾರ್ಚನರತಾಃ ಶಾಂಭವಾ ಏವ ಕೇವಲಂ ।
ಶಿವೈಕಶರಣಾ ಏವ ಮನೋವಾಕ್ಕಾಯಕರ್ಮಭಿಃ ॥೩॥

---

## ಹದಿನಾಲ್ಕನೆಯ ಅಧ್ಯಾಯ

ಕಶ್ಯಪಮಹರ್ಷಿಯು ಪುತ್ರನಾದ ಗರುಡನೊಡನೆ ಶಾಂಭವನಸ್ವರೂಪ ಮತ್ತು ಮಹಿಮೆಯನ್ನು ವಿವರಿಸತೊಡಗಿದನು :— ಸದಾಶಿವನನ್ನು ಸದಾ ಭಕ್ತಿಯಿಂದ ಧ್ಯಾನಿಸುತ್ತಾ ಭಸ್ಮರುದ್ರಾಕ್ಷಿಗಳಿಂದ ಅಲಂಕೃತರಾಗಿ, ಸದಾ ಶಿವಲಿಂಗಾರ್ಚನೆ ಶಿವಪಾರಮ್ಯ ಇವುಗಳಲ್ಲಿಯೇ ಮಗ್ನನಾಗಿ, ಮರಣಕಾಲದಲ್ಲಿಯೂ ಈಶ್ವರನನ್ನು ಮೊರೆಹೋಗುವವರೇ ಶಾಂಭವರು. ಅವರೇ ಶಿವಾನುಗ್ರಹಕ್ಕೆ ಪಾತ್ರರೆನಿಸುವರು. ॥೧-೨॥

ಶಾಂಭವರು ಎಂದೂ ಇತರದೇವತೆಗಳನ್ನು ಆರಾಧಿಸುವುದಿಲ್ಲ. ಮನಸ್ಸು, ಮಾತು, ಕ್ರಿಯೆ ಇವುಗಳಿಂದ ಸದಾ ಶಂಕರನಲ್ಲಿಯೇ ಐಕ್ಯರಾಗುವರು. ಅವರಿಗೇ

ಶಾಂಭವಾ ನ ವಿಧಾತಾರಂ ವಿಷ್ಣುಂ ವಾ ನಾ ಪರಾನ್ವರಾನ್ ।
ಮನಸಾಪಿ ನ ಮನ್ಯಂತೇ ಮನ್ವತೇ ತೃಣತುಲ್ಯತಾಂ ॥೪॥

ಶಿವಭಕ್ತಿಂ ಸಮಾಪನ್ನಾಃ ಸಂಪನ್ನಾ ಏವ ತೇ ಸದಾ ।
ದುರ್ಲಭಾ ಶಾಂಭವೀ ಭಕ್ತಿಃ ಪ್ರಸಾದಾದೇವ ಸಾ ಭವೇತ್ ॥೫॥

ಪ್ರಸಾದಃ ಶಾಂಕರಃ ಶ್ರೇಷ್ಠೋ ಭವಿಷ್ಯತಿ ಶಿವಾಜ್ಞಯಾ ।
ಭಾವನಾಂ ಭಾವನಾಂ ದೃಷ್ಟ್ವಾ ಭವಃ ಪ್ರೀತೋ ಭವಿಷ್ಯತಿ ॥೬॥

ನಾಭಾವೋ ವಿದ್ಯತೇ ತಸ್ಯ ಸದಾ ಸಂಸಾರವರ್ತಿನಃ ।
ಸಂಸಾರೋತ್ತಾರಕಾ ಏವ ಶಾಂಭವಾಶ್ಯಂಕರಾಜ್ಞಯಾ ॥೭॥

ವಿಷ್ಣುಬ್ರಹ್ಮಾದಯೋ ದೇವಾ ಮುನಯೋ ಮಾನವಾಸ್ತಥಾ ।
ಅಸುರಾಃ ಕಿನ್ನರಾ ವಾಪಿ ಸುಧಾಕರಧರಾರ್ಚಕಾಃ ॥೮॥

ತೇ ಸರ್ವೇ ಶಾಂಭವಾ ಏವ ಭಸ್ಮರುದ್ರಾಕ್ಷಧಾರಿಣಃ ।
ಶಿವೈಕಪರಾ ದೇವಾಸ್ತೇ ಸರ್ವೇ ಶಿವಚೇತಸಃ ॥೯॥

---

ಬ್ರಹ್ಮ, ವಿಷ್ಣು ಮುಂತಾದ ಯಾವದೇವತೆಗಳೂ ಮುಖ್ಯರಾಗಿ ಕಾಣುವುದಿಲ್ಲ. ಅವರೆಲ್ಲರನ್ನೂ ಶಾಂಭವರು ಹುಲ್ಲುಕಡ್ಡಿಗೆ ಸಮನಾಗಿ ಭಾವಿಸುವರು. ॥೩-೪॥

ಶಾಂಭವರಲ್ಲಿ ನಿಜವಾದ ಶಿವಭಕ್ತಿಯಿರುವುದು. ಲೋಕದಲ್ಲಿ ಎಲ್ಲರಿಗೂ ಈಶ್ವರಭಕ್ತಿಯು ಸಂಭವಿಸಲಾರದು. ಶಿವಾನುಗ್ರಹದಿಂದಲೇ ಆ ಭಕ್ತಿಯುದಯಿಸ ಬೇಕು. ಶಿವಾಜ್ಞೆಯಿಂದಲೇ ಶಾಂಕರರು ಶ್ರೇಷ್ಠರೆನಿಸಿರುವರು. ಅಂತಹ ತನ್ನ ಭಕ್ತರ ನಿಜವಾದ ಭಾವನೆಯನ್ನು ನೋಡಿ ಪರಶಿವನು ಮನಸ್ಸಿನಲ್ಲಿ ಪ್ರೀತಿ ತಾಳುವನು. ॥೫-೬॥

ಸಂಸಾರದಲ್ಲಿ ಮುಳುಗಿದ್ದರೂ ಶಾಂಭವರಿಗೆ ಈಶ್ವರಭಿನ್ನವಾದ ವಸ್ತುವೇ ಬೇರೆ ಕಂಡುಬರುವುದಿಲ್ಲ. ಶಾಂಭವರು ಶಂಕರಾಜ್ಞೆಯಿಂದ ಸುಲಭವಾಗಿ ಸಂಸಾರ ಮುಕ್ತರಾಗುವರು. ಇದನ್ನರಿತೇ ವಿಷ್ಣ್ವಾದಿಸಕಲದೇವತೆಗಳೂ ಮುನಿಗಳೂ ಮಾನ ವರೂ ರಾಕ್ಷಸರೂ, ಕಿನ್ನರರೂ ಸದಾಶಿವನನ್ನೇ ಅರ್ಚಿಸುತ್ತಿರುವರು. ॥೭-೮॥

ಅವರೆಲ್ಲರೂ ಶಾಂಭವರೇ ಆಗಿರುವರು. ಭಸ್ಮ ರುದ್ರಾಕ್ಷಿಗಳನ್ನು ಧರಿಸಿ ಸರ್ವದಾ ಶಿವಸ್ವರೂಪವನ್ನೇ ಚಿಂತಿಸುತ್ತಾ, ಶಿವನಿಗೆ ವಂದಿಸುತ್ತಾ ಮುಕ್ತಿಮಾರ್ಗ

ಶಿವಪ್ರಣಾಮಪರಮಾ ಭಕ್ತ್ಯಾ ಮುಕ್ತಿಪಥೇ ಸ್ಥಿತಾಃ ।
ಪಂಚಾಕ್ಷರಪರಾ ಏವ ಶ್ರೀರುದ್ರಾಧ್ಯಾಯಜಾಪಕಾಃ ॥೧೦॥

ಶಿವಲಿಂಗಾರ್ಚಕಾಶ್ಶೈವಾಃ ಸತತಂ ಭವಪೂಜಕಾಃ ।
ಭಾವೇನ ಭಗವತ್ಪ್ರೀತಾಃ ಭವೋದ್ಭವಪದಾರ್ಚಕಾಃ ॥೧೧॥

ಭಗವಾನೇಕ ಏವೇತಿ ಯೇ ವಿಜ್ಞಾಯಾರ್ಚಯಂತಿ ತೇ ।
ತ್ರಿಪುಂಡ್ರಭಸ್ಮನಿಟಿಲಾಃ ಸದಾ ಕೌಟಿಲ್ಯವರ್ಜಿತಾಃ ॥೧೨॥

ನಿಟಿಲಾನಲಪೂಜೈಕಪರಾ ಮುಕ್ತಿಂ ವ್ರಜಂತಿ ತೇ ।
ಶರ್ವಾರಾಧನತೋ ಹಾರಾ ವಿಷ್ಣುಬ್ರಹ್ಮಾದಿಪೂಜಿತಾಃ ॥೧೩॥

ಶಿವಮೇಕಂ ಯಜಂತ್ಯೇವ ಲಿಂಗೇ ಬಿಲ್ವಾದಿಪಲ್ಲವೈಃ ।
ಅಭಿಷಿಚ್ಯ ಸದಾ ನೀರೈಃ ಪ್ರಾತಸ್ಸಾಯಂ ವಿಶೇಷತಃ ॥೧೪॥

ಪ್ರದೋಷೇ ಸೋಮವಾರೇ ಚ ಚತುರ್ದಶ್ಯಷ್ಟಮೀಷು ಚ ।
ನಕ್ತಂ ನೈವೇದ್ಯಭೋಕ್ತಾರೋ ನಿಯಮಾಚ್ಛಂಕರಾರ್ಚಕಾಃ ॥೧೫॥

---

ವನ್ನು ಅವಲಂಬಿಸುತ್ತಿರುವರು. ಶಿವಪಂಚಾಕ್ಷರೀಮಂತ್ರವನ್ನೂ, ರುದ್ರಾಧ್ಯಾಯವನ್ನೂ ಸರ್ವದಾ ಜಪಿಸುತ್ತಿರುವರು. ॥೯-೧೦॥

ಶೈವರೆನಿಸಿದವರು ಶಿವಲಿಂಗವನ್ನೇ ಅರ್ಚಿಸುತ್ತಾ, ಶಿವಭಕ್ತಿಯನ್ನೇ ತೋರ್ಪಡಿಸುತ್ತಾ, ಶಿವಪಾದಸೇವೆ ಮಾಡುತ್ತಾ ಮಹಾದೇವನನ್ನು ತೃಪ್ತಿಗೊಳಿಸುವರು. ಅಲ್ಲದೆ ಶಿವನೊಬ್ಬನೇ ದೇವೋತ್ತಮನು ಎಂಬ ಭಾವನೆಯಿಂದ ಸದಾ ಭಸ್ಮತ್ರಿಪುಂಡ್ರ ರುದ್ರಾಕ್ಷಿಗಳಿಂದ ಅಲಂಕೃತರಾಗಿ ಕೃತ್ರಿಮಭಾವನೆಯಿಲ್ಲದೆ ಸನ್ಮಾರ್ಗದಲ್ಲಿ ಮುಂದುವರಿಯುವರು. ॥೧೧-೧೨॥

ಅಗ್ನಿನೇತ್ರಧಾರಿಯಾದ ಶಂಕರನನ್ನು ಸದಾ ಆರಾಧಿಸುತ್ತಾ ಶಾಂಭವರು ಸ್ಥಿರಮುಕ್ತಿಯನ್ನು ಸಂಪಾದಿಸುವರು. ಮತ್ತು ವಿಷ್ಣ್ವಾದಿ ದೇವತೆಗಳಿಗೂ ಪೂಜ್ಯರಾಗುವರು. ಅಂತಹ ಶೈವರೂ ತಪ್ಪದೆ ಶಿವಲಿಂಗವೊಂದನ್ನೇ ಅಭಿಷೇಕ, ಬಿಲ್ವಾರ್ಚನೆ ಮುಂತಾದವುಗಳಿಂದ ಪ್ರಾತಸ್ಸಾಯಂಕಾಲಗಳಲ್ಲಿ ಆರಾಧಿಸುತ್ತಾ ಕಾಲ ಕಳೆಯುವರು. ॥೧೩-೧೪॥

ಪ್ರದೋಷಕಾಲ, ಸೋಮವಾರ, ಚತುರ್ದಶೀ, ಅಷ್ಟಮೀ ಈ ಕಾಲಗಳಲ್ಲಿ

ನಿತ್ಯಪ್ರದೋಷನಿಯತಾ ಯತಾಹಾರಾಶ್ಶಿವಾರ್ಚಕಾಃ ।
ಭಕ್ತಾಃ ಶೈವಾ ದ್ವಿಜಾ ಏವ ಮನ್ಯೇ ವರ್ಣಾ ಅಪಿ ಕ್ರಮಾತ್ ॥೧೬॥

ಸ್ತ್ರಿಯೋ ವಾ ಸಂಕರಾ ವಾಪಿ ಪೂಜ್ಯ ಲಿಂಗಂ ಪಿನಾಕಿನಃ ।
ಶಾಂಕರಾ ಏವ ತೇ ಸರ್ವೇ ಶಿವಲಿಂಗಾರ್ಚನೋದ್ಯತಾಃ ॥೧೭॥

ಪಂಚಾಸ್ಯಲಿಂಗಂ ಪಂಚಾಸ್ಯಧ್ಯಾನಪೂರ್ವಂ ಯಜಂತಿ ತೇ ।
ಬಿಲ್ವಾಂಬುಜೈಸ್ಸಮಭ್ಯರ್ಚ್ಯ ಪ್ರಾತಸ್ಸಾಯಂ ವಿಶೇಷತಃ ॥೧೮॥

ಹಾರಾ ದಾರಿತಪಾಪೌಘಾ ಅನೋಘಾಃ ಶಂಕರಾರ್ಚಕಾಃ ।
ಪಂಚಾಕ್ಷರೇಣ ಯೋ ಲಿಂಗಂ ಬಿಲ್ವೈರಭ್ಯರ್ಚ್ಯ ಶೂಲಿನಃ ॥೧೯॥

ಪಂಚತ್ವಂ ಪ್ರಾಪ್ನುಯಾಜ್ಞಾತು ಪಂಚಪಾಪೈಃ ಪ್ರಮುಚ್ಯತೇ ।
ಶಾಂಭವಾ ಏವ ಸಂಪೂಜ್ಯಾಃ ಶಿವಾರ್ಚನಪರಾಯಣಾಃ ॥೨೦॥

---

ಶಿವಾರಾಧನೆ ಮಾಡುತ್ತಾ, ನಕ್ತವ್ರತದಿಂದ (ರಾತ್ರಿ ಶಿವಾರ್ಚನೆ ಮಾಡಿ ಊಟ ಮಾಡುವುದು. ಹಗಲು ಉಪವಾಸವಿರುವುದು) ಪರಶಿವನನ್ನು ಅರ್ಚಿಸುತ್ತಾ ಶೈವರು ಕಾಲ ಕಳೆಯುವರು. ಅಲ್ಲದೆ ನಿತ್ಯದಲ್ಲೂ ಪ್ರದೋಷಕಾಲದಲ್ಲಿ, ಆಹಾರನಿಯಮದಿಂದಿದ್ದು, ಶಿವಾರ್ಚನೆ ಮಾಡಿ ಕಾಲ ಕಳೆಯುವವರೇ ಶೈವದ್ವಿಜರೆಂದು ತಿಳಿಯಬೇಕು. ॥೧೫-೧೬॥

ಸ್ತ್ರೀಯರಾಗಲಿ, ಸಂಕರಜಾತಿಯವರೇ ಆಗಲಿ ಶಿವಲಿಂಗವನ್ನು ಪೂಜಿಸಿ ಶಾಂಕರರೆನಿಸಿ ಪರಮಪವಿತ್ರರೆನಿಸುವರು. ಪಂಚಮುಖಗಳಿಂದ ರಂಜಿಸುವ ಪರಶಿವನ ಪಂಚಮುಖಗಳನ್ನೂ ಸದ್ಯೋಜಾತಾದಿ ಪಂಚಾಸ್ಯಮಂತ್ರಗಳಿಂದ ಬಿಲ್ವಪತ್ರೆಗಳಿಂದಲೂ, ಕಮಲಗಳಿಂದಲೂ ಪೂಜಿಸಿ ಪ್ರಾತಸ್ಸಾಯಂಕಾಲಗಳಲ್ಲಿ ಶಂಕರನನ್ನು ತೃಪ್ತಿಪಡಿಸುವವರು ನಿಜವಾದ ಶಾಂಭವರೆನಿಸುವರು. ॥೧೭-೧೮॥

ಈಶ್ವರಪೂಜಕರು ಸಮಸ್ತ ಪಾಪವರ್ಜಿತರಾಗಿ ಪೂಜ್ಯರೆನಿಸುವರು. ಪಂಚಾಕ್ಷರಮಂತ್ರದಿಂದ ಶೂಲಿಯಾದ ಪರಶಿವನನ್ನು ಪೂಜಿಸಿದವರು ಪಂಚಮಹಾಪಾಪಗಳಿಂದಲೂ ಬಿಡುಗಡೆ ಹೊಂದಿ, ಈ ಸಂಸಾರದುಃಖದಿಂದ ಮುಕ್ತರಾಗುವರು. ಶಿವಾರ್ಚನಪರಾಯಣರಾದ ಶಾಂಭವರೇ ನಿಜವಾಗಿಯೂ ಪೂಜ್ಯರು. ॥೧೯-೨೦॥

ಅನಭ್ಯರ್ಚ್ಯ ಮಹಾದೇವಂ ಮರಣೇಪಿ ಪ್ರತಿಕ್ಷಣಂ ।
ನಾನ್ಯಂ ಫಲಂ ವಾ ಗೃಹ್ಣಂತಿ ನಿಯತಾಮಿತಭಾಷಿಣಃ ॥೨೧॥

ತ ಏವ ಶಾಂಗಾ ವಿಜ್ಞೇಯಾಶ್ಶಿವಲಿಂಗೈಕಪೂಜಿತಾಃ ।
ತದಂಗಸಂಗತಃ ಸದ್ಯಃ ಪಾಪಭಂಗಃ ಪ್ರಜಾಯತೇ ॥೨೨॥

ಮಾತಂಗಕೃತ್ತಿವಸನಪಾದಪೂಜಾಪ್ರಭಾವತಃ ।
ತೇಷು ದತ್ತಂ ಯಥಾ ಶಂಭುಃ ಸ್ವಯಂ ಗೃಹ್ಣಾತಿ ಶಂಕರಃ ॥೨೩॥

ಶಿವಕ್ಷೇತ್ರೇ ಭೋಜನೀಯಾಃ ಪೂಜ್ಯಾಶ್ಚ ಶಿವಯೋಗಿನಃ ।
ಅನ್ಯವರ್ಣೇಷ್ವಪಿ ಚ ಯೇ ಭಸ್ಮರುದ್ರಾಕ್ಷಧಾರಿಣಃ ॥೨೪॥

ಶಿವಲಿಂಗಾಸಕ್ತಕಂಠಾ ನೀಲಕಂಠಪದಾರ್ಚಕಾಃ ।
ಅವಿಮುಕ್ತೇ ಚ ಕೇದಾರೇ ರುದ್ರಕೋಟೌ ಮರೇಶ್ವರೇ ॥೨೫॥

ಭೃಗುತುಂಗೇ ನರ್ಮದಾಯಾಮೋಂಕಾರೇ ಚ ಪ್ರಭಾಸಕೇ ।
ಪುಷ್ಕರೇ ನೈಮಿಷಾರಣ್ಯೇ ಮಹಾಕಾಲೇ ತ್ರಿಯಂಬಕೇ ॥೨೬॥

---

ಮರಣಪರ್ಯಂತವಾಗಿಯೂ ಮಹಾದೇವನನ್ನು ಅರ್ಚಿಸುತ್ತಾ, ನಿಯತವಾದ ಮಾತುಗಳುಳ್ಳವರಾಗಿ ಶಾಂಭವರು ಮತ್ತಾವ ಫಲವನ್ನೂ ಅಪೇಕ್ಷಿಸದೆ ಸದಾ ಶಿವಪ್ರೀತಿಯನ್ನೇ ಬಯಸುವರು. ಶಿವಲಿಂಗವೊಂದನ್ನೇ ಪೂಜಿಸುವವರಿಗೆ ಶಾಂಗರು ಅಥವಾ ಶಾಂಭವರೆಂಬ ಹೆಸರು ಬರುವುದು. ಅವರ ಅಂಗಸ್ಪರ್ಶದಿಂದ ಸಕಲ ಪಾಪಗಳೂ ಪರಿಹಾರವಾಗುವುವು. ॥೨೧-೨೨॥

ಗಜಚರ್ಮಾಂಬರಧಾರಿಯಾದ ಮಹಾದೇವನ ಅನುಗ್ರಹದಿಂದ ಶಾಂಭವರು ಶಿವನನ್ನು ತೃಪ್ತಿಗೊಳಿಸುವರು. ಅವರಿಗೆ ಅರ್ಪಿಸಿದ ವಸ್ತುಗಳಿಂದ ಶಂಕರನು ತೃಪ್ತಿ ಹೊಂದುವನು. ಆದ್ದರಿಂದ ಶಿವಯೋಗಿಗಳನ್ನು ಶಿವಕ್ಷೇತ್ರದಲ್ಲಿ ಭೋಜನಾದಿಗಳಿಂದ ತೃಪ್ತಿಪಡಿಸಬೇಕು. ॥೨೩-೨೪॥

ಶೈವದ್ವಿಜರಲ್ಲದ ಇತರ ವರ್ಣದವರೂ ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಶಿವಲಿಂಗವನ್ನು ಕಂಠದಲ್ಲಿಟ್ಟು, ನೀಲಕಂಠನ ಪಾದಕಮಲಗಳನ್ನೇ ಅರ್ಚಿಸುವುದಾದರೆ ಅವರೂ ಸಹ ಪೂಜ್ಯರೆನಿಸುವರು. ಇಂತಹ ಶೈವರನ್ನು ಕಾಶಿ, ಕೇದಾರಕ್ಷೇತ್ರ, ರುದ್ರಕೋಟಿ, ಮರೇಶ್ವರ, ಭೃಗುತುಂಗ, ನರ್ಮದಾತೀರ, ಓಂಕಾರಕ್ಷೇತ್ರ, ಪ್ರಭಾಸ

ಗೋಕರ್ಣೇ ಚ ಕುರುಕ್ಷೇತ್ರೇ ಶ್ರೀಶೈಲೇ ಪುಂಡರೀಕಕೇ ।
ದಕ್ಷಿಣೇ ತತ್ರ ಕೈಲಾಸೇ ವೃದ್ಧಾದ್ರಾವರುಣಾಚಲೇ ॥೨೭॥

ಗೋಪರ್ವತೇ ಸಹ್ಯಮೂಲೇ ಶ್ರೀಕಂಠೇ ರತ್ನಪರ್ವತೇ ।
ಶ್ರೀಮಾತೃಶಿಖರೇ ಚೈವ ಗಜಾರಣ್ಯೇಥ ಜಪ್ಯಕೇ ॥೨೮॥

ಕುಂಭಕೋಣೇರ್ಜುನೇ ಚೈವ ಮಾಯೂರೇ ಶ್ವೇತಕಾನನೇ ।
ಕಮಲಾಲಯಸಂಜ್ಞೇ ಚ ವೇದಾರಣ್ಯೇ ಚ ಸೇತುಕೇ ॥೨೯॥

ಹಾಲಾಸ್ಯೇ ವೇಣುವಿಪಿನೇ ತಾಮ್ರಪರ್ಣ್ಯಾಸ್ತಟದ್ವಯೇ ।
ಸಹ್ಯಾಪಗಾರೋಧಸಿ ಚ ಕ್ಷೇತ್ರನಿಷ್ಠಾಶ್ಚ ಶಾಂಭವಾಃ ॥೩೦॥

ಪೂಜನೀಯಾಃ ಪ್ರಯತ್ನೇನ ಶಿವಪ್ರೀತ್ಯರ್ಥಮೇವ ಹಿ ।
ಯತ್ರ ಭುಂಕ್ತೇ ಶಾಂಭವಸ್ತು ಶಿವೋ ಭುಂಕ್ತೇ ಚ ತತ್ರ ಹಿ ॥೩೧॥

ಪೂಜ್ಯಾಸ್ಸದಾ ದಾನಮಾನೈಃ ತೇನ ಪ್ರೀತೋ ಭವೇಚ್ಛಿವಃ ।
ಶಿವಭಕ್ತಾ ಮಹೋತ್ಸಾಹಾಃ ಶಿವಾರ್ಚನಪರಾಯಣಾಃ ॥೩೨॥

---

ಕ್ಷೇತ್ರ, ಪುಷ್ಕರಕ್ಷೇತ್ರ, ನೈಮಿಶಾರಣ್ಯ, ಮಹಾಕಾಲ, ತ್ರಿಯಂಬಕ, ಗೋಕರ್ಣ, ಕುರುಕ್ಷೇತ್ರ, ಶ್ರೀಶೈಲ, ಪುಂಡರೀಕ, ದಕ್ಷಿಣಕೈಲಾಸ, ವೃದ್ಧಾಚಲ, ಅರುಣಾಚಲ ಈ ಶಿವಕ್ಷೇತ್ರಗಳಲ್ಲಿ ಶೈವರನ್ನು ಪೂಜಿಸಬೇಕು. ॥೨೫-೨೬-೨೭॥

ವೃಷಾಚಲ, ಸಹ್ಯಾದ್ರಿ, ಶ್ರೀಕಂಠಕ್ಷೇತ್ರ, ರತ್ನಪರ್ವತ, ಶ್ರೀಮಾತೃಶಿಖರ, ಗಜಾರಣ್ಯಕ್ಷೇತ್ರ, ಜಪ್ಯಕ್ಷೇತ್ರ, ಕುಂಭಕೋಣ, ಮಧ್ಯಾರ್ಜುನಕ್ಷೇತ್ರ, ಮಾಯೂರ ಕ್ಷೇತ್ರ, ಶ್ವೇತಾರಣ್ಯ, ಕಮಲಾಲಯಕ್ಷೇತ್ರ, ವೇದಾರಣ್ಯ, ರಾಮಸೇತು, ಹಾಲಾಸ್ಯ ಕ್ಷೇತ್ರ, ವೇಣುವನ, ತಾಮ್ರಪರ್ಣೀತಟ, ಕಾವೇರೀ ದಡದಲ್ಲಿರುವ ಕ್ಷೇತ್ರಗಳು ಇವೇ ಮೊದಲಾದ ಕ್ಷೇತ್ರಗಳಲ್ಲಿ ವಾಸಮಾಡುವ ಶಾಂಭವರಿಗೆ ಶಿವಪ್ರೀತ್ಯರ್ಥವಾಗಿ ಪೂಜಾದಿ ಸತ್ಕಾರಗಳನ್ನು ನಡೆಸಬೇಕು. ಶಾಂಭವನು ಸುಪ್ರೀತನಾದರೆ ಶಂಕರನು ತೃಪ್ತನಾದಂತೆಯೇ ಸರಿ. ॥೨೮-೨೯-೩೦-೩೧॥

ಅಂತಹ ಶೈವರನ್ನು ದಾನಮಾನಗಳಿಂದಲೂ, ಸತ್ಕಾರಾದಿಗಳಿಂದಲೂ ಪೂಜಿಸಬೇಕು. ಆದರೆ ಶಾಂಭವರು ಶಿವನಲ್ಲಿ ದೃಢಭಕ್ತಿಯುಳ್ಳವರಾಗಿಯೂ, ಶಿವಾರಾಧನತತ್ಪರರಾಗಿಯೂ, ಶಾಂತರೂ, ಉದಾರರೂ, ಕೋಪಾದಿಗಳಿಲ್ಲದವರೂ,

ಶಾಂತಾ ದಾಂತಾ ಜಿತಕ್ರೋಧಾಃ ಶಿವನಾಮಜಪಸಾದರಾಃ ।
ಭಸ್ಮರುದ್ರಾಕ್ಷಸಂಪನ್ನಾಃ ಶಿವೋತ್ಕರ್ಷಾರ್ಥವಾದಿನಃ ॥೩೩॥

ವೇದಿನಃ ಕಾಲತತ್ತ್ವಸ್ಯ ಶಿವಕ್ಷೇತ್ರನಿವಾಸಿನಃ ।
ಅನ್ಯಕ್ಷೇತ್ರಪ್ರತ್ಯಭಿಜ್ಞಾರಹಿತಾಭೂತಿಭೂಷಿತಾಃ ॥೩೪॥

ಶಿವಮೇವ ಯಜಂತ್ಯೇವ ಸರ್ವಕಾಲೇಷು ಸಾದರಂ ।
ತ ಏವ ವೈದಿಕಾ ಜ್ಞೇಯಾ ಶ್ರೌತಪುಂಡ್ರಾದಿಧಾರಣಾಃ ॥೩೫॥

ಶ್ರೌತಲಿಂಗಮಿದಂ ಪ್ರೋಕ್ತಂ ಭಸ್ಮರುದ್ರಾಕ್ಷಧಾರಣಂ ।
ರುದ್ರಾಧ್ಯಾಯಜಪಂ ಶ್ರೌತಂ ಶ್ರೌತಃ ಪಂಚಾಕ್ಷರೀಜಪಃ ॥೩೬॥

ರುದ್ರಲಿಂಗಾರ್ಚನಂ ಶ್ರೌತಂ ಶ್ರೌತಂ ಶಿವಜಪಸ್ಮೃತಿಃ ।
ಶ್ರೌತಧರ್ಮಾರ್ಥನಿರತಾಃ ಶಾಂಭವಾ ಏವ ಕೇವಲಂ ॥೩೭॥

ಅಶ್ರೌತಮೂರ್ಧ್ವಪುಂಡ್ರಂ ಸ್ಯಾನ್ನ ತದ್ಧಾರ್ಯಂ ಶಿವಾರ್ಚಕೈಃ ।
ನಾನ್ಯಕ್ಷೇತ್ರೇ ವಸೇನ್ನಿತ್ಯಂ ಶಾಂಭವಶ್ಶಂಭುತತ್ಪರಃ ॥೩೮॥

ನಾನ್ಯಂ ಸುರಂ ವಾಪಿ ನರಂ ಕಿನ್ನರಂ ವಾ ಯಜೇತ್ಸ ಹಿ ॥೩೯॥

---

ಶಿವನಾಮಜಪದಲ್ಲಿ ವಿಶ್ವಾಸವುಳ್ಳವರೂ, ಭಸ್ಮರುದ್ರಾಕ್ಷಧಾರಿಗಳೂ ಆಗಿದ್ದು ಸರ್ವದಾ ಶಿವೋತ್ಕರ್ಷವನ್ನೇ ವಾದಿಸುತ್ತಿರಬೇಕು. ||೩೨-೩೩||

ಕಾಲಸ್ವರೂಪವನ್ನೂ, ಕಾಲದ ಶ್ರೇಷ್ಠತೆಯನ್ನೂ ತಿಳಿದು ಶಿವಕ್ಷೇತ್ರದಲ್ಲಿಯೇ ವಾಸಮಾಡುತ್ತಾ, ಇತರ ಕ್ಷೇತ್ರಗಳ ಸ್ಮರಣೆಯೂ ಇಲ್ಲದೆ ವಿಭೂತಿಭೂಷಿತರಾಗಿ, ಸದಾಕಾಲದಲ್ಲಿಯೂ ಶಿವನನ್ನೇ ಪೂಜಿಸುತ್ತಾ, ಭಸ್ಮತ್ರಿಪುಂಡ್ರಾದಿಗಳಿಂದ ಅಲಂಕೃತರಾಗಿರುವವರನ್ನು ವೈದಿಕರೆಂದು ತಿಳಿಯಬೇಕು. ||೩೪-೩೫|

ಶಿವಲಿಂಗಪೂಜಾ, ಭಸ್ಮರುದ್ರಾಕ್ಷಿಧಾರಣ, ರುದ್ರಾಧ್ಯಾಯಜಪ, ಪಂಚಾಕ್ಷರೀ ಜಪ, ರುದ್ರಲಿಂಗಾರ್ಚನೆ, ಶಿವಜಪಸ್ಮೃತಿ ಇವೆಲ್ಲಾ ಶ್ರುತ್ಯುಕ್ತವಾದ ಕರ್ಮಗಳೇ. ಇವುಗಳನ್ನು ತಪ್ಪದೆ ನಡೆಸುವ ಶಾಂಭವರು ನಿಜವಾಗಿ ಶ್ರೌತಿಗಳು ಅಂದರೆ ಶ್ರುತಿ ಪ್ರತಿಪಾದಿತವಾದ ಧರ್ಮವನ್ನು ನಡೆಸುವವರು ಎಂದರ್ಥ. ಇವನ್ನು ಬಿಟ್ಟು ಶ್ರುತ್ಯುಕ್ತವಲ್ಲದ, ಊರ್ಧ್ವಪುಂಡ್ರಧಾರಣೆ, ಶಿವೇತರಕ್ಷೇತ್ರವಾಸ ಇವುಗಳನ್ನು

॥ ಸೂತ ಉವಾಚ ॥

ಏವಂ ಯೇ ಶಿವಭಕ್ತಿಭಾವನಿರತಾಸ್ತೇ ಶಾಂಭವಾಃ ಕೇವಲಂ
ದಾರೋದಾರಕುಮಾರವೃಂದಸಹಿತಾಃ ಶ್ರೀಶಂಕರಾರ್ಚಾರತಾಃ ।
ಮಾರಾಪಾರಶರಾಭಿಘಾತರಹಿತಾಃ ವೇದಾಂತಸಾರಾದರಾಃ
ಘೋರಾಪಾರಮಹಾಂಧಸಂಸೃತಿಭರಂ ಹಾರಾಸ್ತ್ಯಜಂತ್ಯೇವ ತೇ ॥೪೦॥

ಅನ್ಯೇ ಭೂಭಾರರೂಪಾಃ ಶಿವಪದಕಮಲಧ್ಯಾನಹೀನಾ ನ ಮಾನ್ಯಾಃ
ಸಾಮಾನ್ಯಾಃ ಶಿವಮನ್ಯುದಗ್ಧವಪುಷೋ ಜಾರೋಪಜಾರೋದ್ಭವಾಃ ।
ವೀರಾ ವಾಪ್ಯಸುರಾಸುರಾ ನರವರಾಸ್ತೇ ವಾನರಾಃ ಪಾಮರಾಃ
ಮಾರಾರಾತಿಪದಾಂಬುಜೋಜ್ಝಿತಮನಸಾಸ್ತ್ರಸ್ತಾಃ ಸ ಪಾಪಾ ಹಿ ತೇ ॥೪೧॥

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಶಿವಭಕ್ತ
ಮಹಿಮಾವರ್ಣನಂ ನಾಮ ಚತುರ್ದಶೋಽಧ್ಯಾಯಃ

---

ನಿಜವಾದ ಶಾಂಭವರು ಅನುಸರಿಸಕೂಡದು. ಮಹಾಮಹಿಮರಾದ ಶಾಂಭವರು ತಮ್ಮ ಜೀವಿತಕಾಲದಲ್ಲಿ ಈಶ್ವರನೊಬ್ಬನನ್ನು ಬಿಟ್ಟು ಉಳಿದ ಯಾವ ಮನುಷ್ಯರನ್ನೂ ದೇವತೆಗಳನ್ನೂ ಕಿನ್ನರರನ್ನೂ ಎಂದೂ ಪೂಜಿಸಲಾರರು. ॥೩೬-೩೭-೩೮-೩೯॥

ಯಾರು ಮೇಲೆ ಹೇಳಿದಂತೆ ಶಿವಭಕ್ತಿಯುತರಾಗಿದ್ದು ಶೈವಧರ್ಮದಲ್ಲಿ ನಡೆಯುವರೋ ಅವರು ತಮ್ಮ ಸಂಸಾರದಲ್ಲಿ ಪತ್ನೀಪುತ್ರರ ಸೌಖ್ಯವನ್ನನುಭವಿಸುತ್ತಾ ಸದಾ ಶಂಕರಧ್ಯಾನದಲ್ಲಿಯೇ ಕಾಲಕಳೆಯುತ್ತಾ ಸುಖದಿಂದಿರುವರು. ಅವರಿಗೆ ಕಾಮಬಾಣಗಳಾಗಲಿ, ಯಮಪಾಶಗಳಾಗಲಿ ಹಿಂಸೆಕೊಡಲಾರವು. ವೇದವೇದಾಂತ ಗಳ ಸಾರವನ್ನೆಲ್ಲಾ ಅವರು ಸಂಪೂರ್ಣವಾಗಿ ತಿಳಿಯುವರು. ಸಂಸಾರಸಂಬಂಧದಿಂದ ಒದಗುವ ಮಹಾದುಃಖಸಾಗರದಿಂದ ಸುಲಭವಾಗಿ ದಾಟಿ ಆನಂದಸಾಗರದಲ್ಲಿ ತೇಲಾಡುವರು. ॥೪೦॥

ಶಿವಧರ್ಮಬಾಹಿರರಾದ ಉಳಿದವರೆಲ್ಲರೂ ಭೂಭಾರದಂತೆಯೇ ಸರಿ. ಅವರಿಗೆ ಈಶ್ವರನ ಪಾದಕಮಲಧ್ಯಾನವು ಲಭಿಸುವುದಿಲ್ಲ. ಆದರಿಂದಲೇ ಅವರಿಗೆ ಎಂದೂ ಪೂಜ್ಯತೆ ದೊರೆಯುವುದಿಲ್ಲ. ಸಾಮಾನ್ಯರ ಗುಂಪಿಗೆ ಅವರು ಸೇರಿದವರಾಗಿ, ಶಿವಕೋಪದಿಂದ ದಗ್ಧವಾದ ಶರೀರವುಳ್ಳವರಾಗಿ ಕೇವಲ ಜಾರಜರಂತೆ ಅವ

ಮಾನಕ್ಕೂ, ದುಃಖಕ್ಕೂ ಪಾತ್ರರಾಗುವರು. ಯಾರಿಗೆ ನಿಜವಾಗಿಯೂ ಮನ್ಮಥ ನಾಶಕನಾದ ಮಹಾದೇವನ ಪಾದಪದ್ಮಗಳಲ್ಲಿ ಭಕ್ತಿಯಲ್ಲದೆ ಇತರ ದೇವತೆಗಳನ್ನೂ ಸದಾ ಪೂಜೆಮಾಡುವರೋ, ಅವರು ಎಷ್ಟೆ ಶೂರಮಾನವರಾಗಲಿ, ದೇವತೆಗಳಾಗಲಿ, ಜ್ಞಾನಿಗಳಾಗಲಿ, ಅವರೆಲ್ಲರೂ ಅಜ್ಞಾನಿಗಳೇ ಸರಿ. ಅವರು ವಾನರಗಳಿಗೆ ಸಮನಾದವರೆಂದು ತಿಳಿಯಬೇಕು. ಅಂತಹವರನ್ನು ಎಂದೂ ಪೂಜಿಸಬಾರದು. ಅವರು ಯಾವಾಗಲೂ ಪೂಜ್ಯರೆನಿಸುವುದಿಲ್ಲ. ಎಂದು ಸೂತಮಹರ್ಷಿಗಳು ಶಿವಕಥಾ ಕುತೂಹಲಿಗಳಾದ ಮಹರ್ಷಿಗಳಿಗೆ ಶಾಂಭವರ ಮಹಿಮೆಯನ್ನು ಹೇಳಿದರು. ||೧೪-೪೧||

ಇಲ್ಲಿಗೆ ಶ್ರೀ ಶಿವರಹಸ್ಯದ ಎಂಟನೆಯ ಅಂಶದಲ್ಲಿ ಶಿವಭಕ್ತಿ ಮಹಿಮೆಯ ವರ್ಣನೆಯೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು,

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಪಂಚದಶೋಽಧ್ಯಾಯಃ

|| ಕಶ್ಯಪ ಉವಾಚ ||

ಶಾಂಕರಾ ಏವ ದೇವೇಶಂ ಸ್ತುವಂತಿ ಭವಭಾವಿತಾಃ ।
ಭಾವನಾಮಾತ್ರಸುಲಭೋ ದುರ್ಲಭೋಽಕೃತಾತ್ಮನಾಂ ||೧||

ಶಿವ ಏವ ಹಿ ಸರ್ವೇಷಾಂ ಶಾಸಕಸ್ತಾರಕಸ್ಸತಾಂ ।
ಸ ಏವ ಭಕ್ತಿಭಾವೇನ ಪೂಜಿತೋ ಭುಕ್ತಿಮುಕ್ತಿದಃ ||೨||

ಶಿವನೈವೇದ್ಯಪುಷ್ಟಾಂಗಾಃ ಸಂತುಷ್ಟಾಃ ಜ್ಯೇಷ್ಠಪೂಜಕಾಃ ।
ನಿಷ್ಠಾವಂತಃ ಕೃಪಾವಂತಃ ಶಿಪಿವಿಷ್ಟಪದಾಶ್ರಯಾಃ ||೩||

---

## ಹದಿನೈದನೆಯ ಅಧ್ಯಾಯ

ಸದಾ ಪರಶಿವನನ್ನೇ ಮನಸ್ಸಿನಲ್ಲಿ ಭಾವಿಸುತ್ತಿರುವ ಶಾಂಕರರು ಪರಶಿವನನ್ನು ತದೇಕ ಚಿತ್ತದಿಂದ ಸ್ತುತಿಸುವರು. ಪರಶಿವನು ಅಂತಹ ಅಕೃತ್ರಿಮವಾದ ಮನೋಭಾವನೆಗೆ ಮೆಚ್ಚುತಕ್ಕವನು. ಸ್ಥಿರಬುದ್ಧಿಯಿಲ್ಲದವರಿಗೆ ಮಹೇಶ್ವರನು ದೊರಕಲಾರನು. ದುಷ್ಟಶಿಕ್ಷಕನೂ, ಶಿಷ್ಟರನ್ನು ಉದ್ಧರಿಸುವವನೂ ಶಂಕರನೇ. ಅವನನ್ನು ಭಕ್ತಿಯಿಂದ ಆರಾಧಿಸಿದವರಿಗೆ ಭುಕ್ತಿಯೂ ಮುಕ್ತಿಯೂ ಸುಲಭವಾಗಿ ದೊರೆಯುವುದು. ||೧-೨||

ಶಿವನೈವೇದ್ಯಾನ್ನದಿಂದ ಬೆಳೆದ ಅವಯವವುಳ್ಳವರೇ ತೃಪ್ತರಾದವರು. ಅವರೇ ಪರಮ ಪೂಜ್ಯರು. ದಯೆ, ನಿಷ್ಠೆ ಮುಂತಾದ ಸದ್ಗುಣಗಳಿಗೆ ಆಶ್ರಯವಿತ್ತು ಪರ

ತುಷ್ಟಾಃ ಪುಷ್ಟಾಸ್ಸದಾ ಭಕ್ತಾಸ್ತೇಜಿಷ್ಠಾಃ ಶಿವಪೂಜಕಾಃ ।
ಸ್ತುವಂತಿ ಸ್ತೋತ್ರವರ್ಯೇಣ ನೃತ್ಯಂತೀಶಾಗ್ರತೋ ಮುದಾ ॥೪॥

ಭಸ್ಮರುದ್ರಾಕ್ಷಕವಚಾಃ ಜಟಾಮುಕುಟಭೂಷಣಾಃ ।
ರುದ್ರಾಕ್ಷವರಕೋಟೀರಾ ರುದ್ರಾಕ್ಷಾಂಗದಕಂಕಣಾಃ ॥೫॥

ಸಾಶ್ರುನೇತ್ರಾಃ ಸ್ಖಲಜ್ಜಿಹ್ವಾಸ್ತೇ ನೃತ್ಯಂತಿ ಶಿವಾಗ್ರತಃ ।
ಸೋತ್ಸಾಹಕರತಾಲೈಶ್ಚ ಶಾಂಭವಾ ಲಿಂಗಪೂಜಕಾಃ ॥೬॥

ಶಿವಲಿಂಗಪ್ರಭಾವಂತಃ ಕೃಪಾಪಾಂಗಾವಲೋಕಕಾಃ ।
ಅನಂಗವರಮಾತಂಗ ಭಂಗಸಾಂಗಾಂತರಂಗಕಾಃ ॥೭॥

ನೃತ್ಯಂತಿ ಶಾಂಭವಾ ಏವಂ ತತ್ಸ್ತುತಿಂ ಶೃಣು ಸಾದರಂ ।
ಏವಂ ಸ್ತುವಂತಿ ಯಂ ಶಂಭುಂ ಶಾಂಭವಾಗ್ರೇಸರಾ ಹಿ ತೇ ॥೮॥

---

ಶಿವನ ಪಾದಕಮಲಕ್ಕೆ ಹೃದಯದಲ್ಲಿ ಎಡೆ ಕೊಟ್ಟಿರುವರು. ಸಂತೋಷದಿಂದ ನರ್ತಿಸುತ್ತಾ, ಪರಮತೇಜಸ್ವಿಗಳಾಗಿ ಶಿವಪೂಜೆ ಮಾಡುತ್ತಾ ವಿಧವಿಧವಾದ ಸ್ತುತಿಗಳಿಂದ ಮಹೇಶ್ವರನನ್ನು ಹೊಗಳುವರು. ॥೩-೪॥

ಶಾಂಭವರು ಸದಾ ಭಸ್ಮರುದ್ರಾಕ್ಷಿಗಳಿಂದ ದೇಹವನ್ನಲಂಕರಿಸಿಕೊಂಡು, ರುದ್ರಾಕ್ಷಿಗಳ ಜಡೆ, ಕಿರೀಟ ಮುಂತಾದವುಗಳಿಂದ ಅಲಂಕೃತರಾಗಿ, ರುದ್ರಾಕ್ಷಿಯಿಂದಲೇ ಭುಜ, ತೋಳು, ಮುಂಗೈಗಳಿಗೆ ಸರವನ್ನು ನಿರ್ಮಿಸಿ ಕಟ್ಟಿ, ಆನಂದಬಾಷ್ಪವನ್ನು ಸುರಿಸುತ್ತಾ, ಉತ್ಸಾಹದಿಂದ ಕೈಚಪ್ಪಾಳೆ ತಟ್ಟುತ್ತಾ ಅರ್ಚಿತವಾದ ಶಿವಲಿಂಗದ ಎದುರಿನಲ್ಲಿ ಸ್ತುತಿಗೈಯುತ್ತಾ ನರ್ತನ ಮಾಡುವರು. ॥೫-೬॥

ಶಿವಲಿಂಗದ ಪ್ರಭೆಯಿಂದ ರಂಜಿಸುತ್ತಾ, ಈಶ್ವರನ ಕಟಾಕ್ಷ ವೀಕ್ಷಣಕ್ಕೆ ಪಾತ್ರರಾಗಿ, ಮನ್ಮಥನೆಂಬ ಮದ್ದಾನೆಯುನ್ನು ಬಗ್ಗಿಸುವಂತಹ ದೃಢಮನಸ್ಸಿನವರಾಗಿ, ವಿಧವಿಧವಾಗಿ ಮಹೇಶ್ವರನನ್ನು ಸ್ತುತಿಗೈಯ್ಯುತ್ತಾ ಶಿವಲಿಂಗದ ಮುಂದೆ ನರ್ತನ ಮಾಡುವರು. ಅವರು ಮಾಡುವ ಸ್ತುತಿಯುನ್ನು ಕೇಳುವವನಾಗು. ॥೬-೭॥

ಮಹೇಶ್ವರರು ಈ ವಿಧವಾದ ಸ್ತೋತ್ರಪಠನ ಮಾಡುತ್ತಾ, ಸರ್ವಕಾಲದಲ್ಲಿಯೂ ಅಥವಾ ಪ್ರಾತಃಕಾಲ, ಮಧ್ಯಾಹ್ನ, ಅಪರಾಹ್ನ, ಸಾಯಂಕಾಲ ಮುಂತಾದ ಕಾಲಗಳಲ್ಲಾಗಲಿ ಮಹೇಶ್ವರನನ್ನು ಹೊಗಳುವರು. ॥೭-೮॥

ಸರ್ವದಾ ವಾ ಪ್ರದೋಷೇ ವಾ ಸಾಯಂ ಪ್ರಾತಃ ಪರಾಹ್ಣಕೇ ।
ತ ಏವ ಸರ್ವಭಾಗ್ಯಾನಾಮಾಕರಾಶ್ಶಾಂಕರಾ ಹಿ ತೇ ॥೯॥

ಹೇ ಗೌರೀರಮಣಾರುಣಾಚಲಪತೇ ತೂರ್ಣಂ ಮಮಾಭ್ಯರ್ಣಗಂ
ಮೃತ್ಯುಂ ವಾದಯ ತಾರಯಾಶು ದುರಿತಾತ್ಸಂಪೂರ್ಣದೃಕ್ಸಂಗತಃ ।
ಘೋರಾಪಾರಭವಾರ್ಣವಾಜ್ಜನಿಜರಾರೋಗಾನುತಾಪೈರಪಿ
ಶಂಭೋ ಮೇ ಮರಣಕ್ಷಣೇಪಿ ಶರಣಂ ಯತ್ಪಂಕಜಾವೇಕ್ಷಣಂ ॥೧೦॥

ದಿವ್ಯಶ್ರೀ ಚರಣಾಂಬುಜಂ ಹೃದಿ ಸರೋ ಜೀವಾಚ್ಚ ನಾಪ್ಯೈತು ತೇ
ಹೇ ಗೌರೀಕುಚಚಾರು ಶೈಲಶಿಖರಾಪಾರಾದರ ಸ್ವಾಂತರ ।
ಮಾರೋದ್ದಾಮಸುದರ್ಪಸರ್ಪಕುಹರಾಪಾರವ್ಯಥಾಂ ಸಂಹರ
ಹೇ ಕಾಕೋದರಭೂತಿದ ಮಹೀಧೃಗ್ಧುರ್ಯಬಾಣಾಸನ ॥೧೧॥

ಮಥ್ಯತ್ಸಾಗರಸಂಭವೋತ್ತಮಗರಶ್ರೀ ನೀಲಕಂಠಪ್ರಭೋ
ಪಾಹೀಶಾನ ದಯಾನಿಧಾನ ಭಗವನ್ ಕಾರುಣ್ಯತೋ ಮಾಂ ಸದಾ ।

---

"ಮಹಾದೇವನೇ, ಗೌರಿಪತಿಯೇ, ಅರುಣಾಚಲಕ್ಷೇತ್ರಾಧೀಶ್ವರನೇ, ನಿನ್ನ ಕೃಪಾಕಟಾಕ್ಷವನ್ನು ನನ್ನಮೇಲಿಟ್ಟು ನನಗೆ ಒದಗುವ ಮೃತ್ಯುವನ್ನೂ, ಪಾಪರಾಶಿಯನ್ನೂ ನಿವಾರಣೆ ಮಾಡು. ಘೋರತರವಾದ ಸಂಸಾರ ಸಾಗರದಲ್ಲಿ ಆಗಾಗ ಒದಗುವ ಜನನ ಮರಣ ರೂಪವಾದ ಅನೇಕ ವ್ಯಾಧಿಗಳ ತಾಪವನ್ನು ಹೋಗಲಾಡಿಸು. ಮರಣ ಕಾಲದಲ್ಲಿ ನಿನ್ನ ಪಾದಪದ್ಮದ ದರ್ಶನವು ನನಗೆ ಲಭಿಸುವಂತೆ ಅನುಗ್ರಹಿಸು. ॥೯-೧೦॥

ಸರ್ವಾಭರಣಗಳಿಂದ ಅಲಂಕೃತನಾದವನೇ, ಪರ್ವತಶ್ರೇಷ್ಠವಾದ ಮಹಾಮೇರುವನ್ನೇ ಧನುಸ್ಸನ್ನಾಗಿ ಮಾಡಿಕೊಂಡಿದ್ದ ಮಹಾವೀರನೇ, ನಿನ್ನ ಪಾದಕಮಲವು ನನ್ನ ಹೃದಯಕುಹರವೆಂಬ ಸರೋವರದ ನೀರಿನಲ್ಲಿ ಸದಾ ವಿರಾಜಿಸುತ್ತಿರಲಿ. ನಿನ್ನ ಮನಸ್ಸು ಗಿರಿಶಿಖರದಂತೆ ಉನ್ನತವಾದ ಪಾರ್ವತಿಯ ಕುಚದ್ವಯಗಳ ಮೇಲೆ ವಿಹರಿಸುತ್ತಿರುವುದಲ್ಲವೆ! ಮನ್ಮಥನೆಂಬ ಮಹಾವಿಷಸರ್ಪದಿಂದ ನಮಗೆ ಆಗಾಗ ಬರುವ ತೊಂದರೆಯನ್ನು ಪರಿಹರಿಸಿ ನಮ್ಮನ್ನುದ್ಧರಿಸು. ॥೧೧॥

ಕ್ಷೀರಸಮುದ್ರಮಥನಕಾಲದಲ್ಲಿ ಹುಟ್ಟಿದ ಹಾಲಾಹಲವೆಂಬ ಮಹಾವಿಷವನ್ನು ಕಂಠದಲ್ಲಿ ಧರಿಸಿದ ಮಹಾಪ್ರಭುವೇ, ದಯಾನಿಧಿಯೇ, ಷಡ್ಗುಣೈಶ್ವರ್ಯ

ಹೇ ಚಂದ್ರದ್ಯುತಿಕೋಟಿರಂಜಿತ ಜಟಾಕೋಟೀರಜೂಟೀಲಸ
ದ್ದೇವ ಶ್ರೀತಟಿನೀತಟೋತ್ತಮಪಟೇ ಭೂತೇಭ ಚರ್ಮಾಂಬರ ॥೧೨॥

ಹೇ ನಾಟ್ಯಪ್ರಭುವರ್ಯ ಘೋಟಕಮಹಾವೇದೋಕ್ತಹೇಷಾಸ್ತುತಿ
ತ್ರುಟ್ಯದ್ದಿಕ್ತಟಸಂಭ್ರಮೋರುನಟನಾಪಾಟೀರಪಂಕಾಂಕಿತ ।
ಪಾಹೀಂದ್ರಸ್ತುತ ಕೋಟಿಕೀಟಸದೃಶಂ ಮಾಮೀಶ ಸರ್ವೇಶ್ವರ
ಹೇ ಶೂಲೋದ್ಯತಹಸ್ತಮಸ್ತಕಲಸಚ್ಚಂದ್ರೋರು ಗಂಗಾಧರ ॥೧೩॥

ಸ್ವಾಮಿನ್ ದೇವಕಿರೀಟಕೋಟಿವಿಲಸತ್ಪಾದಾಂಬುಜಾವಾದ್ಯ ಮಾಂ
ಮುಸ್ತಾಶಸ್ತಸಮಸ್ತಭೀತಿದಮಹಾಕಾಲೋರುದಂಷ್ಟ್ರಾಧರ ।
ವಿತ್ರಸ್ತಾಖಿಲಲೋಕರಕ್ಷಕ ಮಹಾಶಾಸ್ತುಃಪಿತಃ ಪಾಹಿ ಮಾಂ
ಹೇ ಗಂಗಾಂಬುತರಂಗಸಂಗಸುಮಹಾದಿವ್ಯೋತ್ತಮಾಂಗ ಪ್ರಭೋ ॥೧೪॥

---

ಸಂಪನ್ನನೇ, ನನ್ನನ್ನು ದಯಾದೃಷ್ಟಿಯಿಂದ ಕಾಪಾಡು. ದೇವದೇವನೇ, ನಿನ್ನ ಜಟಾಜೂಟವು ಚಂದ್ರನ ಕಿರಣಗಳಿಂದ ರಂಜಿಸುತ್ತಾ ಪ್ರಕಾಶಮಾನವಾಗಿರುವುದು. ಗಂಗಾನದಿಯನ್ನೇ ಶಿರಸ್ಸಿನಲ್ಲಿಟ್ಟು, ಗಜಚರ್ಮಾಂಬರಧಾರಿಯಾಗಿರುವ ಮಹಾದೇವನೇ, ನನ್ನನ್ನು ರಕ್ಷಿಸು. ॥೧೨॥

ಎಲೈ ನಾಟ್ಯಾಚಾರ್ಯನೇ, ವೇದಗಳೆಂಬ ಕುದುರೆಗಳ ಹೇಷಾಧ್ವನಿಯಿಂದ ಸರ್ವದಾ ಸ್ತುತಿಸಲ್ಪಡುವವನೇ, ಸಮಸ್ತದಿಕ್ತಟಗಳನ್ನೂ ತನ್ನ ನಾಟ್ಯವೈಖರಿಯಿಂದ ಬೆಳಗಿಸಿದವನೇ, ನಾಟ್ಯರಸವೆಂಬ ಶ್ರೀಗಂಧದ ಪಂಕದಿಂದ ಲಿಪ್ತನಾದವನೇ, ಇಂದ್ರನಿಂದ ಸ್ತುತನಾದವನೇ, ತ್ರಿಶೂಲವನ್ನು ಕರದಲ್ಲಿಯೂ, ಚಂದ್ರ ಮತ್ತು ದೇವಗಂಗೆಯನ್ನು ತಲೆಯಲ್ಲಿಯೂ ಧರಿಸಿ ನಾಟ್ಯವಾಡುವ ಮಹಾನುಭಾವನೇ, ಕ್ರಿಮಿಸದೃಶವಾಗಿರುವ ನನ್ನನ್ನುದ್ಧರಿಸು. ॥೧೩॥

ಅನೇಕ ದೇವತೆಗಳ ಕಿರೀಟದಿಂದ ಒತ್ತಲ್ಪಟ್ಟ ಪಾದಪದ್ಮವುಳ್ಳ ಮಹಾದೇವನೇ, ನನ್ನನ್ನು ರಕ್ಷಿಸು. ಅತಿಶಯವಾದ ಮತ್ತು ಭಯಂಕರವಾದ ಪ್ರಳಯ ಭೈರವನ ವೇಷದಿಂದ ಕೋರೆಹಲ್ಲುಗಳನ್ನು ಧರಿಸಿ ಮುಂದುವರಿಯುವ ಮಹೇಶ್ವರನೇ, ನನ್ನನ್ನು ಕಾಪಾಡು. ಸೃಷ್ಟಿಸ್ಥಿತಿರಕ್ಷಕರೆನಿಸಿದ ಬ್ರಹ್ಮವಿಷ್ಣುರುದ್ರರೆಂಬ ದೇವತೆಗಳಿಗೆ ಜನಕನಾಗಿರುವ ಮಹೇಶ್ವರನೇ, ನೀನು ಮಹಾಪವಿತ್ರವಾದ ದೇವ

ಮಾತಾ ಪೋತಮಿವಾವ ಭೂತಿವಿಲಸತ್ಸರ್ವಾಂಗರಾಗಾವ ಮಾಂ
ದಿವ್ಯೋತ್ತುಂಗಭುಜಂಗಸಂಗಸುಮಹಾನಂದಾಂಗಲಿಂಗಾಂತರ ।
ಪಾಪೇಭ್ಯಃ ಸುಪತಂಗನೇತ್ರಕರುಣಾದೃಕ್ಸಂಗತಃ ಪಾಹಿ ಮಾಂ
ಹೇ ಫಾಲಾಕ್ಷ ಮಹೇಶ ರಕ್ಷ ಕರುಣಾಮೂರ್ತೇಽಧ್ವರಾಧ್ಯಕ್ಷ ಮಾಂ ॥೧೫॥

ವೀಕ್ಷಾಶಿಕ್ಷಿತಮನ್ಮಥಾಂಗ ಸುಮಹಾದಕ್ಷೋರುಶಿಕ್ಷಾಕರ
ತತ್ಪಕ್ಷಾಂತರದೇವಲೀಕ್ಷಕದನುಧ್ವಂಸೀಕೃತಾಧೋಕ್ಷಜ ।
ಪಾಹ್ಯುಕ್ಷೇಶವರಾಶ್ರಯ ತ್ರಿಭುವನಾಧ್ಯಕ್ಷ ಪ್ರಭೋ ಪಾಹಿ ಮಾಂ
ತ್ರ್ಯಕ್ಷಾಪಾರದಯಾಘನಾಂತರದೃಶಾ ಸಂವೀಕ್ಷ್ಯ ಮಾಂ ಸರ್ವದಾ ॥೧೬॥

ಹೇ ಶಂಪೋಪಮ ಸುಂದರೋರುಸುಜಟಾಸಾಮ್ರಾಜ್ಯನಿರ್ಧಾರಕ
ಸ್ರಾಜ್ಯಾಜ್ಯಪ್ಲುತವಹ್ನಿವಕ್ತ್ರಹವನಪ್ರಾಚುರ್ಯರಾಜ್ಯಪ್ರದ ।

---

ಗಂಗಾನದಿಯನ್ನೇ ಶಿರದಲ್ಲಿಟ್ಟು ಪ್ರಕಾಶಿಸುವವನಲ್ಲವೆ? ಇಂತಹ ಮಹಿಮಾಶಾಲಿಯಾದ ನೀನು ನನ್ನನ್ನು ಸರ್ವದಾ ಕಾಪಾಡು. ॥೧೪॥

ವಿಭೂತಿಯಿಂದ ಲಿಪ್ತವಾದ ಶುಭ್ರಗಾತ್ರವುಳ್ಳವನೇ, ತಾಯಿಯು ಮಗುವನ್ನು ರಕ್ಷಿಸುವಂತೆ ನನ್ನನ್ನು ಕಾಪಾಡು. ದಿವ್ಯವಾದ ಸರ್ಪದಿಂದ ಆಲಿಂಗಿತವಾದ ಶಿವಲಿಂಗವುಳ್ಳವನೇ, ನನ್ನನ್ನು ದಯೆಯಿಂದ ಕಾಪಾಡು. ಸೂರ್ಯಚಂದ್ರರೇ ನೇತ್ರಸ್ಥಾನದಲ್ಲಿರುವ ನಿನ್ನ ಕಟಾಕ್ಷವೀಕ್ಷಣದಿಂದ ನನ್ನನ್ನು ನೋಡಿ ಸಕಲ ಪಾಪಮುಕ್ತನನ್ನಾಗಿ ಮಾಡು. ಅಗ್ನಿನೇತ್ರನೇ, ಮಹೇಶ್ವರನೇ, ಕರುಣಾಮೂರ್ತಿಯೇ, ದಕ್ಷಯಜ್ಞಾಧಿಪತಿಯೇ, ನನ್ನನ್ನು ಸಲಹು. ॥೧೫॥

ಮಹಾದೇವನೇ, ನೀನು ನಿನ್ನ ಅಗ್ನಿನೇತ್ರದ ದರ್ಶನಮಾತ್ರದಿಂದಲೇ ಮನ್ಮಥನು ದಗ್ಧನಾಗಿ ಹೋದನು. ವಿಷ್ಣುವು ನಿನ್ನ ವಿರುದ್ಧಪಕ್ಷದಲ್ಲಿ ನಿಂತು ಅನೇಕವೇಳೆ ಪರಾಭವವನ್ನೈದಿರುವನು. ವೃಷಭವಾಹನನೆನಿಸಿ, ಸತ್ಪುರುಷರಿಗೆ ಆಶ್ರಯವಿತ್ತು ಸಕಲಲೋಕವನ್ನೂ ರಕ್ಷಿಸುತ್ತಿರುವೆ. ಇಂತಹ ಮಹಾಮಹಿಮನೆನಿಸಿದ ನೀನು ನಿನ್ನ ಕರುಣಾಪೂರಿತಗಳಾದ ನೇತ್ರತ್ರಯಗಳ ಕುಡಿನೋಟದಿಂದ ನನ್ನನ್ನು ಯಾವಾಗಲೂ ಸಲಹುತ್ತಿರು. ॥೧೬॥

ಪರಮೇಶ್ವರನೇ, ನಿನ್ನ ವಿಶಾಲವಾದ ಎದೆಯೂ, ನೀಳವಾದ ಜಟಾಜೂಟವೂ ಮಿಂಚಿನಂತೆ ಸರ್ವದಾ ಹೊಳೆಯುತ್ತಿರುವುದಿಲ್ಲವೆ? ಅಲ್ಲದೆ ನಿನ್ನ ಜಟಾಜೂಟವು

ಭೈಷಜ್ಯೋತ್ತಮ ದೇವದೇವ ಸುಮಹಾಪಾಪಾನ್ವಿತೇ ಮಯ್ಯಪಿ
ಹೃತ್ತಾಪೇನ ದಿವಾನಿಶಂ ಪ್ರದಹತೇ ಶಂಭೋಽನುಕಂಪಾಂ ಕುರು ॥೧೭॥

ಹೇ ಕಾಲಾಂತಕ ಶಾಂತಿದಾಂತಿನಿರತ ಸ್ವಾಂತಾಂತರಂಗಸ್ಥಿತ
ಮತ್ತಾನಂಗಜಗತ್ಸುರಾಂತರಸುಹೃತ್ಸಂಸಾರಶಾಂತಂ ಹಿ ಮಾಂ ।
ಭ್ರಾಂತಂ ಭೀತಮಶಾಂತಬುದ್ಧಿಮನಿಶಂ ಕಾಮಾಂತರಂಗಂ ಸದಾ
ಮಾಂ ರಕ್ಷಾಶು ದಯಾರಸೋತ್ತರಮುಮಾಕಾಂತ ಪ್ರಭೋ ಶಂಕರ ॥೧೮॥

ಹೇ ಶಂಕರ ಸ್ಮರಹರಾಂಧಕಕಾಲಶತ್ರೋ
ಸಂಸಾರರೋಗಹರವೈದ್ಯ ಸುರೋತ್ತಮಾದ್ಯ ।
ಪಾಹ್ಯದ್ವಯಶ್ರುತಿಶಿರಃಸ್ತುತಪಾದ ಗದ್ಯ
ಪದ್ಯಸ್ತುತಿಪ್ರಕಟಿತಂ ಸುಗತ್ಯೈರಭೇದ್ಯ ॥೧೯॥

---

ಪ್ರಪಂಚದ ವಿಸ್ತಾರವನ್ನೇ ನಿರ್ಧರಿಸುವುದು. ಪರಿಶುದ್ಧವಾದ ಆಜ್ಯಧಾರೆಯಿಂದ ಅಗ್ನಿಮುಖಿಯಾದ ನಿನ್ನನ್ನು ತೃಪ್ತಿಪಡಿಸುವವರಿಗೆ ಸಮಸ್ತರಾಜ್ಯಭೋಗವನ್ನೂ ಒದಗಿಸುವೆಯಲ್ಲವೆ! ಭಗರೋಗವೈದ್ಯನೆನಿಸಿ ನೀನು ಶ್ರೇಷ್ಠವೈದ್ಯನೆನಿಸಿಕೊಂಡಿರುವೆ. ಮಹಾದೇವನೇ, ನಾನು ಅನೇಕ ಪಾಪಗಳಿಂದ ಕೂಡಿದವನಾಗಿ, ಹೃದಯದ ವ್ಯಥೆಯಿಂದ ಸರ್ವದಾ ಬೇಯುತ್ತಿರುವೆನು. ನಿನ್ನ ಕರುಣಾಪೂರಿತವಾದ ಮನಸ್ಸಿನಿಂದ ನನ್ನನ್ನು ಉದ್ಧರಿಸು. ॥೧೭॥

ಎಲೈ ಯಮನಿಗೂ ಯಮನಾಗಿರುವ ಮಹಾದೇವನೇ, ಯಾರು ಶಮದಮಾದಿ ಗುಣಗಳಿಂದ ತಮ್ಮ ಅಂತರಂಗವನ್ನು ಶುದ್ಧಿಗೊಳಿಸಿರುವರೋ, ಅಂತಹವರ ಮನಸ್ಸಿನಲ್ಲಿ ನೀನು ಸರ್ವದಾ ನೆಲಸಿರುವೆಯಲ್ಲವೆ! ನಾನಾದರೋ, ಮದಿಸಿದ ಮನ್ಮಥನ ಉಪಟಳಕ್ಕೆ ಸಿಕ್ಕಿದ ಜಗತ್ತಿನ ಅಥವಾ ದೇವತೆಗಳ ಮಧ್ಯದಲ್ಲಿ ಸಿಕ್ಕಿ, ಸಂಸಾರದ ಕಡತದಿಂದ ಬಳಲಿ ಹೋಗಿರುವೆನು. ಹೀಗೆ ಭ್ರಾಂತನಾಗಿ, ಅಶಾಂತಮಯವಾದ ಬುದ್ಧಿಯಿಂದ ಕಾಮನಿಗೆ ಆಶ್ರಯ ಕೊಟ್ಟಿರುವ ನನ್ನ ಹೃದಯಕ್ಕೆ ನಿನ್ನ ದಯಾರಸವನ್ನು ಚಿಮುಕಿಸಿ, ನನ್ನನ್ನು ಸರ್ವದಾ ರಕ್ಷಿಸುತ್ತಿರು. ॥೧೮॥

ಸುಖಕರನೇ, ಕಾಮ, ಅಂಧಕಾಸುರ, ಯಮ ಮುಂತಾದವರನ್ನು ಧ್ವಂಸ ಮಾಡಿದವನೇ, ಸಂಸಾರವೆಂಬ ಮಹಾರೋಗವನ್ನು ಸುಲಭವಾಗಿ ಪರಿಹರಿಸುವ ಮಹಾವೈದ್ಯನೆ, ದೇವದೇವನೇ, ಜೀವಬ್ರಹ್ಮರಿಗೆ ಅಭೇದವನ್ನು ಪ್ರತಿಪಾದಿಸುವ

ವಿದ್ಯುತ್ಸ್ರಚಂಚಲಲಲನ್ನರದೇಹಮೇತತ್
ಲಬ್ಧ್ವಾಪಿ ತೇ ಪದಯುಗಂ ನ ಭಜಾಮಿ ಮುಗ್ಧಃ ।
ಹೇ ವ್ಯಾಲಮಾಲ ಗರಶೋಭಿತಕಂಠಮೂಲ
ದಿವ್ಯತ್ರಿಶೂಲಕರ ಕಾಲಕಲಾದಿಲೀಲ ॥೨೦॥

ಕೋಲಾಹಲಧ್ವನಿಕರೋತ್ತಮಫಾಲಮೂಲ
ಜ್ವಾಲಾನಲಾಯಿತಪುರತ್ರಯತೂಲ ಶಂಭೋ ।
ಪಾಹೀಂದುಧಾಮ ಸುಲಲಾಮ ಜಲೋತ್ತಮಾಂಗ
ಮಾಲಾಯಿತಾಬ್ಜಜಕಪಾಲತಲಾತಲಾಸ್ಯ ॥೨೧॥

ಹೇ ವಿಶ್ವಾಧಿಕ ವಿಶ್ವವಂದ್ಯ ಚರಿತಾಮೇಯಾಮಯಧ್ವಂಸಕ
ಕಾಯಾಪಾಯಮಪಾಕುರುಷ್ವ ಭಗವನ್ ಮಾಯಾಂಧಕಾರಂ ಹರ ।

---

ಉಪನಿಷತ್ಪರಂಪರೆಯಿಂದ ಸ್ತುತ್ಯನಾದವನೇ, ಸೌಗತತತ್ತ್ವಕ್ಕೆ ಸಿಲುಕದವನೇ, ಗದ್ಯ ಪದ್ಯಾತ್ಮಕವಾದ ಸ್ತುತಿವಚನಗಳಿಂದ ಸದಾ ಸ್ತುತಿಸುತ್ತಿರುವ ನನ್ನನ್ನು ರಕ್ಷಿಸು.॥೧೯॥

ಸರ್ಪವನ್ನೇ ಹಾರವನ್ನಾಗಿ ಮಾಡಿಕೊಂಡು, ವಿಷದಿಂದ ಶೋಭಿತವಾದ ಕಂಠಪ್ರದೇಶವುಳ್ಳವನಾಗಿ, ದಿವ್ಯತ್ರಿಶೂಲವನ್ನು ಕೈಯಲ್ಲಿ ಹಿಡಿದ ಯಮಾದಿಗಳನ್ನು ನಿಗ್ರಹಿಸಿದ ಮಹೇಶ್ವರನೇ, ನಾನು ಮಿಂಚಿನಂತೆ ಅತಿ ಚಂಚಲವಾದ ದೇಹವನ್ನು ಧರಿಸಿದ್ದಾಗ್ಯೂ ಶಾಶ್ವತವಾದ ನಿನ್ನ ಪಾದಯುಗಳಗಳ ಸ್ಮರಣೆಯನ್ನು ಮಾಡಲಿಲ್ಲ. ಮತ್ತು ಸೇವಿಸಲಿಲ್ಲ. ನಾನೆಂತಹ ಮೂರ್ಖನು. ॥೨೦॥

ಮಹೇಶ್ವರನೇ, ನಿನ್ನ ನೇತ್ರದಿಂದ ಜ್ವಾಲಾಕಾರವಾಗಿ ಛಟಛಟನೆ ಧ್ವನಿಗೈಯ್ಯುತ್ತಾ ಬಂದ ಅಗ್ನಿಗೆ ಪುರತ್ರಯಗಳು ಹತ್ತಿಯ ರಾಶಿಯಂತಾಗಿ ನಾಶವಾದುವಲ್ಲವೆ! ಚಂದ್ರಶೇಖರನೇ, ಗಂಗಾಧರನೇ, ನಿನ್ನ ಕಂಠದಲ್ಲಿ ಪ್ರಕಾಶಿಸುವ ರುಂಡ ಮಾಲೆಗಳಲ್ಲಿ ಬ್ರಹ್ಮನ ತಲೆಬುರುಡೆಯೂ ಸಹ ಅಡಕವಾಗಿರುವುದು. ಇಂತಹ ಮಹಾಮಹಿಮನೇ, ಕರುಣೆಯಿಂದ ನನ್ನನ್ನು ಉದ್ಧರಿಸು. ॥೨೧॥

ಎಲೈ ಲೋಕದೊಡೆಯನೇ, ಲೋಕಪೂಜ್ಯನೇ, ಸಚ್ಚರಿತ್ರಗಳಿಗೆ ನಿಧಿಯಾಗಿರುವವನೇ, ಸಕಲ ರೋಗನಾಶಕನೇ, ನನ್ನ ಈ ದೇಹಕ್ಕೆ ಬಂದೊದಗುವ ಸಕಲ ಅಪಾಯಗಳನ್ನೂ ನಿವಾರಿಸು. ಮತ್ತು ನನಗೆ ಒದಗಿರುವ ಅಜ್ಞಾನವೆಂಬ ಅಂಧಕಾರವನ್ನು ಹೋಗಲಾಡಿಸು. ಪ್ರತಿ ಜನ್ಮದಲ್ಲಿಯೂ ನನಗೆ ನಿನ್ನ ಪಾದಪದ್ಮ

ಧ್ಯೇಯಂ ತೇ ಪದಪಂಕಜಂ ಪ್ರತಿಭವೇಪ್ಯೇವಂ ಮುಹುಃ ಸಿದ್ಧ್ಯತಾಂ ।
ಹೇಯಾ ಮೇ ವಿಷಯಾ ಭವಂತು ನಿಯತಂ ಹೇಯಂ ನ ತೇ
ಪೂಜನಂ ॥೨೨॥

ಮೀನಧ್ವಜಾಜಿಷು ಪರಂ ಪರಿಖಿನ್ನಚಿತ್ತಂ
ಹೃತ್ತಾಪಚಿತ್ತಮಥ ವಿತ್ತಗಣಾರ್ಜನೇನ ।
ಪಿತ್ತೋಲ್ಬಣೇನ ಸತತಂ ಭ್ರಮತೇಂತರಂಗಂ
ಆಶಾಶಮಾಯ ಭಗವನ್ ಕರುಣಾಂ ಕುರುಷ್ವ ॥೨೩॥

ಸೌವರ್ಣವರ್ಣಸದೃಶೋತ್ತಮಕರ್ಣಿಕಾರ
ಮಂದಾರಕುಂದಕರವೀರಸದಂಬುಜಾರ್ಚ್ಯ ।
ಬಿಲ್ವೋತ್ತಮಾಂಗ ಸುಕದಂಬಕಚಂಪಕಾದಿ
ದೂರ್ವಾರ್ಚ್ಯ ಶಂಕರ ವಿಭೋ ಪರಿಪಾಹಿ ದೀನಂ ॥೨೪॥

ಹೇ ವಿಶ್ವನಾಥ ಮಥಿತಾಂತಕ ಮನ್ಮಥಾಂಗ
ಗೌರೀ ಸನಾಥ ಮಮ ನಾಥ ಸುರಪ್ರಮಾಥ ।

---

ಸ್ಮರಣೆಯು ಲಭಿಸುವಂತೆ ವರವನ್ನು ಕೊಡು. ಈ ವಿಷಯ ಸುಖಗಳೆಲ್ಲಾ ನನಗೆ ಇನ್ನು ಮುಂದೆ ಹೇಯವಾಗಿ ಕಾಣುವಂತೆ ಅನುಗ್ರಹಿಸು. ಆದರೆ ನಿನ್ನ ಪೂಜೆಯು ಮಾತ್ರ ಸರ್ವದಾ ನನಗೆ ಶ್ರೇಷ್ಠವೆಂದೆನಿಸಲಿ. ॥೨೨॥

ಮನ್ಮಥನೊಡನೆ ಹೋರಾಡುವ ಭರದಲ್ಲಿ ಅಂದರೆ ಸುಖಾಭಿಲಾಷೆಯನ್ನು ಹೊಂದುವ ಕಾರ್ಯದಲ್ಲಿ ಬಹಳವಾಗಿ ಬಳಲುತ್ತಾ, ಹಣದ ಸಂಪಾದನೆಯಲ್ಲಿಯೇ ಮನಸ್ಸನ್ನು ಬಳಲಿಸಿ, ಪಿತ್ತಾತಿರೇಕದಿಂದ ನರಳುತ್ತಿರುವ ನನ್ನ ಮನಸ್ಸನ್ನು ಶಾಂತಗೊಳಿಸು. ಇದಕ್ಕಾಗಿ ನನ್ನಲ್ಲಿ ಕರುಣೆಯನ್ನಿಡು. ॥೨೩॥

ಸುವರ್ಣದಂತೆ ಹೊಳೆಯುವ ಕಣಿಗಲು, ಮಂದಾರ, ಕೋಲುಮಲ್ಲಿಗೆ, ಕರ್ಣಿಕಾರ ಪುಷ್ಪ, ಕಮಲ ಮುಂತಾದ ಪುಷ್ಪಗಳಿಂದ ಪೂಜಿತನಾದವನೇ, ಗರಿಕೆ, ಕದಂಬ, ಸಂಪಿಗೆ ಮುಂತಾದ ದಿವ್ಯಪತ್ರ ಪುಷ್ಪಗಳಿಂದ ವಿರಾಜಿಸುವ ಶಿರೋಭಾಗವುಳ್ಳವನೇ, ಮಹಾದೇವನೇ, ಅನಾಥನಾಗಿರುವ ನನ್ನನ್ನು ಕಾಪಾಡು. ॥೨೪॥

ವಿಶ್ವೇಶ್ವರನೇ, ಯಮನನ್ನೂ ಮದನನನ್ನೂ ಧ್ವಂಸಮಾಡಿದವನೇ, ಗೌರೀ

ಮಾಂ ರಕ್ಷ ಶಂಕರ ಅನಾಥಜನಂ ಪ್ರಮಾಥಂ
ನಾಥಾಧುನಾ ಧ್ವನಿಕೃತೇ ವರಮಂಧನಾಥ ॥೨೫॥

ಹೇ ವಿಶ್ವಾಧಿಕ ವಿಶ್ವವಂದ್ಯಚರಿತಸ್ತ್ರೇಯಾವ್ಯಯೇಶ ಪ್ರಭೋ
ಭೋ ಭರ್ಗ ತ್ರಿಪುರಾಂಧಕಾಂತಕ ಮಹಾಕಾಮೇಶ ಕಾಮಾಪಹ।
ಮತ್ಕಾಮಂ ಪರಿಪೂರಯಾಶು ಭಗವನ್ಶಂಭೋ ಪ್ರಸೀದಾಧುನಾ
ಇತ್ಯೇವಂ ಪರಿನೃತ್ಯತಿ ಪ್ರತಿದಿನಂ ಶಂಭೋರ್ಮುದೇ ಶಾಂಕರಃ ॥೨೬॥

ಏವಂ ಸ್ತವ್ಯಮುಮಾಧವಂ ವರರಮಾನಾಥಾಕ್ಷಿಪಾದಾಂಬುಜಂ
ವಿಶ್ವಾಧೀಶ್ವರಮಿಂದುಕುಂದಧವಲಂ ಸ್ವಾರ್ಧಾಂಗಗೌರೀಸಖಂ।
ಹಾರಃ ಶಂಕರಮಂಬಿಕಾಸಹಚರಂ ದೇವಂ ಕ್ಷಯದ್ವೀರಕಂ
ಪಾರಾವಾರ ಮಹಾಘಸಾಗರಮಹೋಸಂಸಂತರೇ ತತ್ಕ್ಷಣಾತ್ ॥೨೭॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಶಿವಸ್ತವಪೂಜಕ
ಶಾಂಕರಮಹಿಮಾವರ್ಣನಂ ನಾಮ ಪಂಚದಶೋಽಧ್ಯಾಯಃ

---

ಪ್ರಿಯನೇ, ದೇವತೆಗಳ ಸೊಕ್ಕನ್ನು ಮುರಿದವನೇ, ಅನಾಥಜನರಕ್ಷಕನೇ, ಅಂಧಕಾಸುರ ಸೂದನನೇ, ದೀನನಾದ ನನ್ನನ್ನು ಉದ್ಧರಿಸು. ಕಾಪಾಡು. ॥೨೫॥

ಲೋಕಾತೀತನೇ, ಲೋಕಪೂಜ್ಯನೇ, ಸ್ತ್ರೀಯಾದಿ ದುರ್ಗುಣರಹಿತನಾದವನೇ, ನಾಶರಹಿತನಾದವನೇ, ತ್ರಿಪುರಾಸುರರನ್ನೂ, ಅಂಧಕಾಸುರನನ್ನೂ, ಯಮನನ್ನೂ, ಮನ್ಮಥನನ್ನೂ ನಾಶಪಡಿಸಿದವನೇ, ನಿನ್ನ ಭಕ್ತನಾದವನು ನಿನ್ನನ್ನು ಸದಾ ಮೇಲೆ ಹೇಳಿದಂತೆ ಧ್ಯಾನಮಾಡುವನು. ಮಹಾಮಹಿಮನೇ, ನನ್ನನ್ನು ಉದ್ಧರಿಸು. ಹೀಗೆನ್ನುತ್ತಾ ಶಾಂಭವನು ಪ್ರತಿದಿನವೂ ಶಂಕರನನ್ನು ನಾಟ್ಯದಿಂದ ಸ್ತುತಿಸುವನು. ॥೨೫-೨೬॥

ಹೀಗೆ ಸರ್ವಸ್ತುತ್ಯನೂ, ಮಹಾವಿಷ್ಣುವಿನ ನೇತ್ರಗಳಿಂದ ಪೂಜಿತವಾದ ಪಾದಗಳುಳ್ಳವನೂ, ಲೋಕದೊಡೆಯನೂ, ಚಂದ್ರನಂತೆ ಮತ್ತು ಕೋಲುಮಲ್ಲಿಗೆಯಂತೆ ಶುಭ್ರನಾದವನೂ, ಅರ್ಧನಾರೀಶ್ವರನೂ, ಶತ್ರುನಾಶಕನೂ ಆದ ಮಹಾದೇವನನ್ನು ಭಕ್ತನಾದ ಶಂಕರನು ಸದಾ ಈ ರೀತಿ ಭಜಿಸುತ್ತಾ ಅಗಾಧವಾದ ಸಂಸಾರಸಾಗರದಿಂದ ಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ. ಆದ್ದರಿಂದ ನಿನ್ನ

ಇಷ್ಟಾರ್ಥಸಿದ್ಧಿಗಾಗಿ ಪರಶಿವನನ್ನು ತೃಪ್ತಿಗೊಳಿಸಬೇಕಾದರೆ ಈ ರೀತಿ ಧ್ಯಾನಮಾಡು ಎಂದು ಕಾಶ್ಯಪಮಹರ್ಷಿಯು ತನ್ನ ಮಗನಾದ ಗರುಡನಿಗೆ ಶಿವಮಹಿಮೆಯನ್ನು ವಿವರಿಸಿ ಹೇಳಿದನು. ॥೨೭॥

ಇಲ್ಲಿಗೆ ಶ್ರೀಶಿವರಹಸ್ಯದ ಎಂಟನೆಯ ಅಂಶದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಷೋಡಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಯೇ ಸ್ತುವಂತಿ ಮಹಾದೇವಂ ತೇ ವೈ ಹಾರಾಃ ಪ್ರಕೀರ್ತಿತಾಃ ।
ಯೇಽರ್ಚಯಂತಿ ಮಹಾದೇವಂ ತೇ ವೈ ಶಾಂಭವಸತ್ತಮಾಃ ॥೧॥

ಯೇ ಧ್ಯಾಯಂತಿ ಮಹೇಶಾನಚರಣಾಂಬುಜಮುತ್ತಮಂ ।
ಶಂಭೋರ್ವಿಹಾರಸದನಾ ಮದನಾಂತಕರಸ್ಯ ಚ ॥೨॥

ಯೇ ವೈ ಕ್ಷೇತ್ರೇಷು ನಿರತಾಃ ವಿರತಾನ್ಯತ್ರ ವಸ್ತುಷು ।
ಆನಂದವನವಾಸೇನ ಸರ್ವದಾನಂದಮೇದುರಾಃ ॥೩॥

ಶಿವಲಿಂಗಾರ್ಚಕಾ ಯೇ ವೈ ತೇ ವೈ ಶಾಂಗಾಃ ಪ್ರಕೀರ್ತಿಕಾಃ ।
ಯೇ ವೈ ನೈವೇದ್ಯಭೋಕ್ತಾರಸ್ತೇ ವೈ ಭಾವಾಃ ಪ್ರಕೀರ್ತಿತಾಃ ॥೪॥

---

## ಹದಿನಾರನೆಯ ಅಧ್ಯಾಯ

ಕಶ್ಯಪಮುನಿಯು ಮತ್ತೆ ಮಗನೊಡನೆ ಹೀಗೆಂದನು :—ಪ್ರಿಯಪುತ್ರನೇ, ಯಾರು ಮಹಾದೇವನನ್ನು (ಹರ) ಬಹಳವಾಗಿ ಸ್ತೋತ್ರಮಾಡುವರೋ ಅವರೇ ಹಾರರೆನಿಸಿಕೊಳ್ಳುವರು. ಯಾರು ನಾನಾರೀತಿಯಾಗಿ ಪೂಜಿಸುವರೋ ಅವರೇ ಶಾಂಭವರು. ಸದಾ ಮಹಾದೇವನ ಚರಣಕಮಲವನ್ನು ಧ್ಯಾನಮಾಡುವವರು, ಪರಶಿವನ ವಿಹಾರಕ್ಷೇತ್ರವೆನಿಸುವರು. ॥೧-೨॥

ಇತರ ವಸ್ತುಗಳಲ್ಲಿ ಅನಾದರವಿಟ್ಟು ಯಾರು ಶಿವಕ್ಷೇತ್ರವಾಸದಿಂದಲೇ ಆನಂದವನ್ನು ಅನುಭವಿಸುವರೋ, ಅವರು ಸದಾನಂದವನ್ನು ಅನುಭವಿಸುತ್ತಾ ಕಾಲ

ಯೇ ನಾಮನಿರತಾ ಶಂಭೋರನ್ಯನಾಮಪರಾಙ್ಮುಖಾಃ ।
ತೇ ವೈ ಮಾಹೇಶ್ವರಾಃ ಪ್ರೋಕ್ತಾಃ ಸಾಕ್ಷಾದ್ಭೂತಾಘಹಾರಿಣಃ ॥೫॥

ಶಿವಭಕ್ತಾರ್ಚಕಾ ಯೇ ವೈ ಧನಧಾನ್ಯಾದಿಭಿರ್ಮುದಾ ।
ಶಾಂಕರಾಸ್ತೇ ಸದಾ ಜ್ಞೇಯಾ ದೃಷ್ಟಾಃ ಸ್ಪೃಷ್ಟಾಃ ಪ್ರಸಾದಿನಃ ॥೬॥

ಯೇ ಭಸ್ಮೋದ್ಧೂಲನರತಾಸ್ತೇ ವೈ ಶೈವಾಃ ಪ್ರಕೀರ್ತಿತಾಃ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ಸರ್ವದಾ ಯೇಽನಿಶಂ ಮುದಾ ॥೭॥

ದಗ್ಧಪಾಪಾಸ್ತ ಏವೇತಿ ವಿಜ್ಞೇಯಾಶ್ಶಾಂಭವೋತ್ತಮಾಃ ।
ತ್ರಿಯಾಯುಷತ್ರಿಪುಂಡ್ರೈಶ್ಚ ತಥಾ ತ್ರ್ಯಯಂಬಕೇನ ಚ ॥೮॥

ತ್ರಿಪುಂಡ್ರಧಾರಿಣಸ್ಸರ್ವೇ ತೇ ರುದ್ರಾ ನಾತ್ರ ಸಂಶಯಃ ।
ಅಘೋರಮಂತ್ರತೋ ಯೇ ವೈ ಸದಾ ರುದ್ರಾಕ್ಷಧಾರಿಣಃ ॥೯॥

ಕಂಠಕರ್ಣಗಲಾದ್ಯಂಗ ಬಾಹುಮಸ್ತಕಕೇಷ್ವಪಿ ।
ತೇ ಶಾಂಭವಾಸ್ಸದಾ ಜ್ಞೇಯಾ ಶಿವಸ್ಯೈವ ಪ್ರಸಾದಿನಃ ॥೧೦॥

---

ಕಳೆಯುವರು. ಶಿವಲಿಂಗಾರ್ಚಕರನ್ನು ಶಾಂಗರೆಂದೂ, ಶಿವ ನೈವೇದ್ಯ ಭಕ್ಷಣದಿಂದ ಜೀವಿಸುವವರನ್ನು ಭಾವರೆಂದೂ ಹೇಳಬಹುದು. ॥೩-೪॥

ಇತರ ದೇವತೆಗಳ ಹೆಸರನ್ನುಚ್ಚರಿಸದೆ ಸದಾ ಶಿವನಾಮನಿರತರಾದವರು ಮಾಹೇಶ್ವರರು. ಅವರು ಸರ್ವಪಾಪನಿರ್ಮುಕ್ತರೆನಿಸುವರು. ಶಂಕರ ಕಿಂಕರರನ್ನು ಧನಧಾನ್ಯಾದಿಗಳಿಂದ ತೃಪ್ತಿಪಡಿಸುವವರು ಶಾಂಕರರು. ಅವರು ದೃಷ್ಟರೆಂದೂ, ಸ್ಪೃಷ್ಟರೆಂದೂ ಪ್ರಸಾದಿಗಳೆಂದೂ ಹೇಳಿಸಿಕೊಳ್ಳುವರು. ॥೫-೬॥

'ಅಗ್ನಿರಿತಿ ಭಸ್ಮ' ಮುಂತಾದ ಭಸ್ಮ ಸ್ವರೂಪಬೋಧಕವಾದ ಮಂತ್ರದಿಂದ ಭಸ್ಮೋದ್ಧೂಲನಮಾಡಿಕೊಳ್ಳುವ ಶಾಂಭವ ಶ್ರೇಷ್ಠರು ನಿಜವಾಗಿಯೂ ಪುಣ್ಯಾತ್ಮರೇ ಸರಿ. ತ್ರ್ಯಂಬಕಂ ಯಜಾಮಹೆ ಎಂಬ ಮಂತ್ರದಿಂದಾಗಲಿ ಭಸ್ಮತ್ರಿಪುಂಡ್ರವನ್ನಿಡುವವರು ರುದ್ರಸದೃಶರೆನಿಸುವರು. ॥೭-೮॥

ಅಘೋರೇಭ್ಯಃ ಎಂಬ ಮಂತ್ರದಿಂದ ಯಾರು ರುದ್ರಾಕ್ಷಿಯ ಸರವನ್ನು ಕಂಠ, ಕಿವಿ, ಭುಜ, ಶಿರಸ್ಸು ಮುಂತಾದ ಅವಯವಗಳಲ್ಲಿ ಧರಿಸುವರೋ ಅವರೇ ಶಾಂಭವರು. ಅವರೇ ಶಿವಾನುಗ್ರಹಪಾತ್ರರು. ॥೯-೧೦॥

ನೈವೇದ್ಯಂ ಯೇ ಶಿವೇ ದದ್ಯುಃ ಭುಂಜ್ಯುರ್ವಾ ಶಂಕರಾರ್ಪಿತಂ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೧॥

ಯೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೧೨॥

ಯೇ ಧಾರಯಂತಿ ರುದ್ರಾಕ್ಷಾಂತ್ಸದಾ ವೈ ಶಾಂಕರೋತ್ತಮಾಃ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೩॥

ಯೇ ರುದ್ರಾಧ್ಯಾಯಜಾಪ್ಯೇನ ಜಪಂತಿ ಶಿವತುಷ್ಟಯೇ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೪॥

ಯೇ ರುದ್ರೈಶ್ಚಮಕೈರ್ನಿತ್ಯಮಭಿಷೇಕ್ಷ್ಯಂತಿ ಶಂಕರಂ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೫॥

ಯೇ ವೈ ಪಂಚಾಕ್ಷರಾಸಕ್ತಾಸ್ತೇನಿಶಂ ಪೂಜಯಂತಿ ಯೇ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೬॥

ಯೇ ವೈ ಬಿಲ್ವಾರ್ಚನಪ್ರೀತಾ ಯೇ ವೈ ಬಿಲ್ವಾರ್ಚನಪ್ರಿಯಾಃ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೭॥

ಬಿಲ್ವಪತ್ರಾರ್ಚಕಾ ಯೇ ವೈ ತ್ರಿಕಾಲಂ ಲಿಂಗಮಸ್ತಕೇ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೮॥

---

ನಿತ್ಯವೂ ಶಂಕರನಿಗೆ ನೈವೇದ್ಯ ಮಾಡಿ, ಆ ಪ್ರಸಾದವನ್ನೇ ತಾವು ಭುಂಜಿಸುವವರೂ, ಪರಶಿವನ ಚಿಹ್ನೆಗಳನ್ನೇ ಧರಿಸುವವರೂ, ರುದ್ರಾಕ್ಷಿಗಳನ್ನು ಧರಿಸಿಕೊಂಡು ರುದ್ರಾಧ್ಯಾಯ ಮತ್ತು ಚಮಕಾಧ್ಯಾಯಗಳಿಂದ ಪರಶಿವನನ್ನು ತೃಪ್ತಿಪಡಿಸುವವರೂ ಮತ್ತು ಅದೇ ಮಂತ್ರಗಳಿಂದ ಅಭಿಷೇಕ ಮಾಡುವವರೂ, ಶಿವಪಂಚಾಕ್ಷರೀಮಂತ್ರವನ್ನು ಜಪಿಸುವವರೂ, ಹಾಗೆಯೇ ಬಿಲ್ವಪತ್ರೆಗಳಿಂದ ಅರ್ಚಿಸುವವರೂ ಶಾಂಭವರೆನಿಸುವರು. ಅವರೇ ಪ್ರಸಾದಿಗಳು. ಅವರೇ ಶೈವಚಿಹ್ನಧಾರಿಗಳು. ॥೧೧-೧೨-೧೩-೧೪-೧೫-೧೬-೧೭॥

ತ್ರಿಕಾಲದಲ್ಲಿಯೂ ಶಿವಲಿಂಗಕ್ಕೆ ಬಿಲ್ವಪತ್ರಾರ್ಚನೆ ಮಾಡುತ್ತಾ, ಸದಾ ಶಿವಲಿಂಗಾರಾಧನೆಯಲ್ಲಿಯೇ ಆಸಕ್ತರಾಗಿದ್ದು, ತ್ರಿಕಾಲದಲ್ಲಿಯೂ ಪಂಚಗವ್ಯ

ಯೇ ಲಿಂಗಾರಾಧನವ್ಯಗ್ರಾ ಅಗ್ರ್ಯಮುಗ್ರಾರ್ಚನೇ ರತಾಃ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೧೯॥

ಯೇ ಪಂಚಗವ್ಯೈರ್ನಿಯತಂ ತ್ರಿಕಾಲಮಭಿಷೇಚಕಾಃ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೨೦॥

ಫಲಜಾಲರಸೈಃ ಶಂಭೋರಭಿಷೇಕರತಾಃ ಸದಾ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೨೧॥

ಪಾಟೀರಾಗರುಕಸ್ತೂರೀಚಂದ್ರಚಂದನಲೇಪಕಾಃ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೨೨॥

ಶಂಭೋರ್ಲಿಂಗೇ ಸದಾ ತುಂಗೇ ಅಸಂಗಾಶ್ಯಂಗತತ್ಪರಾಃ ।
ತೇ ಧಾರಯಂತಿ ಚಿಹ್ನಾನಿ ದೇವದೇವಸ್ಯ ಶೂಲಿನಃ ॥೨೩॥

ಬಿಲ್ವಪತ್ರಾಂಬುಜವರೈಃ ಕರವೀರಾರ್ಕಚಂಪಕೈಃ ।
ಮಂದಾರಪಾರಿಜಾತೋತ್ಥಮಾಲಾಪುಷ್ಪಪ್ರದಾ ಹಿ ಯೇ ॥೨೪॥

ಶಂಭೋರ್ಲಿಂಗೇ ವಿಶೇಷೇತು ತ್ರಿಕಾಲಂ ಚ ಪ್ರದೋಷಕೇ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೨೫॥

---

ಪಂಚಾಮೃತಗಳಿಂದ ಅಭಿಷೇಕ ಮಾಡುತ್ತಿದ್ದು, ಹಣ್ಣಿನ ರಸಗಳಿಂದ ಶಿವಲಿಂಗವನ್ನು ಅಭಿಷೇಕ ಮಾಡಿ, ಶ್ರೀಗಂಧ, ಅಗುರು, ಕಸ್ತೂರಿ, ಚಂದನ ಇವುಗಳನ್ನು ಶಿವಲಿಂಗಕ್ಕೆ ಲೇಪಿಸಿ ಶಿವೇತರವಸ್ತುಗಳನ್ನು ಸೇವಿಸದೆ ಸದಾ ಶಿವಲಿಂಗಪೂಜೆಯಲ್ಲಿಯೇ ವ್ಯಗ್ರರಾಗಿರುವವರನ್ನು ನಿಜವಾದ ಶಾಂಭವರೆನ್ನಬಹುದು. ಅವರು ಸದಾ ಶೈವಚಿಹ್ನೆಗಳನ್ನು ಧರಿಸುವರು. ॥೧೮-೧೯-೨೦೨೧-೨೨-೨೩॥

ಬಿಲ್ವಪತ್ರೆ, ಕಮಲ, ಕರವೀರ, ಎಕ್ಕದ ಹೂವು, ಸಂಪಿಗೆ, ಮಂದಾರ, ಪಾರಿಜಾತ, ಮುಂತಾದ ಪುಷ್ಪಗಳ ಮಾಲೆಗಳನ್ನು ಪರಮಭಕ್ತಿಯಿಂದ ತ್ರಿಕಾಲಗಳಲ್ಲಿಯೂ ಪ್ರದೋಷಕಾಲದಲ್ಲಿಯೂ ಪರಶಿವನ ಲಿಂಗಕ್ಕೆ ಅರ್ಪಿಸುವವರು ನಿಜವಾಗಿಯೂ ಶಾಂಭವರೆನಿಸಿಕೊಳ್ಳುವರು. ಅವರೆ ಶಿವಪ್ರಸಾದಿಗಳು. ॥೨೪-೨೫॥

ದಿವ್ಯವಸ್ತ್ರಪ್ರದಾತಾರೋ ಮಹೇಶಾಯ ಸದಾ ಮುದಾ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೨೬॥

ಯೇ ಶಂಭೋಃ ರತ್ನಪುಷ್ಪಾದಿಪ್ರದಾತಾರೋ ವಿಶೇಷತಃ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೨೭॥

ಸುವರ್ಣರತ್ನಪುಷ್ಪೈರ್ಬಿಲ್ವಪತ್ರಾರ್ಚಕಾ ಹಿ ಯೇ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೨೮॥

ಯೇ ಕೃಷ್ಣಾಗರುಸಾಮ್ರಾಣಿ ಗುಗ್ಗುಲುಧೂಪದಾಯಿನಃ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೨೯॥

ಘೃತತೈಲಮಹಾದೀಪದಾಯಿನಃ ಶ್ರೀ ಶಿವಾಲಯೇ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೦॥

ಯೇ ನೈವೇದ್ಯಪ್ರದಾತಾರೋ ಭಕ್ಷ್ಯಭೋಜ್ಯಾದಿಭಿರ್ಮುನೇ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೧॥

ಯೇ ತಾಂಬೂಲಪ್ರದಾತಾರೋ ಅಹರ್ನಿಶಮುಮಾಪತೇಃ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೨॥

ಯೇ ಛತ್ರಬೃಂದದಾತಾರಃ ಸರ್ವದಾ ಶಿವಮಸ್ತಕೇ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೩॥

---

ಮಹಾದೇವನಿಗೆ ದಿವ್ಯವಸ್ತ್ರಗಳು, ರತ್ನ ಮತ್ತು ಸುವರ್ಣನಿರ್ಮಿತಗಳಾದ ಪುಷ್ಪಗಳು, ಬಿಲ್ವಪತ್ರಗಳು ಇವುಗಳನ್ನು ಭಕ್ತಿಯಿಂದರ್ಪಿಸುವವರು, ಹಾಗೆಯೇ ಕಾಲಾಗುರು, ಸಾಂಬ್ರಾಣಿ, ಗುಗ್ಗುಲ, ಧೂಪ ಮುಂತಾದ ಸುಗಂಧ ದ್ರವ್ಯಗಳನ್ನು ಆಘ್ರಾಪಿಸುವವರೂ, ತುಪ್ಪ, ಮತ್ತು ಎಣ್ಣೆಯಿಂದ ಉರಿಯುವ ದೀಪಗಳಿಂದ ಶಿವ ಲಿಂಗವನ್ನು ಬೆಳಗಿಸುವವರು, ಭಕ್ಷ್ಯಭೋಜ್ಯಾದಿಗಳನ್ನು ಶಿವನಿಗೆ ನೈವೇದ್ಯಮಾಡಿ, ಸುಗಂಧಮಯವಾದ ತಾಂಬೂಲವನ್ನರ್ಪಿಸುವವರೂ ಶಾಂಭವರೆನಿಸಿಕೊಳ್ಳುವರು. ಮತ್ತು ಶಿವಪ್ರಸಾದ ಭಾಗಿಗಳಾಗುವರು. ಅವರೇ ಪ್ರಸಾದಿಗಳು. ॥೨೬-೨೭-೨೮-೨೯-೩೦-೩೧-೩೨॥

ಈಶ್ವರನ ಶಿರಸ್ಸಿನ ಮೇಲೆ ಛತ್ರಿಗಳನ್ನು ಹಿಡಿಯಲು ಅನುಕೂಲಪಡಿಸುವ

ಯೇ ವೈ ಚಾಮರದಾತಾರೋ ಹಂಸಪಾಂಡರಮುತ್ತಮಂ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೪॥

ಯೇ ಪತಾಕಪ್ರದಾತಾರಃ ಸರ್ವದಾ ಯೇ ಶಿವಾಗ್ರತಃ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೫॥

ಯೇ ಚಾದರ್ಶಪ್ರದಾತಾರೋ ಮಹಾದೇವಾಗ್ರತಸ್ಸದಾ ।
ತೇ ಶಾಂಭವಾಸ್ಸದಾ ಜ್ಞೇಯಾಃ ಶಿವಸ್ಯೈವ ಪ್ರಸಾದಿನಃ ॥೩೬॥

ಯೇ ಮೃದಂಗಮಹಾವೀಣಾದುಂದುಭೀವಾದನೇ ರತಾಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೩೭॥

ತೌರ್ಯತ್ರಿಕಾದಿಕರ್ತಾರೋ ನೃತ್ಯಸ್ತ್ರೀಣಾಂ ಪ್ರದಾಯಕಾಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೩೮॥

ಯೇ ಶಿವಾಲಯಕರ್ತಾರಃ ಪ್ರಾಕಾರವರಗೋಪುರಂ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೩೯॥

ಯೇ ಶಿವಾರಾಮಕರ್ತಾರಃ ಸರ್ವಪುಷ್ಪೋಪಶೋಭಿತಂ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೦॥

ಯೇ ರಥೋತ್ಸವಕರ್ತಾರೋ ವೃಷವಾಹನಮುತ್ತಮಂ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೧॥

ಯೇ ಶಾಂಭವೋನ್ನದಾತಾರೋ ಯತೀನಾಮಪಿ ಭಾವತಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೨॥

---

ವರು, ಹಂಸದ ಗರಿಗಳಂತೆ ಶುಭ್ರವಾದ ಚಾಮರಗಳನ್ನು ಕೊಡುವವರು, ಶಿವನ ಮುಂದೆ ಹಿಡಿಯಲು ಪತಾಕೆಗಳನ್ನು ಕೊಡುವವರು, ಹಾಗೆಯೇ, ಕನ್ನಡಿ, ಮೃದಂಗ, ಮಹಾವೀಣೆ, ದುಂದುಭಿ, ತುತ್ತೂರಿ, ಇವುಗಳನ್ನು ಅರ್ಪಿಸುವವರು, ನಾಟ್ಯ ಸ್ತ್ರೀಯರಿಂದ ಶಂಕರನ ಮುಂದೆ ನರ್ತನ ಮಾಡಿಸುವವರು, ಶಿವದೇವಾಲಯವನ್ನು ಕಟ್ಟಿಸುವವರು, ಶಿವಪ್ರೀತಿಕರವಾಗಿ ಪುಷ್ಪತೋಟವನ್ನು ನಿರ್ಮಿಸುವವರು, ರಥೋತ್ಸವ, ವೃಷಭೋತ್ಸವ, ಇವುಗಳಿಂದ ಉತ್ಸವಮಾಡಿಸುವವರು, ಶಾಂಭವರಿಗೆ

ಶಾಂಭವಾನಾಂ ವಿಶೇಷೇಣ ತೇ ವೈ ಶಾಂಭವಸತ್ತಮಾಃ ।
ಯೇ ಪ್ರದೋಷಾರ್ಚನರತಾಃ ಸರ್ವಪೂಜಾಭರೈಶ್ಶಿವೇ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೩॥

ಯೇ ಸೋಮವಾಸರೇ ಸಾಯಂ ಶಿವಲಿಂಗಾರ್ಚನೇ ರತಾಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೪॥

ಯೇಽಷ್ಟಮ್ಯಾಮಷ್ಟಮೂರ್ತಿಂ ವೈ ಪೂಜಯಿಷ್ಯಂತಿ ಭಕ್ತಿತಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೫॥

ಯೇ ಭೂತಾಯಾಂ ಭೂತನಾಥಮರ್ಚಯಂತಿ ದೃಢವ್ರತಾಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೬॥

ಯೇ ಪರ್ವಣ್ಯಪಿ ಚಾಭ್ಯರ್ಚ್ಯಂ ಶರ್ವರೀನಾಥಧಾರಿಣಂ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೭॥

ಯೇ ನಾಮನಿರತಾಶ್ಶಂಭೋಃ ಸರ್ವದಾ ರಸನೋಜ್ಜ್ವಲಾಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೪೮॥

ಯೇ ಭಕ್ತಾರ್ಚನತಸ್ತುಷ್ಟಾಃ ಸರ್ವವರ್ಣೇಷ್ವಪಿ ಧ್ರುವಂ ।
ಮಹೇಶಸ್ಯ ವಿಶೇಷೇಣ ಶಾಂಭವಾಗ್ರೇಸರಾ ಹಿ ತೇ ॥೪೯॥

ಯೇಽರ್ಚಯಂತಿ ಮಹಾದೇವಂ ತ್ರಿವಾರಂ ಭಸ್ಮಧಾರಿಣಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೫೦॥

---

ಅನ್ನದಾನಮಾಡುವವರು, ಈಶ್ವರ ಬುದ್ಧಿಯಿಂದ ಯತಿಗಳಿಗೆ ತೃಪ್ತಿಯನ್ನುಂಟು ಮಾಡುವವರು, ಸಕಲ ಪೂಜಾಸಾಮಗ್ರಿಗಳಿಂದ ಪ್ರದೋಷಕಾಲದಲ್ಲಿ ಶಿವನನ್ನು ಅರ್ಚಿಸುವವರೂ ಶಾಂಭವರೆನಿಸಿಕೊಳ್ಳುವರು ಮತ್ತು ಅವರೇ ಶಿವಾನುಗ್ರಹಪಾತ್ರರು. ॥೩೩-೩೪-೩೫-೩೬-೩೭-೩೮-೩೯-೪೦-೪೧-೪೨-೪೩॥

ಸೋಮವಾರ ಪ್ರದೋಷದಲ್ಲಿ, ಅಷ್ಟಮೀ, ಚತುರ್ದಶೀ, ಅಮಾವಾಸ್ಯಾ, ಪೂರ್ಣಿಮಾ, ಸಂಕ್ರಮಣ ಮುಂತಾದ ಪರ್ವತಿಥಿಗಳಲ್ಲಿ, ಅಷ್ಟಮೂರ್ತಿಯೂ, ಚಂದ್ರ ಶೇಖರನೂ ಆದ ಪರಶಿವನನ್ನು ಪೂಜಿಸುವವರೂ, ಹಾಗೆಯೇ ಸದಾ ಶಿವನಾಮ

ಯೇ ಕ್ಷೇತ್ರೇ ನಿರತಾಶ್ಶಂಭೋಃ ವಿರತಾ ವಿಷಯೇಷ್ವಪಿ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೫೧॥

ಯೇಽಥರ್ವಣಶಿಖಾಜಪ್ಯನಿರತಾ ವೇದಪಾರಗಾಃ ।
ತೇ ಶಾಂಭವಾ ಮಹಾದೇವಪ್ರಿಯಾ ನಾಸ್ತ್ಯತ್ರ ಸಂಶಯಃ ॥೫೨॥

ಯೇ ರುದ್ರಾಧ್ಯಾಯನಿರತಾಃ ಸದಾ ಪಂಚಾಕ್ಷರಾದರಾಃ ।
ತೇ ಶಾಂಭವಾಸ್ಸದಾ ಜ್ಞೇಯಾಶ್ಶಿವಸ್ಯೈವ ಪ್ರಸಾದಿನಃ ॥೫೩॥

ಏವಂ ಶಾಂಭವಸತ್ತಮಾಃ ಶಿವಮಹಾಚಾರಾನುರಾಗಾದರಾಃ
ದಾರೋದಾರಕುಮಾರಮಾರಶರಜವ್ಯಾಪಾರಸಂಹಾರಕಾಃ ।
ಪಾರಾವಾರವಿಕಾರಸಂಸೃತಿಭರಂ ತೇ ನಾಪ್ನುವಂತಿ ಧ್ರುವಂ
ಹಾರಾಶ್ಶಂಕರಪಾದಪದ್ಮನಿರತಾಃ ವಿಶ್ವೇಶ್ವರಸ್ಯಾರ್ಚಕಾಃ ॥೫೪॥

ಯೇ ಶಾಂಭವಾಃ ಶಶಿಕಲಾಶಕಲೋತ್ತಮಾಂಗ
ಲಿಂಗೋತ್ತಮಾಂಗಂ ನವಚಂದನಬಿಲ್ವಪತ್ರೈಃ ।

---

ಗಳನ್ನೇ ಪರಿಸತಕ್ಕವರೂ, ಜಾತಿವ್ಯವಸ್ಥೆಯಿಲ್ಲದೆ ಶಾಂಭವಾಗ್ರೇಸರರೆನಿಸುವವರನ್ನು ಪೂಜಿಸಿ ತಾವು ಆನಂದಪಡುವವರೂ, ಪ್ರತಿದಿನವೂ ತ್ರಿಕಾಲಗಳಲ್ಲಿ ಭಸ್ಮಧಾರಣೆಯಿಂದ ಶಿವಪೂಜೆ ಮಾಡುವವರೂ ಶಾಂಭವರೆನಿಸಿಕೊಳ್ಳುವರು. ॥೪೪-೪೫-೪೬-೪೭-೪೮-೪೯-೫೦-॥

ಶಿವಕ್ಷೇತ್ರದಲ್ಲಿಯೇ ವಾಸಮಾಡುತ್ತಾ, ಇತರ ವಿಷಯ ಸುಖಗಳಲ್ಲಿ ವೈರಾಗ್ಯವನ್ನು ಪಡೆದಿರುವವರೂ, ಅಥರ್ವಶೀರ್ಷೋಪನಿಷತ್ಪಾರಾಯಣ ಮಾಡುವವರೂ, ವೇದಪಾರಂಗತರೂ ನಿಜವಾಗಿ ಮಹಾದೇವನ ಭಕ್ತರೆನಿಸುವರು. ॥೫೧-೫೨॥

ಹೀಗೆ ಶಾಂಭವರೆಂದು ಪ್ರಸಿದ್ಧರಾದವರು, ಶಿವಧರ್ಮಾನುಯಾಯಿಗಳಾಗಿ, ಪತ್ನೀಪುತ್ರಾದಿಗಳಲ್ಲಿ ಕಾಮಪ್ರೇರಿತವಾದ ಮೋಹಾದಿಗಳನ್ನು ದೂರಮಾಡಿ, ಮಹಾಸಮುದ್ರದಂತೆ ಕಂಡುಬರುವ ಸಂಸಾರ ದುಃಖಕ್ಕೆ ಸಿಲುಕದೆ, ಸರ್ವದಾ ವಿಶ್ವೇಶ್ವರನ ಪಾದಪದ್ಮಾರಾಧನೆಯಲ್ಲಿಯೇ ಆಸಕ್ತರಾಗಿ ಸುಖದಿಂದಿರುವರು. ॥೫೩-೫೪॥

ಸದಾಶಿವನನ್ನೇ ಆರಾಧ್ಯದೇವತೆಯನ್ನಾಗಿ ಮಾಡಿಕೊಂಡಿರುವ ಶಾಂಭವರು, ಚಂದ್ರಶೇಖರನೆನಿಸಿದ ಪರಶಿವನ ಲಿಂಗವನ್ನು ನೂತನವಾದ ಗಂಧಗಳಿಂದಲೂ,

ಸಂಪೂಜಯಂತಿ ಕಿಲ ಪಾಪಮತಂಗಭಂಗಾಃ
ಶಾಂಗಾಸ್ತ್ವಸಂಗಹೃದಯಾಃ ಶಿವಲಿಂಗಸಂಗಾಃ ॥೫೫॥

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ
ಷೋಡಶೋಽಧ್ಯಾಯಃ

---

ಬಿಲ್ವಪತ್ರೆಗಳಿಂದಲೂ ಪೂಜಿಸಿ ಧ್ಯಾನಿಸಿ, ಪಾಪರಾಶಿಯೆಂಬ ಮದ್ದಾನೆಯ ಕಾಟವನ್ನು ತಪ್ಪಿಸಿಕೊಂಡು, ವೈರಾಗ್ಯದಿಂದ ಶಾಂತಚೇತಸ್ಸನ್ನು ಪಡೆದು ಆನಂದದಿಂದಿರುವರು. ಎಂದು ಕಾಶ್ಯಪ ಮಹರ್ಷಿಯು ಪುತ್ರನಾದ ಗರುಡನಿಗೆ ಶಾಂಭವರ ಸ್ವರೂಪವನ್ನು ವಿವರವಾಗಿ ತಿಳಿಸಿದನು. ॥೫೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಎಂಟನೆಯ ಅಂಶದಲ್ಲಿ ಹದಿನಾರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಸಪ್ತದಶೋಽಧ್ಯಾಯಃ

॥ ಶ್ರೀಮುನಿರುವಾಚ ॥

ಭಸ್ಮತ್ರಿಪುಂಡ್ರಪರಿಚಿಹ್ನಿತ ಸರ್ವಗಾತ್ರಾ
ರುದ್ರತ್ರಿನೇತ್ರಪದಭಾವನ ಸರ್ವಮಿತ್ರಾಃ ।
ವಿತ್ರಸ್ತಪಾತಕವರಾ ವರ ಪಂಚವಕ್ತ್ರಾ
ಸ್ತೇ ಶಾಂಭವಾ ಭುವನಮಾಶು ಪವಿತ್ರಯಂತಿ ॥೧॥

ರುದ್ರಾಕ್ಷವಕ್ಷೋರುಮಹಚ್ಛಿರೋಂಗ
ಕಂಠೋರುಬಾಹುಪರಿಚಿಹ್ನಿತಸರ್ವಗಾತ್ರಾಃ ।
ಸುತ್ರಾಮವಂದಿತಪದಾವರಸತ್ರವರ್ಯಂ
ಪುಣ್ಯಾಧಿಕಾಃ ಕಿಲ ಮಹೋನ್ನತಶಾಂಕರಾಸ್ತೇ ॥೨॥

---

## ಹದಿನೇಳನೆಯ ಅಧ್ಯಾಯ

ಕಶ್ಯಪ ಮಹರ್ಷಿಯು ಪುತ್ರನಾದ ಗರುಡನಿಗೆ ಮತ್ತೂ ಶಿವಮಹಿಮೆಯನ್ನು ಹೀಗೆ ವಿವರಿಸಿದನು :— ಭಸ್ಮತ್ರಿಪುಂಡ್ರಗಳಿಂದ ಅಲಂಕೃತರಾದ ಮಾಹೇಶ್ವರರು ಸದಾ ತ್ರಿನಯನನೆನಿಸಿದ ಪರಶಿವನನ್ನೇ ಮನಸ್ಸಿನಲ್ಲಿ ಸ್ಮರಿಸುತ್ತಾ, ತಮ್ಮ ಸಮಸ್ತ ಪಾಪರಾಶಿಯನ್ನೂ ಕಳೆದುಕೊಂಡವರಾಗಿ, ಸಾಕ್ಷಾತ್ಪಂಚವಕ್ತ್ರರೂಪಿಯಾದ ಪರಶಿವ ಸ್ವರೂಪಿಗಳೆನಿಸಿ, ಪ್ರಪಂಚವನ್ನೇ ಪವಿತ್ರಗೊಳಿಸುತ್ತಿರುವರು. ॥೧॥

ಪುಣ್ಯಶಾಲಿಗಳಾದವರು ರುದ್ರಾಕ್ಷಿಯ ಸರವನ್ನು, ಎದೆ, ಕಂಠ, ಶಿರಸ್ಸು, ತೋಳುಗಳು ಇವೇ ಮೊದಲಾದ ಸಕಲ ಅವಯವಗಳಿಗೂ ಧರಿಸಿಕೊಂಡು, ಇಂದ್ರ

ಪಂಚಾಕ್ಷರಾಕ್ತಹೃದಯಾಃ ಸದಯಾಃ ಸದೈವ
ಮೋದಾಯ ಸರ್ವತನುಷು ಪ್ರಥಿತಾನ ಮುದಾಯತೇಪಿ ।
ಬೋಧಾಯ ಸರ್ವಜಗತಾಂ ತದುಮಾಸಹಾಯ
ಪಾದಾರವಿಂದ ಭಜಕಾಯ ಹಿತಾಯ ತೇಪಿ ॥೩॥

ರುದ್ರಾಧ್ಯಾಯಜಪೇಷು ಸಕ್ತಹೃದಯಾ ವಿಶ್ವಾಕೃತಿಧ್ಯಾಯಿನಃ
ಶಂಭೋಸ್ಸರ್ವಜಗತ್ಪತಿತ್ವಗುಣತೋ ಮಂತ್ರಾರ್ಥ ಸಾರಾದರಾಃ ।
ಯೇ ಯೌವನೋನ್ನತಮದೇಪಿ ಸದೈವ ಶಂಭು
ಪಾದಾರವಿಂದಭಜನಾಯ ಮುದಾ ಪ್ರವೃತ್ತಾಃ ॥೪॥

ಮಾರೋದ್ದಾಮವಿಕಾರಪೂರಿತಹೃದೋಪ್ಯುಜ್ಝಿತ್ಯ ತತ್ಪಾತಕಂ
ಹೇಯಾಪಾಯನಿಕಾಯಕಾಯಮಪಿ ತೇ ನ ಪ್ರಾಪ್ನುವಂತಿ ಧ್ರುವಂ ।
ಯೇ ಶಾಂಗಲಿಂಗಕೃತ ಸಂಗಮಹೋತ್ತಮಾಂಗ
ಗಂಗಾ ತರಂಗ ಶಶಿತುಂಗ ಕೃತಾಂಗ ಭಂಗಂ ॥೫॥

---

ನಿಂದ ಸ್ತುತ್ಯನಾಗಿಯೂ, ದಕ್ಷಬ್ರಹ್ಮಯಾಗ ಧ್ವಂಸಕನಾಗಿಯೂ ಇರುವ ಮಹಾದೇವನನ್ನು ಸದಾ ಧ್ಯಾನಮಾಡುತ್ತಿರುವರು. ಅವರೇ ಪೂಜ್ಯರಾದ ಶಾಂಭವರಲ್ಲವೆ! ॥೨॥

ಶಾಂಭವರು ಸದಾ ಪಂಚಾಕ್ಷರೀ ಮಂತ್ರವನ್ನೇ ಜಪಿಸುತ್ತಾ, ಸಕಲ ಪ್ರಾಣಿಗಳಿಗೂ ಸಂತೋಷವನ್ನುಂಟುಮಾಡುತ್ತಾ, ಸಮಸ್ತ ಜಗತ್ತಿಗೂ ಸದುಪದೇಶ ಮಾಡುತ್ತಾ, ಈಶ್ವರಪಾದಾರವಿಂದ ಸೇವಕರಿಗೆ ಹಿತವನ್ನುಂಟುಮಾಡುತ್ತಾ ಜಗತ್ತಿನಲ್ಲಿ ಪ್ರಸಿದ್ಧರಾಗಿರುವರು. ॥೩॥

ಶಾಂಭವರು ಸದಾ ರುದ್ರಾಧ್ಯಾಯವನ್ನೇ ಜಪಿಸುತ್ತಾ, ವಿಶ್ವರೂಪಿಯಾದ ಪರಶಿವನ ಸ್ವರೂಪವನ್ನೇ ಚಿಂತಿಸುತ್ತಾ, ಶಿವನೇ ಸರ್ವಜಗದುತ್ಪತ್ತಿಕಾರಣನೆಂದು ತಿಳಿಯುತ್ತಾ, ತದರ್ಥಬೋಧಕವಾದ ವೇದಮಂತ್ರದಲ್ಲಿಯೇ ಆಸಕ್ತರಾಗಿರುವರು. ಮತ್ತು ಅವರು ಸದಾ ಯೌವನ ಮದದಿಂದ ಕೂಡಿದ್ದರೂ, ಇತರ ವಿಷಯಸುಖಗಳಿಗೆ ಮನಗೊಡದೆ ಸದಾ ಪರಮೇಶ್ವರನ ಪಾದಾರವಿಂದ ಧ್ಯಾನದಲ್ಲಿಯೇ ನಿರತರಾಗಿರುವರು. ॥೪॥

ಯಾರು ಪರಶಿವನ ಲಿಂಗಪೂಜಾದಿಗಳಲ್ಲಿಯೇ ಆಸಕ್ತರಾಗಿರುವರೋ, ಅವರು ಗಂಗಾನದಿ, ಚಂದ್ರಲೇಖೆ ಮುಂತಾದ ಶೈವಚಿಹ್ನೆಗಳನ್ನು ಧರಿಸಿದವರಾಗಿ ನಶ್ವರವಲ್ಲದ ಶಿವದೇಹವನ್ನೇ ಪಡೆಯುವರು. ಅವರು ಮನ್ಮಥವಿಕಾರಗಳಿಗೆ ಒಂದುವೇಳೆ

ಮಾತಂಗ ವಕ್ತ್ರವರತಾತಮನಂಗಭಂಗ ।
ಶಾಂತಾಂತರಂಗಹೃದಯಾಃ ಪರಿಶೀಲಯಂತಿ ॥೬॥

ಯೇ ಬಿಲ್ವಮಂದಾರ ಸುಚಂಪಕಾದ್ಯೈ
ರಿಂದೀವರೈರ್ವರಕದಂಬಜಕರ್ಣಿಕಾರೈಃ ।
ಮಾಕಂದಕುಂದಜಲಸತ್ಕರವೀರಪುಷ್ಪೈ
ರ್ಯೋಽರ್ಚ್ಯಾಭಿನಂದತಿ ಮುದಾ ಸ ತು ಶಾಂಭವೋ ಹಿ ೭॥

ಯೇ ಪಾಟೀರರಸೋರುಸನ್ಮೃಗಮದಾಮೋದಪ್ರಭಾ ಭಾವಿತಂ
ದೇವೈರ್ವಂದಿತಚಂದನೇನ ವಿಲಸತ್ಸಲ್ಲೇಪಲಿಂಗಂ ಮುದಾ ।
ಯಃ ಕುರ್ಯಾನ್ನಿಶಿ ವಾ ಪ್ರದೋಷಸಮಯೇ ಸಂತಾಲವೃಂತೋದ್ಭವೈ
ರ್ವಾತೈರ್ನಿರ್ವ್ಯಜ್ಯವಸಂತಕೇತನಭವೈರ್ದುಃಖಂ ನ ಸ ಪ್ರಾಪ್ನುಯಾತ್ ॥೮॥

---

ಸಿಕ್ಕಿಬಿದ್ದರೂ, ತನ್ಮೂಲಕವಾದ ಯಾವ ಪಾಪಲೇಶವನ್ನೂ ಹೊಂದಲಾರರು. ಮತ್ತು, ಅಪಾಯಭರಿತವಾಗಿ ತುಚ್ಛವಾಗಿರುವ ಈ ಶರೀರವನ್ನು ಮತ್ತೆ ಎಂದೂ ಧರಿಸಲಾರರು. ಇದು ನಿಶ್ಚಯ. ಮತ್ತು, ॥೫॥

ಅವರು ಕೊನೆಗೆ ಮನ್ಮಥನ ಬಲಿಷ್ಠವಾದ ಬಾಣಗಳಿಗೆ ಸಿಕ್ಕದೆ ಜಿತೇಂದ್ರಿಯರಾಗಿ ಸ್ವಸ್ವರೂಪವನ್ನೇ ಸದಾ ಚಿಂತಿಸುವರು. ॥೬॥

ಬಿಲ್ವ, ಮಂದಾರ, ಸಂಪಿಗೆ, ಕಮಲ, ಇಂದೀವರ, ಕದಂಬ, ಕರ್ಣಿಕಾರ, ಮಾವು, ಕೋಲುಮಲ್ಲಿಗೆ, ಕಣಿಗಲು ಮುಂತಾದ ಪುಷ್ಪಮಾಲೆಗಳಿಂದ ಪರಶಿವನನ್ನು ಪೂಜಿಸುತ್ತಾ ಆನಂದಪಡುವವನೇ ನಿಜವಾದ ಶಾಂಭವನು. ॥೭॥

ಶ್ರೀಗಂಧ, ಕಸ್ತೂರಿ, ಚಂದನ ಮುಂತಾದ ಸುಗಂಧದ್ರವ್ಯಗಳನ್ನು ಶಿವಲಿಂಗಕ್ಕೆ ಲೇಪಿಸಿ, ರಾತ್ರಿ ಮತ್ತು ಪ್ರದೋಷಕಾಲಗಳಲ್ಲಿ ಮನಃಪೂರ್ವಕವಾಗಿ ಶಿವನನ್ನು ಆರಾಧಿಸುತ್ತಾ, ತಾಳೆಗರಿಯ ಬೀಸಣಿಗೆಯಿಂದ ಬೀಸಿ ಪರಶಿವನನ್ನು ತೃಪ್ತಿಪಡಿಸಿದವರು ಎಂದಿಗೂ ಮನ್ಮಥವಿಕಾರಜನ್ಯವಾದ ಮತ್ತು ಸಾಂಸಾರಿಕವಾದ ಯಾವ ದುಃಖವನ್ನು ಪಡೆಯಲಾರರು. ॥೮॥

ಶಾಲ್ಯನ್ನಂ ಮಧುರಾಜ್ಯಸೂಪದಧಿಜಕ್ಷೀರಾದಿ ಮಧ್ವಾದಿಭಿಃ
ಶಾಕಾಪೂಪಗುಡಾಕ್ತಭಕ್ಷ್ಯಕೆ ಸದಾ ಗೋಧೂಮಪೂರ್ಣೋದ್ಭವಮ್ ।
ನೈವೇದ್ಯಂ ಸುಮನೋಹರಂ ಭುವಿ ಸದಾ ಹೃದ್ಯಂ ಪ್ರದತ್ವಾ ಶಿವೇ
ಮಾದ್ಯಂ ಮೋದಕಸಂಭವಾಂತ್ಸಮಧುರಾನ್ ದತ್ವಾ ಸ ಮುಕ್ತೋ
ಭವೇತ್ ॥೯॥

ಯೋ ಧೂಪೈಸ್ತಗರಾಗರೂದ್ಭವ ಮಹಾಸಾಮ್ರಾಣಿಸದ್ಗುಗ್ಗುಲೂ
ಚಂದ್ರೋದ್ಯದ್ವರಖಂಡಸಾಂದ್ರಸುಮಹಾದೀಪೈಃ ಘೃತಾಕ್ತೈಃಶಿವೇ ।
ದದ್ಯಾದ್ಯಃ ಶಶಿಶೇಖರೋತ್ತಮ ಮಹಾಲಿಂಗಾಲಯೇ ಶಾಂಕರೋ
ಭಕ್ತೋ ಜ್ಞಾನನಿದಾನಸಾಧಕವರೋ ಭೂಯಾತ್ಸದೈವಾಶು ಮೇ ॥೧೦॥

ಯೋ ನೀರಾಜಯತಿ ಪ್ರದೋಷಸಮಯೇ ದೀಪಾವಳೀನಾಂ ಶತೈಃ
ಸಾಹಸ್ರೈರಪಿ ಚಂದ್ರಶೇಖರ ಮಹಾಲಿಂಗಂ ಸ ಮುಕ್ತೋ ಭವೇತ್ ।
ಸಚ್ಛತ್ರೈರಖಿಲೈರ್ಮಹೇಂದುಸದೃಶೈರ್ದದ್ಯಾಚ್ಛಿವಾಯಾಶು ವೈ
ಸಃ ಶೈವೋ ಭವತೀಂದುಚೂಡಭಜನಾತ್ಸಜ್ಞಾನರಾದ್ಯರ್ಪಣೈಃ ॥೧೧॥

---

ಶಾಲ್ಯನ್ನ, ಮಧುರವಾದ ತುಪ್ಪ, ತೊವ್ವೆ, ಮೊಸರು, ಹಾಲು ಜೇನುತುಪ್ಪ ಕಾಯಿಸಲ್ಯ, ಒಬ್ಬಟ್ಟು, ಬೆಲ್ಲ, ಗೋಧಿ, ಇವುಗಳಿಂದ ನಿರ್ಮಿತವಾದ ನಾನಾ ಭಕ್ಷ್ಯ ಕದಂಬಗಳನ್ನೂ, ಕಡುಬು ಮುಂತಾದ ಪ್ರೀತಿಕರವಾದ ಸಿಹಿತಿಂಡಿಗಳನ್ನೂ ಪರಶಿವ ನಿಗೆ ಸಮರ್ಪಿಸಿದವನಿಗೆ ಸಾಕ್ಷಾನ್ಮುಕ್ತಿಯೇ ಲಭಿಸುವುದು. ॥೯॥

ತಗರು, ಅಗರು, ಸಾಂಬ್ರಾಣಿ, ಗುಗ್ಗುಲು, ಮುಂತಾದ ಸುಗಂಧದ್ರವ್ಯ ಗಳಿಂದಲೂ ಚಂದ್ರನಂತೆ ಹೊಳೆಯುವ ತುಪ್ಪದ ಸಾಲು ದೀಪಗಳಿಂದಲೂ, ಚಂದ್ರ ಶೇಖರನೆನಿಸಿದ ಪರಶಿವನ ದೇವಾಲಯವನ್ನು ಬೆಳಗಿಸಿ, ನನ್ನನ್ನು ತೃಪ್ತಿಪಡಿಸಿ ದವರು, ನಿಜವಾಗಿಯೂ ನನ್ನ ಭಕ್ತರು. ಅಂತಹವರು ಜಾಗ್ರತೆಯಾಗಿ ನನ್ನ ಸ್ವರೂಪವನ್ನರಿತು, ಮೋಕ್ಷಪ್ರಾಪ್ತಿಗೆ ದಾರಿಯನ್ನು ಕಾಣುವರು. ಇದರಲ್ಲಿ ಸಂಶಯ ವಿಲ್ಲವೆಂದು ಸಾಕ್ಷಾತ್ಪರಶಿವನೇ ಪಾರ್ವತಿಗೆ ತಿಳಿಯಪಡಿಸಿರುವನು. ॥೯-೧೦॥

ಪ್ರದೋಷಕಾಲದಲ್ಲಿ ಚಂದ್ರಶೇಖರನ ಲಿಂಗಕ್ಕೆ ನೂರು ಅಥವಾ ಸಾವಿರ ಸಂಖ್ಯೆಯ ಸಾಲುದೀಪಗಳಿಂದ ನೀರಾಜನಮಾಡಿದವನು ಸದ್ಯೋಮುಕ್ತನಾಗುವನು.

ಪತಾಕಾಭಿಶ್ಶಂಭುಂ ವಿವಿಧಪಟಗರ್ಭಾಭಿರಭಿತಃ ।
ಪ್ರಭಾಭಾವೋದ್ಭಾವೈರ್ಮರುದರುಣಲೀಲಾಭಿರಪಿ ವೈ ॥೧೨॥

ಯಃ ಸ್ತೌತಿ ಶಂಭುಂ ಪರಯಾ ಚ ಭಕ್ತ್ಯಾ
ಪ್ರದಕ್ಷಿಣಪ್ರಕ್ರಮಣೇನ ಚೈವ ।
ಲಿಂಗಾಲಯೇ ಯಃ ಕುರುತೇ ಪ್ರದಕ್ಷಿಣಂ
ಪ್ರಣಾಮಪೂರ್ವಂ ಸ ತು ಶೈವವರ್ಯಃ ॥೧೩॥

ಯಃ ಸ್ತೌತಿ ಶಂಭುಂ ಸಕೃದೇವ ಭಕ್ತ್ಯಾ
ಶಂಭೋ ಶಿವೇತಿ ಶಶಿಧಾಮಧರೇತಿ ಭಕ್ತ್ಯಾ ।
ಗಂಗಾಧರೇತಿ ಪ್ರಥಿತೋರು ದಕ್ಷ
ಶಿಕ್ಷಾಧ್ವರಾಧ್ಯಕ್ಷ ಮಹೋಕ್ಷವಾಹ ॥೧೪॥

ಫಾಲಾಕ್ಷವಿಶ್ವವರ ಶಿಕ್ಷಕ ಮೋಕ್ಷಮಾರ್ಗ
ವಿಜ್ಞಾನಮೀಶಾನ ದೇಹೀತಿ ವಕ್ತಿ ಸ ಶೈವವರ್ಯಃ ।

---

ಹಾಗೆಯೇ ಚಂದ್ರಮಂಡಲದಂತೆ ಗುಂಡಾಗಿರುವ ಛತ್ರಿಗಳನ್ನೂ, ಚಾಮರ, ಕನ್ನಡಿ ಮುಂತಾದುವುಗಳನ್ನು ಭಕ್ತಿಯಿಂದರ್ಪಿಸಿದವನು ಸಾಕ್ಷಾಚ್ಛಿವನ ಸಮೀಪವನ್ನೈದುವನು. ॥೧೧॥

ಬಣ್ಣಬಣ್ಣದ ಬಟ್ಟೆಗಳಿಂದ ಅಲಂಕೃತವಾಗಿ, ಗಾಳಿ ಮತ್ತು ಬಿಸಿಲುಗಳಿಗೆ ನಾನಾರೀತಿಯಾಗಿ ಹೊಳೆಯುತ್ತಿರುವ ಪತಾಕೆಗಳಿಂದ ಶಂಕರನನ್ನು ಸೇವಿಸಿ, ಶಿವಾಲಯದಲ್ಲಿ ಯಾರು ಭಕ್ತಿಪೂರ್ವಕವಾಗಿ ಸ್ತುತಿಸಿ, ಪ್ರದಕ್ಷಿಣೆ ನಮಸ್ಕಾರ ಮಾಡುವರೋ, ಅವರೇ ನಿಜವಾದ ಶೈವಶ್ರೇಷ್ಠರು. ಅವನೇ ಶಿವಪ್ರೀತಿಕರನು. ॥೧೨-೧೩॥

ಪರಶಿವನನ್ನು ಶಂಭೋ, ಶಂಕರ, ಚಂದ್ರಶೇಖರ, ಗಂಗಾಧರ, ವಿಶಾಲವಾದ ಭುಜವುಳ್ಳವನೇ, ದಕ್ಷಬ್ರಹ್ಮನನ್ನು ಶಿಕ್ಷಿಸಿದವನೇ, ಯಾಗಕ್ಕೆ ಯಜಮಾನನೆನಿಸಿದವನೇ, ವೃಷಭವಾಹನನೇ, ಎಂದು ಯಾರು ಪ್ರಾರ್ಥಿಸುತ್ತಾರೋ, ಅವರೇ ಶಾಂಕರರು. ಅವರೇ ಮುಕ್ತಿಗೆ ಅರ್ಹರಾದವರು. ॥೧೪॥

ಹಣೆಗಣ್ಣನವನೇ, ಲೋಕದಲ್ಲಿ ಶ್ರೇಷ್ಠನಾದವನೇ, ಮೋಕ್ಷಮಾರ್ಗವನ್ನು ತೋರಿಸುವ ಜ್ಞಾನಸ್ವರೂಪಿಯೇ, ಸುಜ್ಞಾನವನ್ನು ಕೊಡು ಎಂದು ಪ್ರಾರ್ಥಿಸು

ಯಃ ಶೈವವರ್ಯತಿಲಕೋ ಭವತೀಂದುಚೂಡ
ಪಾದಾರವಿಂದಭಜನೇನ ನಯೇತ್ಸ ಕಾಲಂ ॥೧೫॥

ನಾಲಂ ಭವೋದ್ಭವ ಸುರೋತ್ತಮ ಕಾಲಕಾಲ
ಶ್ರೀ ಶೂಲಪಾಣಿ ಚರಣಸ್ಮರಣಪ್ರಭಾವಃ ।
ಅಭ್ಯರ್ಣಂ ಮರಣಂ ಚ ವೀಕ್ಷ್ಯ ಸಭಯೋ
ಭಾವೋ ಹಿ ಭಸ್ಮಾಕ್ಷಧೃಕ್ ।
ತೂರ್ಣಂ ಪೂರ್ಣಮತಿಃ ಸದೈವ ಸತತಂ
ಕಿಂ ಚಾನ್ನಪೂರ್ಣಾಪತಿಂ ॥೧೬॥

ವಿಶ್ವೇಶಂ ಸಮುಪಾಸ್ಯ ಮುಕ್ತಿಪರಮಾನಂದಂ ಲಭೇಚ್ಛಾಂಭವೋ ।
ಯೋ ಗೌರೀರಮಣಾರ್ಚನೇನ ಸರಣಿಂ ಮುಕ್ತೇರ್ವಿಮಾರ್ಗತ್ಯಹೋ॥೧೭॥

ದೂರ್ವಾಪಾಮಾರ್ಗಜದಲೈಃ ಸುಬಿಲ್ವಜದಳೈಃ ಸಂಪೂಜಯೇಚ್ಛಾಂಭವಃ ।
ಕಿಂ ದಾರಾನ್ನಧನಾನಿ ಗೋಧನವರಂ ವೀರಾಃ ಕುಮಾರಾಪಿ ವೈ ।
ವಿದ್ಯಾನಾ ವರ ಮಂತ್ರ ಯಂತ್ರ ನಿವಹಂ ಕಿಂ ಚೌಷಧಂ ರೋಗಹೃತ್ ।
ಸರ್ವಂ ನಿವೃತ್ತಿಮೇತಿ ಜಾತು ಮರಣೇ ಸರ್ವಂ ತ್ರಿನೇತ್ರಾರ್ಚನಂ ॥೧೮॥

---

ವವನೇ ಶೈವಶ್ರೇಷ್ಠನು. ಸರ್ವದಾ ಇಂದುಧರನೆನಿಸಿದ ಮಹಾದೇವನ ಪಾದಾರವಿಂದಗಳನ್ನು ಸರ್ವದಾ ಧ್ಯಾನಮಾಡುತ್ತಾ ಕಾಲಕಳೆಯುವವನು ಶೈವತಿಲಕನೆನಿಸಿಕೊಳ್ಳುವನು. ॥೧೫॥

ಭವೋದ್ಭವ, ಸುರಶ್ರೇಷ್ಠ, ಕಾಲಕಾಲ, ತ್ರಿಶೂಲಪಾಣಿ, ಮುಂತಾದ ನಾಮಗಳಿಂದ ಎಷ್ಟುಸಾರಿ ಪರಶಿವನನ್ನು ಸ್ತೋತ್ರಮಾಡಿದರೂ ಸಾಲದು. ಮರಣಕಾಲ ಒದಗಿದಾಗ ಭಸ್ಮರುದ್ರಾಕ್ಷಧಾರಿಯಾಗಿ, ಸದಾ ಅನ್ನಪೂರ್ಣಾಪತಿಯಾದ ಮಹಾದೇವನನ್ನು ಧ್ಯಾನಿಸುವವನು ಭಾವ ಎಂದರೆ ಭವಭಕ್ತನೆನಿಸಿಕೊಳ್ಳುವನು. ॥೧೬-೧೭॥

ಭಕ್ತಿಯಿಂದ ಪರಶಿವಲಿಂಗಕ್ಕೆ ಗರಿಕೆ, ಉತ್ತರಿಣೀ, ಬಿಲ್ವ, ಈ ಪತ್ರೆಗಳಿಂದ ಪೂಜಿಸಿದರೂ ಶಾಂಭವನು ಧನ್ಯನಾಗುವನು. ಮರಣಕಾಲ ಒದಗಿದರೆ ಹೆಂಡತಿ, ಮಕ್ಕಳು, ಧನ, ಧಾನ್ಯಗಳು, ಗೋವುಗಳು, ವೀರರಾದ ಪುತ್ರರು, ವಿದ್ಯೆ, ಮಂತ್ರ, ತಂತ್ರ, ಔಷಧಿ ಇವು ಯಾವುವೂ ಮನುಷ್ಯನಿಗೆ ಪ್ರಯೋಜನವಾಗಲಾರವು. ಎಲ್ಲವೂ

ಏಕಂ ಸಾಧಕಮಿತ್ಯನ್ಯೈಮಿ ಸತತಂ ಕಿಂ ಚಾಂತಕಾದ್ಭೀತಿಹೃತ್ ।
ಆಯಾತಿ ಮೃತ್ಯುರ್ನಿಕಟೇ ನ ಚಾಯು ರಾಯಾತಿ ।
ಯತ್ತದ್ಗತನೋವ ಶಂಭೋ ।
ಪಶ್ಯಾಮಿ ಶಶ್ವನ್ನಿಕಟೇ ಸುದರ್ಪ ವೃಷ್ಣೋ-
ರು ತತ್ಕಾನನಮಂಬಿಕೇಶ ।
ತಸ್ಮಾತ್ಪ್ರಪದ್ಯೇ ಶರಣಂ ತ್ವದೀಯಪದ್ಮ
ಪ್ರಭಾವಾಚ್ಛರಣಂ ಸದಾ ಮೇ ॥೧೯॥

ಶಂಭೋ ಯೋನಿಮುಖಾಚ್ಚ ನಿಃಸರಣಮಪ್ಯುತ್ಕ್ರಾಂತಿಕಾಲವ್ಯಥಾ
ತ್ತ್ರುಟ್ಯೈನ್ ಮರ್ಕತಸುಪ್ರಕರ್ಷಜನಿತಾ ಭ್ರಾಂತ್ಯಾ ಮುಮೂರ್ಷಾ ಮಯಿ ।
ತಸ್ಮಿನ್ನಸ್ತಮಿತಪ್ರಪಂಚಮಿಹಿಕಾ ವ್ಯಾಸಾರ ಕೋಲಾಹಲ
ಕ್ರಂದದ್ಬಾಲಕದಂಬ ಬಂಧುನಿವಹೇ ಚಿತ್ತೇ ಕಥಂ ತೇ ಪದೇ ॥೨೦॥

---

ವ್ಯರ್ಥವೆನಿಸುವುವು. ಯಮಭಯವನ್ನು ತಪ್ಪಿಸುವ ಸಾಮರ್ಥ್ಯವುಳ್ಳದ್ದೆಂದರೆ ಕಾಲ ಕಾಲನ ಸ್ಮರಣೆಯೊಂದೇ. ಆದ್ದರಿಂದ ಮಹಾದೇವನೇ, ಕಳೆದ ಆಯುಸ್ಸು ಮತ್ತೆ ಬರುವುದಿಲ್ಲ. ಮೃತ್ಯುವು ಮಾತ್ರ ಸನ್ನಿಹಿತವಾಗುವುದು. ಶಂಭುವೇ, ಮಹಾ ದೇವನೇ, ಮರಣಕಾಲದಲ್ಲಿ ವೃಷಭಾರೂಢನಾಗಿರುವ ನಿನ್ನ ಮುಖಕಮಲವನ್ನು ನೋಡುವ ಸೌಭಾಗ್ಯವು ನನಗೆ ಸದಾ ಒದಗಿರಲಿ. ಅದಕ್ಕಾಗಿಯೇ ನಾನು ನಿನ್ನ ಪಾದಪದ್ಮವನ್ನು ಶರಣುಹೊಂದುವೆನು. ಎಂದು ಭಕ್ತಿಪುರಸ್ಸರವಾಗಿ ಪ್ರಾರ್ಥಿಸು ವವನು ಮಹಾಶಾಂಭವನೆನಿಸುವನು. ॥೧೮-೧೯॥

ಪರಮೇಶ್ವರನೇ, ಜನನಿಯ ಉದರದಿಂದ ಜನಿಸುವಾಗ ಉಂಟಾಗುವ ಕಷ್ಟ ಸಮಯದಲ್ಲಿಯೂ, ಹಾಗೆಯೇ ನಮ್ಮ ಶರೀರದಿಂದ ಪ್ರಾಣಗಳು ನಿರ್ಗಮವಾಗುವ ಮರಣಕಾಲದಲ್ಲಿಯೂ, ನಿನ್ನ ಪಾದಸ್ಮರಣೆಯು ಬರುವಂತೆ ಅನುಗ್ರಹಿಸು. ಏಕೆಂದರೆ ಆ ಕಾಲದಲ್ಲಿ ನಮಗೆ ಪ್ರಪಂಚವೆಲ್ಲವೂ ಮಂಜು ಮುಸುಕಿದಂತೆ ಅಸ್ತವ್ಯಸ್ತವಾಗಿ ಕಾಣುವುದು. ನಮ್ಮ ವಿರಹದುಃಖವನ್ನು ಸಹಿಸಲಾರದೆ ಬಂಧುಮಿತ್ರರು ಬಹಳ ವಾಗಿ ಗೋಳಿಡುತ್ತಿರುವರು. ಅಂತಹ ಮೋಹದಲ್ಲಿ ಬಿದ್ದಿರುವಾಗ ನಿನ್ನ ಪಾದ ಸ್ಮರಣೆಯು ನಮಗೆ ಬರುವುದು ಹೇಗೆ? ॥೨೦॥

ಮರಣೋತ್ತರಮುಷ್ಯತೀವ ಶೋಕಂ
ಕ್ರಕಚಾಕ್ರಾಮಣಘೋರಸೌರಿಗೇಹಂ ।
ಅನುಭವಶತಕೋಽಪಿ ಪಾಪತಾಪ್ಯೈ
ರ್ನ ಸುಖಂ ಕಿಂಚನ ವಂಚಿತೋಽಸ್ಮಿ ಶಂಭೋ ॥೨೧॥

ಯೋ ಬಿಲ್ವಚ್ಛದಮಾಲಯಾ ಶಿವಮಹಾಲಿಂಗೋತ್ತಮಾಂಗಂ ದಧ
ತ್ಪ್ರಾತಃ ಸಂಗವ ಪುಂಗವೋರುವಹನಂ ಪುಣ್ಯೇ ಪ್ರದೋಷೇಽಪಿ ಚ ।
ಮಾತಂಗಾದಿತುರಂಗಗೋಧನಮಹೀದಾನಾನ್ನಪಾನಾದಿಕಂ
ಪುಣ್ಯಂ ಪ್ರಾಪ್ಯ ಮುದಾ ಸದೈವ ಉದಯತ್ಯೇಷೋ ಹಿ ಭಾವೋರ್ಕ
ವತ್ ॥೨೨॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ಭೀಮಾಖ್ಯೇ
ಶಾಂಭವಮಹಿಮಾನುವರ್ಣನಂ ನಾಮ ಸಪ್ತದಶೋಽಧ್ಯಾಯಃ

---

ಮರಣಾನಂತರದಲ್ಲಿ ಅತಿಶಯವಾದ ದುಃಖವೂ, ಹಾಗೆಯೇ ಯಮಸದನ ದಲ್ಲಿ ಅನುಭವಿಸುವ ಗರಗಸದ ಪೆಟ್ಟೇ ಮೊದಲಾದ ಘೋರನರಕದುಃಖವೂ ನಮಗೆ ಅನೇಕ ಜನ್ಮಗಳಿಂದ ಪರಿಚಿತವಾಗಿದ್ದರೂ, ಅದನ್ನು ತಪ್ಪಿಸಿಕೊಳ್ಳಲು ನಾವು ಪ್ರಯತ್ನಿಸಲಿಲ್ಲ. ಮರಣಕಾಲದಲ್ಲಿ ನಿನ್ನ ನಾಮಸ್ಮರಣೆ ಮಾಡುವುದರಿಂದ ಸುಲಭ ವಾಗಿ ಅದನ್ನು ತಪ್ಪಿಸಿಕೊಳ್ಳಬಹುದಾದರೂ ಮೋಸಹೋಗಿ ನಾನು ಮತ್ತೆ ಮತ್ತೆ ಕಷ್ಟವನ್ನೇ ಅನುಭವಿಸುತ್ತಿರುವೆನಲ್ಲವೆ! ॥೨೧॥

ಗಜ, ತುರಗ, ಗೋವು, ಸುವರ್ಣ, ಭೂಮಿ, ಅನ್ನ, ಪಾನೀಯ ಮೊದ ಲಾದ ದಿವ್ಯವಸ್ತುಗಳ ದಾನದಿಂದ ಅನೇಕ ಪುಣ್ಯರಾಶಿಯನ್ನು ಸಂಪಾದಿಸಿ, ಅನಂತರ ಶಿವಭಕ್ತಿಯನ್ನು ಪಡೆದು, ಆತನು ಪ್ರಾತಸ್ಸಂಗವಾದಿ ಕಾಲಗಳಲ್ಲಿ, ವೃಷಭಾರೂಢನೂ, ಬಿಲ್ವಪತ್ರೆಗಳ ಮಾಲೆಯನ್ನು ಧರಿಸಿದವನೂ ಆದ ಮಹಾದೇವನ ಸ್ವರೂಪವನ್ನು ನೋಡಿ ಆಗ ಮುಕ್ತನಾಗುವನು. ಮತ್ತು ಅವನು ಸೂರ್ಯನಂತೆ ತೇಜೋರೂಪಿಯಾಗು ವನು. ಸಕಲ ಪುಣ್ಯಕಾರ್ಯಗಳೂ ಶಿವಲಿಂಗ ದರ್ಶನಕ್ಕೂ ಶಿವಭಕ್ತಿಗೂ ಸಹಕಾರಿಗಳಾ ಗುವುವೇ ಹೊರತು ಮುಕ್ತಿಕಾರಣಗಳೆನಿಸುವುದಿಲ್ಲ. ಶಾಂಭವನು ಆತ್ಮಸಾಕ್ಷಾತ್ಕಾರ ಮಾಡಿಕೊಂಡ ಜೀವನ್ಮುಕ್ತನಂತೆಯೇ ಎಂದು ತಿಳಿಯಬೇಕು. ಆತ್ಮಸಾಕ್ಷಾತ್ಕಾರ

ವಾದನಂತರ, ಸಕಲ ಕರ್ಮಮಾರ್ಗವೂ ಹೇಗೆ ವ್ಯರ್ಥವೆನಿಸುವುದೋ, ಹಾಗೆ ಶೈವಧರ್ಮಾಚರಣೆಯಲ್ಲಿ ಸಿದ್ಧಿಹೊಂದಿದವನು. ಸಾಕ್ಷಾತ್ ಶಿವಸ್ವರೂಪನೆನಿಸುವನು. ಎಂದು ಕಾಶ್ಯಪಮಹರ್ಷಿಗಳು ಶಿವಭಕ್ತಿ ಮಹಿಮೆಯನ್ನು ಪುತ್ರನಾದ ಗರುಡನಿಗೆ ವಿಸ್ತಾರವಾಗಿ ಹೇಳಿದರು. ॥೨೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಎಂಟನೆಯ ಅಂಶದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಅಷ್ಟಾದಶೋಽಧ್ಯಾಯಃ

॥ ಕಶ್ಯಪ ಉವಾಚ ॥

ತಸ್ಮಾತ್ತ್ವಂ ಪತಗಶ್ರೇಷ್ಠ ವಿದ್ಯಯಾ ದೀಕ್ಷಯಾಮ್ಯಹಂ ।
ಪಂಚಾಕ್ಷರಪರೋ ಯಸ್ತು ಸ ಸರ್ವ ಬಲಭಾಜನಂ ॥೧॥

ಭುಕ್ತಿಮುಕ್ತ್ಯೋಃ ಸ ವೈ ಪಾತ್ರಂ ತ್ರಿನೇತ್ರಪ್ರಿಯಕೃತ್ತಮಃ ।
ಸ್ವತಂತ್ರೋಽಪಿ ಮಹಾದೇವಸ್ತನ್ಮಂತ್ರವಶಗೋ ಭವೇತ್ ॥೨॥

ಪುಣ್ಯಾನುಮಿತ್ರೋ ಭವತಿ ಸುತ್ರಾಮ ಪರಿಪೂಜಿತಃ ।
ಯಸ್ತು ಪಂಚಾಕ್ಷರಪರೋ ಪಂಚಾಸ್ಯಧ್ಯಾನಪೂರ್ವಕಂ ॥೩॥

---

## ಹದಿನೆಂಟನೆಯ ಅಧ್ಯಾಯ

ಎಲೈ ಪಕ್ಷಿಶ್ರೇಷ್ಠನೇ, ಶಿವಪಂಚಾಕ್ಷರೀ ವಿದ್ಯೆಯ ಪುರಶ್ಚರಣೆಯಿಂದ ಮನುಷ್ಯನು ಸರ್ವಶಕ್ತಿಸಂಪನ್ನನಾಗುವನು. ಅವನಿಗೆ ಭುಕ್ತಿ ಮುಕ್ತಿ ಇವೆರಡೂ ಲಭಿಸುವುವು. ತ್ರಿನಯನಸ್ವಾಮಿಯಾದ ಮಹಾದೇವನು ಅವನ ಮೇಲೆ ಪ್ರೀತಿಯನ್ನಿಡುವನಲ್ಲದೆ, ತಾನು ಸ್ವತಂತ್ರನಾಗಿದ್ದರೂ, ಅಂತಹ ಮಂತ್ರಪಾಠಿಯಾದ ಭಕ್ತನಿಗೆ ಅಧೀನನಾಗಿಯೇ ವರ್ತಿಸುವನು. ॥೧-೨॥

ಶಿವಮಂತ್ರಜಾಪಕನು ಪುಣ್ಯರಾಶಿಯೆನಿಸಿ ಇಂದ್ರನಿಂದಲೂ ಪೂಜಿತನಾಗುವನು. ಶಿವಪಂಚಾಕ್ಷರವನ್ನೇ ಜಪಿಸುತ್ತಾ ಪಂಚಾಸ್ಯನಾದ ಪರಶಿವನನ್ನು ಪೂಜಿ

ಸ ಪಂಚತ್ವವಿಹೀನಾತ್ಮಾ ಭವೇದೇವ ಶಿವಸ್ಸ್ವಯಂ ।
ಪಂಚಾಕ್ಷರಾಶ್ರಯಾಸ್ಸರ್ವೇ ಬ್ರಹ್ಮವಿಷ್ಣುಮರುದ್ಗಣಾಃ ॥೪॥

ಗಂಧರ್ವಾಃ ಕಿನ್ನರಾ ಯಕ್ಷಾಸ್ತಥಾ ಕಿಂಪುರುಷಾದಯಃ ।
ಮಂತ್ರೇಣಾನೇನ ದೇವೇಶಂ ಪೂಜಯಂತಿ ವಿಧಾನತಃ ॥೫॥

ಪಂಚಾಕ್ಷರಾಶ್ರಯಾಸ್ಸರ್ವೇ ಮುನಯೋ ಯೇ ತಪೋಧನಾಃ ।
ಅಸುರಾ ಯಾತುಧಾನಾಶ್ಚ ಸಿದ್ಧವಿದ್ಯಾಧರಾದಯಃ ॥೬॥

ಲಿಂಗಬಿಲ್ವದಲೈರ್ನಿತ್ಯಂ ನೀರೈರಪಿ ಯಥಾವಿಧಿ ।
ಮಮಾಪಿ ಭವಸಾರೇಣ ಭಕ್ತಿರೇವಾತ್ರ ಕಾರಣಂ ॥೭॥

ಫಲಮಾಢ್ಯದರಿದ್ರಾಣಾಂ ಸಮಮೇವಾಂಡಜೇಶ್ವರ ।
ಭಕ್ತ್ಯಾ ಪ್ರಸೀದತಿ ಶಿವೋ ಭಕ್ತ್ಯಾ ಮುಕ್ತಿಂ ಪ್ರಯಚ್ಛತಿ ॥೮॥

ಭಕ್ತ್ಯೈವ ಲಭ್ಯತೇ ಜ್ಞಾನಂ ವೇದವೇದಾಂತವಾಕ್ಯಜಂ ।
ತತ್ತ್ವಂ ಬ್ರಹ್ಮೇತಿ ವಾಕ್ಯಾನಾಂ ಭಾವನಾ ಭಕ್ತಿರೇವ ಚ ॥೯॥

---

ಸುವವನು ಮರಣರಹಿತನಾಗಿ ಸಾಕ್ಷಾಚ್ಛಿವಸ್ವರೂಪಿಯೆನಿಸುವನು. ಏಕೆಂದರೆ ಬ್ರಹ್ಮ ವಿಷ್ಣುವೇ ಮೊದಲಾದ ಸಕಲದೇವತೆಗಳೂ ಶಿವಪಂಚಾಕ್ಷರ ಜಪಮಹಿಮೆಯಿಂದಲೇ ಪ್ರಸಿದ್ಧಿಗೆ ಬಂದಿರುವರು. ॥೩-೪॥

ಸಮಸ್ತ ಮಹರ್ಷಿಗಳೂ, ತಪಸ್ವಿಗಳೂ, ಗಂಧರ್ವರೂ, ಕಿನ್ನರರೂ, ಯಕ್ಷ ಕಿಂಪುರುಷಾದಿಗಳೂ, ದಾನವರಾಕ್ಷಸಾದಿಗಳೂ, ಸಿದ್ಧವಿದ್ಯಾಧರಾದಿಗಳೂ ಈ ಮಂತ್ರ ವನ್ನೇ ಆಶ್ರಯಿಸಿ, ಇದರಿಂದಲೇ ಪರಶಿವನನ್ನು ಆರಾಧಿಸುತ್ತಿರುವರು. ॥೫-೬॥

ಶಿವಲಿಂಗವನ್ನು ಯಾರು ನಿತ್ಯವೂ ಬಿಲ್ವದಳ ಮತ್ತು ಶುದ್ಧೋದಕ ಇವುಗಳಿಂದ ಭಕ್ತಿಪೂರ್ವಕವಾಗಿ ಆರಾಧಿಸುವರೋ, ಅವರು ಬಡವರಾಗಲಿ, ಶ್ರೀಮಂತರಾಗಲಿ ಪರಶಿವನು ಅವರಲ್ಲಿ ಸಮಭಾವನೆಯಿಟ್ಟು ರಕ್ಷಿಸುವನು. ಪರಶಿವನು ಭಕ್ತಿಯಿಂದ ಮೆಚ್ಚುವಂತೆ ಮತ್ತಾವ ಸಾಮಗ್ರಿಗೂ ಒಲಿಯಲಾರನು. ಇದು ನಿಶ್ಚಯ. ॥೭-೮॥

ವೇದವೇದಾಂತಗಳಲ್ಲಿ ಮುಕ್ತಿಸಾಧಕವಾದದ್ದು ಜ್ಞಾನವೆಂದು ಹೇಳಲ್ಪಡು ತ್ತಿದೆಯಷ್ಟೆ. ಅಂತಹ ಜ್ಞಾನವು ಲಭಿಸಬೇಕಾದರೆ ಶಿವಭಕ್ತಿಯು ಮುಖ್ಯವಾಗಿರ

ಮುಕ್ತಿಪ್ರದಂ ಮಹಾದೇವಂ ಮತ್ವಾ ತಿಷ್ಠತಿ ಧೀರಧೀಃ ।
ಕಥಮನ್ಯೇ ಸುರಾಸ್ಸರ್ವೇ ಮುಕ್ತಿದಾನಕ್ಷಮಾ ದ್ವಿಜ ॥೧೦॥

ಪಶವಸ್ಸರ್ವದೇವಾಶ್ಚ ಸ ಪತಿಃ ಪರಮೇಶ್ವರಃ ।
ಸ ಏವ ಮೋಚಕಸ್ತೇಷಾಂ ಪಶೂನಾಂ ಪತಿರೀಶ್ವರಃ ॥೧೧॥

ಭಕ್ತ್ಯಾ ಲಿಂಗೇರ್ಚಿತೋ ಬಿಲ್ವೈಃ ಪಾಶೇಭ್ಯೋ ಮೋಚಯೇತ್ಪಶೂನ್ ।
ಮಾಯಾಪಾಶಾಃ ಪ್ರಕೀರ್ತ್ಯಂತೇ ಕಾಮಕ್ರೋಧೋರುಲೋಭಕಾಃ ॥೧೨॥

ಮದಮಾತ್ಸರ್ಯಮೋಹಾದ್ಯಾ ಈಷಣಾದಿತ್ರಯಂ ತಥಾ ।
ವರ್ಣಾಶ್ರಮೌ ಕುಲಂ ಜಾತಿರ್ಧನಾದ್ಯಖಿಲಸಂಪದಃ ॥೧೩॥

ಪುಣ್ಯಪಾಪಾದಯಶ್ಚೈವ ಸ್ವರ್ಗಂ ಚ ನರಕಂ ತಥಾ ।
ದೇವತಿರ್ಯಙ್ನರಾಕಾರಾಜ್ಞಾನಂ ತತ್ಸೌಖ್ಯವಿಭ್ರಮಂ ॥೧೪॥

---

ಬೇಕು. ತತ್ತ್ವಮಸ್ಯಾದಿ ಮಹಾವಾಕ್ಯಗಳ ಮುಖ್ಯಾರ್ಥವು ಭಕ್ತಿಗೇ ಪ್ರಾಶಸ್ತ್ಯ ಕೊಡುವಂತಿರುವುದು. ಜಿತೇಂದ್ರಿಯನಾದ ಮನುಷ್ಯನು, ಮುಕ್ತಿಪ್ರದನಾದವನು ಮಹಾದೇವನೊಬ್ಬನೇ ಎಂದು ನಿಶ್ಚಯಮಾಡಿ ಹೇಳುವಾಗ, ಇತರ ದೇವತೆಗಳು ಮುಕ್ತಿಯನ್ನು ಹೇಗೆ ಕೊಡಬಲ್ಲರು. ॥೯-೧೦॥

ಸಮಸ್ತ ದೇವತೆಗಳೂ ಪಶುಗಳು ಅವರಿಗೆ ಒಡೆಯನಾದವನೇ ಪತಿಶಬ್ದ ವಾಚ್ಯನಾದ ಪರಶಿವನು. ಪಶುಗಳನ್ನು ಸಂಸಾರಸಂಬಂಧವಾದ ಪಾಶಗಳಿಂದ ವಿಮೋಚನೆಮಾಡುವವನು ಸಾಕ್ಷಾತ್ಪತಿಯೇ. ಇಂತಹ ಪಶುಪತಿಯನ್ನು ಶಿವಲಿಂಗ ದಲ್ಲಿ ಬಿಲ್ವಾದಿಗಳಿಂದ ಪೂಜಿಸಿದವರು, ಯಮಪಾಶದಿಂದ ಬಿಡುಗಡೆ ಹೊಂದುವರು. ಕಾಮ, ಕ್ರೋಧ, ಲೋಭ ಇವುಗಳನ್ನು ಮಾಯಾಪಾಶಗಳೆಂದು ಕರೆಯುವರು. ॥೧೧-೧೨॥

ಮದ, ಮಾತ್ಸರ್ಯ, ಮೋಹ, ವರ್ಣ, ಆಶ್ರಮ, ಕುಲ, ಜಾತಿ, ಅಖಿಲ ಸಂಪತ್ತುಗಳು, ಪುಣ್ಯ, ಪಾಪ, ಸ್ವರ್ಗ, ನರಕ ಮತ್ತು ದೇವತೆಗಳ ಪ್ರಾಣಿಗಳ ಮಾನವರ ಆಕಾರಜ್ಞಾನ, ಸುಖಭ್ರಾಂತಿ, ಇವೂ ಮಾಯಾಪಾಶಗಳೇ. ॥೧೩-೧೪॥

ಸಂಸಾರೇ ಸೌಖ್ಯತಾಜ್ಞಾನಂ ವಿಷಯಾದಿ ಸುಖಭ್ರಮಃ ।
ವಿಚಾರರಹಿತಂ ಚೇತೋ ಧಾರಣಂ ಗುಣಿನಾಂ ತ್ರಯಂ ॥೧೫॥

ಏತೇ ಪಾಶಾಃ ಪ್ರಕೀರ್ತ್ಯಂತೇ ಪತಿಪೂಜಾಪ್ರಭಾವತಃ ।
ಶಿವಲಿಂಗಾರ್ಚನೇನೈವ ಪಾಶೇಭ್ಯೋ ಮುಚ್ಯತೇಽಖಿಲೈಃ ॥೧೬॥

ಅಗ್ನಿರಿತ್ಯಾದಿಭಿರ್ಭಸ್ಮ ಗೃಹೀತ್ವಾ ಚ ತದೇವ ಹಿ ।
ಪರಿಮೃಜ್ಯಾಂಡಜೇಶಸ್ಯ ಕಶ್ಯಪಃ ಶಾಂಭವೋತ್ತಮಃ ॥೧೭॥

ದದೌ ಪಂಚಾಕ್ಷರೀಂ ವಿದ್ಯಾಂ ಸರ್ವಪಾಪಪ್ರಣಾಶಿನೀಂ ।
ಸ ತಯಾ ವಿದ್ಯಯಾ ರೇಜೇ ಪಕ್ಷೀಶೋ ಪಾಪವರ್ಜಿತಃ ॥೧೮॥

ಪರಮೇಶ್ವರಪಾದಾಬ್ಜಂ ಧ್ಯಾಯನ್ಮಂತ್ರಂ ಸಮಭ್ಯಸತ್ ।
ಮುಕ್ತಮೇಘ ಇವಾದಿತ್ಯೋ ವಿರಾಜತಿ ಯಥಾ ತಥಾ ॥೧೯॥

ಪಕ್ಷೀಶೋ ಮಂತ್ರಮಾಹಾತ್ಮ್ಯಾತ್ ತದಾ ರೇಜೇ ಮುದಾಯುತಃ ।
ಶಿವಲಿಂಗಾರ್ಚನವಿಧಿಂ ಉಕ್ತವಾನ್ ಕಶ್ಯಪಸ್ತದಾ ॥೨೦॥

---

ಸಂಸಾರದಲ್ಲಿ ಸುಖಭ್ರಾಂತಿ, ವಿಷಯ ಸುಖಗಳಲ್ಲಿ ಸುಖತ್ವೇನ ಪ್ರವೃತ್ತಿ, ವಿಮರ್ಶೆಯಿಲ್ಲದೆ ಮುಂದುವರಿಯುವ ಮನಸ್ಸು, ಇವು ಪಾಶಗಳು. ಆದರೆ ಜ್ಞಾನಿಗಳಿಗೆ ಇವು ಭೂಷಣಗಳೆನಿಸುವುವು. ಮೇಲೆ ಹೇಳಿದ ಈ ಪಾಶಗಳಿಂದ ನಿವೃತ್ತಿ ಹೊಂದಬೇಕಾದರೆ, ಪತಿಯೆನಿಸಿದ ಪರಶಿವನನ್ನು ಲಿಂಗಾರ್ಚನೆಯ ಮೂಲಕ ಸಂತೋಷಪಡಿಸಬೇಕು. ಆಗ ಪಶುವು ಪಾಶಮುಕ್ತನೆನಿಸುವನು. ||೧೫-೧೬||

ಹೀಗೆ ಶಿವಧರ್ಮವನ್ನೆಲ್ಲಾ ಬೋಧಿಸಿ ಕಶ್ಯಪಋಷಿಯು ಗರುಡನಿಗೆ 'ಅಗ್ನಿರಿತಿ ಭಸ್ಮ' ಎಂಬ ಮಂತ್ರೋಚ್ಚಾರಣೆಯಿಂದ ಭಸ್ಮವನ್ನು ಮೈಗೆಲ್ಲಾ ಬಳಿದು, ಸರ್ವಪಾಪನಿವಾರಕವಾದ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದನು. ಆ ಮಂತ್ರೋಪದೇಶದಿಂದ ಪಕ್ಷಿರಾಜನು ಪಾಪನಿರ್ಮುಕ್ತನಾಗಿ ತೇಜಸ್ಸಿನಿಂದ ಪ್ರಕಾಶಿಸತೊಡಗಿದನು. ||೧೭-೧೮||

ಗರುಡನೂ ಸಹ ಆ ಮಂತ್ರವನ್ನು ಶಿವಪಾದ ಧ್ಯಾನದಿಂದಲೇ ಅಭ್ಯಾಸ ಮಾಡಿದನು. ಆ ಮಂತ್ರ ಮಹಿಮೆಯಿಂದ ಮೇಘಾವರಣದಿಂದ ಹೊರಗೆ ಬಂದ ಸೂರ್ಯನಂತೆ ಗರುಡನು ಬಹಳವಾಗಿ ಪ್ರಕಾಶಿಸತೊಡಗಿದನು. ಅಂತಹ ಪುತ್ರನಿಗೆ

ಪೂಜಾಪ್ರಭಾವವೇತ್ತಾರಂ ತಂ ಚ ಕೃತ್ವಾಂಡಜೇಶ್ವರಂ ।
ಕಶ್ಯಪಃ ಪ್ರಾಹ ತಂ ಪುತ್ರಮೇವಮಭ್ಯರ್ಚಯೇತಿ ತಂ ॥೨೧॥

ಭಸ್ಮತ್ರಿಪುಂಡ್ರಪರಿವರ್ಜಿತಫಾಲದೇಶಾ
ದ್ಭೂಭಾರಭೂಸುರವರಾದಪಿ ಭಾಸುರಾಚ್ಚ ।
ಆಚಾರತೋಽಪಿ ಸುವಿಚಾರಿತವೇದಭಾಗ
ಸಾರಾರ್ಥತಃ ಶಿವಪದಾರ್ಚನಹೀನವೃತ್ತೇಃ ॥೨೨॥

ರಥ್ಯಾಸು ಸರ್ವಮಲದಗ್ಧವಿದಗ್ಧಭಸ್ಮ ।
ಗಾತ್ರೈಃ ಸದಾ ಖರತರಃ ಖರ ಏಷ ವರ್ಯಃ ॥೨೩॥

ಮೂಢಃ ಕಾಮೇಷುವಿದ್ಧೋ ದೃಢತರಭವಜಾಪಾರಕಾರಾಗೃಹೀತೋ
ಭ್ರಾಂತಃ ಪುತ್ರಕಲತ್ರಮಿತ್ರನಿವಹೈರ್ಬಂಧೋದ್ಯತೈರ್ಬಂಧುಭಿಃ ।
ಬುದ್ಧೋ ಬುದ್ಧತರೋಽಪಿ ಪಾಶನಿಕರೈಃ ಸರ್ವೇಷಣಾಭಿಶ್ಚಿರಂ
ಈಶಾನಾರ್ಚನವರ್ಜನಾಥಮಮತಿಃ ಶಂಭೋಃ ಪ್ರಸಾದೋಜ್ಝಿತಃ ॥೨೪॥

---

ಕಶ್ಯಪಋಷಿಯು ಮತ್ತೆ ಶಿವಪೂಜಾಕ್ರಮವನ್ನೆಲ್ಲಾ ತಿಳಿಸಿ, ಅದರಲ್ಲಿ ಅವನನ್ನು ನಿಷ್ಣಾತನನ್ನಾಗಿ ಮಾಡಿ, ಅಲ್ಲಿಂದ ಮುಂದೆ ಶಂಕರನನ್ನು ಅರ್ಚಿಸುವುದಕ್ಕೆ ಅಪ್ಪಣೆ ಕೊಟ್ಟನು. ॥೧೯-೨೦-೨೧॥

ಶ್ರೇಷ್ಠವಾದ ಭೂಸುರ ಜನ್ಮದಲ್ಲಿ ಹುಟ್ಟಿ, ತೇಜಸ್ವಿಯಾದ ಶರೀರವನ್ನು ಹೊಂದಿದ್ದರೂ, ಹಣೆಯಲ್ಲಿ ಭಸ್ಮತ್ರಿಪುಂಡ್ರರಹಿತನಾಗಿರುವವನು, ಹಾಗೆಯೇ ಅನೇಕ ವಿಧವಾದ ಆಚಾರಂಗಳನ್ನು ನಡೆಸುತ್ತಾ ವೇದವೇದಾಂತಗಳ ಅರ್ಥವನ್ನೆಲ್ಲಾ ವಿಮರ್ಶೆ ಮಾಡಿದರೂ ಶಿವಪಾದಪೂಜಾ ವಿಮುಖನಾಗಿರುವವನು, ಇವರಿಬ್ಬರೂ ನಿಜವಾಗಿಯೂ ಭೂಭಾರವೇ ಸರಿ. ಇವರಿಗಿಂತಲೂ, ಬೀದಿಯಲ್ಲಿ ಮಲಮೂತ್ರರಾಶಿಗಳ ಮೇಲೆ ಹೊರಳಾಡಿ ಎಸೆದಿರುವ ಬೂದಿಯನ್ನು ಮೈಗೆ ಹಚ್ಚಿಕೊಂಡು ಓಡಾಡುವ ಒರಟು ಕತ್ತೆಯು ಶ್ರೇಷ್ಠತರವಾದದ್ದೆಂದು ತಿಳಿ. ॥೨೨-೨೩॥

ಅಜ್ಞಾನಿಯಾಗಿ, ಕಾಮಬಾಣಗಳಿಗೆ ಸಿಕ್ಕಿ, ಕಠಿನವಾದ ಸಂಸಾರ ಬಂಧನಗಳಲ್ಲಿ ಕಟ್ಟಲ್ಪಟ್ಟು, ಪುತ್ರ, ಪತ್ನಿ, ಸ್ನೇಹಿತರು, ಬಂಧುಗಳು ಇವರುಗಳ ಮೋಹದಲ್ಲಿ ಬೇಸತ್ತು, ಕಾಮಕ್ರೋಧಾದಿಗಳೆಂಬ ಮಾಯಾಪಾಶಕ್ಕೆ ಸಿಕ್ಕಿ, ಪ್ರಪಂಚವು ನಶ್ವರವೆಂದು ತಿಳಿದಿದ್ದರೂ ಅದರಲ್ಲಿಯೇ ನರಳುತ್ತಾ, ಈಶ್ವರನ ಪಾದಕಮಲಗಳ

ಕಿಂ ತೂತ್ತನುರ್ಣಮಥಮರ್ಣಗಭೀರನೀರಂ
ಘೋರಭ್ರಮಾರ್ಣವಮಿದಂ ಪರಿಪೂರ್ಣಕಾಮಃ ।
ತೂರ್ಣಂ ಸದಾಭ್ಯರ್ಣಹೃದಂ ಸದಾ ಮಾಂ
ಸಂತಾರಯಸ್ವ ಕರುಣಾಂತರಕರ್ಣಧಾರ ॥೨೫॥

ದಿವ್ಯ ಶ್ರೀಶಿಪಿವಿಷ್ಟಚಾರುಚರಣಾಂಭೋಜ ಪ್ರಭಾಭಾವತೋ
ಭಾವೋ ಜನ್ಮಪರಂಪರಾಸು ನ ಭವೇಚ್ಛ್ರೀಶೈವಲಿಂಗಾರ್ಚಕಃ ।
ಮಾಯಾಭಾವಮವಾಪ್ಯ ಭಾವಜನಿತೋ ಭಾವೋ ಭವಾನೀಪತಿ
ಧ್ಯಾನಾನಂದಸಮುದ್ರಮಗ್ನಹೃದಯೋ ಭೇದಪ್ರಭಾವೋಜ್ಝಿತಃ ॥೨೬॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ಅಷ್ಟಾದಶೋಽಧ್ಯಾಯಃ

---

ಅರ್ಚನೆಯಿಂದ ದೂರನಾಗಿರುವವನಿಗೆ ಎಂದಿಗೂ ಶಿವಾನುಗ್ರಹವು ಲಭಿಸಲಾರದು. ಅಂಥವನು ಎಂದಿಗೂ ದುಃಖಭಾಗಿಯೇ ಸರಿ. ॥೨೪॥

ಪರಮೇಶ್ವರನೇ, ಈ ಲೋಕದ ಜೀವನವೆಂಬುದು ಒಂದು ಘೋರ ಸಮುದ್ರ ದಂತಿದೆ. ಅದರಲ್ಲಿ ಸಾಲಗಾರ, ಸಾಹುಕಾರರೆಂಬ ಭಾವನೆಯುಳ್ಳ ಜೀವಿಗಳೇ ಮೇಲೆ ಕೆಳಗೆ ಹಾರಾಡುವ ನೀರು. ಭಯಂಕರವಾದ ಭ್ರಾಂತಿಯೆಂಬುದೇ ಒಂದು ಮಡು. ಇಂತಹ ನೀರಿನ ಸುಳಿಯಲ್ಲಿ ಮುಳುಗಿ ದಡಕಾಣದೆ ನರಳುತ್ತಾ, ಸದಾ ಹೃದಯದಲ್ಲಿ ನಿನ್ನ ಪಾದವನ್ನೇ ನಂಬಿರುವ ನನ್ನನ್ನು ಕರುಣಾರಸಭರಿತನೂ, ಪರಿಪೂರ್ಣಕಾಮನೂ ಎನಿಸಿ ನಾವಿಕನಂತಿರುವ ನೀನು ಈ ಭವಸಾಗರದಿಂದ ಆಚೆಗೆ ದಾಟಸಲಾರೆಯಾ ! ॥೨೫॥

ಶ್ರೇಷ್ಠನಾದ ಪರಮೇಶ್ವರನ ಪಾದಕಮಲಗಳ ತೇಜಸ್ಸನ್ನು ಪಡೆದವನು ಒಂದು ಜನ್ಮದಲ್ಲಿಯೂ ಶಿವಲಿಂಗಾರ್ಚನೆ ಮಾಡುವ ಯೋಗ್ಯತೆಯುಳ್ಳವನು ಆಗ ಲಾರನು. ಆದರೆ ಶಿವಮಹಿಮೆಯನ್ನು ತಿಳಿದು, ಅದಕ್ಕೆ ಸಿಲುಕದೇ ಸ್ಥಿರಬುದ್ಧಿಯಿಂದ ಭವಾನೀಪತಿಯನ್ನು ಆರಾಧಿಸಿ, ತದೇಕಧ್ಯಾನಚಿತ್ತನಾಗಿ ಶಿವಧ್ಯಾನವೆಂಬ ಆನಂದ ಸಮುದ್ರದಲ್ಲಿ ಮುಳುಗಿದವರು ಸಾಕ್ಷಾಚ್ಛಿವಸ್ವರೂಪಿಯಾಗಿ ಶಿವಾಭೇದವನ್ನು ಪಡೆ ಯುವನು. ಇದರಲ್ಲಿ ಸಂಶಯವಿಲ್ಲ. ಆದ್ದರಿಂದ ನೀನೂ ತಪ್ಪದೆ ಶಿವನನ್ನೇ ಆರಾಧಿ

ಸುತ್ತಿದ್ದು ಶಿವಾನುಗ್ರಹವನ್ನು ಪಡೆ. ಇದರಿಂದ ನೀನು ಸರ್ವಸಿದ್ಧಿಯನ್ನೂ ಪಡೆಯುವೆ. ನನ್ನ ಉಪದೇಶವನ್ನು ಸರಿಯಾಗಿ ಅರಿತು ಶಿವಾರಾಧನೆಮಾಡು ಎಂದು ಕಶ್ಯಪ ಮಹರ್ಷಿಯು ಪಕ್ಷಿರಾಜನಾದ ಗರುಡನಿಗೆ ಹೇಳಿದನು. ||೨೬||

ಇಲ್ಲಿಗೆ ಶ್ರೀ ಶಿವರಹಸ್ಯದ ಎಂಟನೆಯ ಅಂಶದಲ್ಲಿ ಹದಿನೆಂಟನೆಯ
ಅಧ್ಯಾಯವು ಸಮಾಪ್ತವಾದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಏಕೋನವಿಂಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಕೃತನಿತ್ಯಕ್ರಿಯಃ ಪ್ರಾತಃ ಸಮಭ್ಯುಕ್ಷ್ಯಾಥ ವಾರಿಣಾ ।
ನದೀತೀರೇ ಶಿವಾಗಾರೇ ಬಿಲ್ವಮೂಲೇಽಪಿ ವಾ ದ್ವಿಜ ॥೧॥

ಭಸ್ಮಾಭ್ಯಕ್ತತನುರ್ನಿತ್ಯಂ ತ್ರಿಪುಂಡ್ರಾಣಿ ಚ ಧಾರಯನ್ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ಸರ್ವಾಂಗಂ ಪರಿಮಾರ್ಜ್ಯ ವೈ ॥೨॥

ಭಸ್ಮನಾ ಪಾದಪರ್ಯಂತಂ ಶ್ರೌತೇನ ವಿರಜೇನ ಚ ।
ತ್ರಿಯಾಯುಷೈಸ್ತ್ರಿಪುಂಡ್ರಾಂಕೋ ಕುಶಾಸನ ಉದಙ್ಮುಖಃ ॥೩॥

---

## ಹತ್ತೊಂಬತ್ತನೆಯ ಅಧ್ಯಾಯ

ಕಶ್ಯಪಮಹರ್ಷಿಯು ಪುತ್ರನಾದ ಗರುಡನಿಗೆ ಶಿವಪೂಜಾಕ್ರಮವನ್ನು ವಿವರಿಸುತ್ತಾ ಮತ್ತೆ ಹೀಗೆಂದನು:—ಪಕ್ಷಿರಾಜನೇ, ನೀನು ಪ್ರತಿದಿನವೂ ಪ್ರಾತಃಕಾಲ ನಿನ್ನ ನಿತ್ಯಕ್ರಿಯೆಗಳನ್ನೆಲ್ಲಾ ಮುಗಿಸಿಕೊಂಡು ನದೀತೀರ, ಅಥವಾ ಶಿವಾಲಯ, ಅಥವಾ ಬಿಲ್ವತರುಮೂಲ, ಇಲ್ಲಿ ನೆಲವನ್ನು ನೀರಿನಿಂದ ಪ್ರೋಕ್ಷಿಸಿಕೊಂಡು ಶುದ್ಧಿಗೊಳಿಸಿ, ಅನಂತರ 'ಅಗ್ನಿರಿತಿ ಭಸ್ಮ' ಮುಂತಾದ ಮಂತ್ರದಿಂದ ಭಸ್ಮೋದ್ಧೂಲನವನ್ನು, ಹಣೆಗೆ ಭಸ್ಮತ್ರಿಪುಂಡ್ರವನ್ನೂ ಧರಿಸಿಕೊ. ॥೧-೨॥

ಶ್ರೌತಾಗ್ನಿಯಿಂದ ಸಿದ್ಧವಾದ, ಧೂಳುಮಿಶ್ರವಲ್ಲದ ಭಸ್ಮವನ್ನು ಪಾದಾದಿಯಾಗಿ ಶಿರಃಪರ್ಯಂತ ಸಕಲ ದೇಹಕ್ಕೂ ಬಳಿದುಕೊಳ್ಳಬೇಕು. 'ತ್ರ್ಯಾಯುಷಂ

ಪ್ರಾಙ್ಮುಖೋ ವಾ ಸದಾ ದೇವೇ ಮುಖೇ ತತ್ಪೂರ್ಷಕೇಪಿ ವಾ ।
ಸದ್ಯೋಜಾತಮುಖೇ ವಾಪಿ ಧೃತರುದ್ರಾಕ್ಷಮಾಲಿಕಃ ॥೪॥

ಕಂಠಕರ್ಣಗಲೇಷ್ವೇವ ವಕ್ಷೋ ಬಾಹು ಶಿರಸ್ಯಪಿ ।
ಪಂಚಾಕ್ಷರಮಿದಂ ಮಂತ್ರಂ ಸತಾರಂ ಪ್ರಜಪೇದ್ದ್ವಿಜ ॥೫॥

ಸಹಸ್ರಂ ವಾ ತದರ್ಧಂ ವಾ ಶತಮಷ್ಟೋತ್ತರಂ ತು ವಾ ।
ಉಮಾಸಹಾಯಂ ದೇವೇಶಂ ಧ್ಯಾಯನ್ನಾಸಾಗ್ರಲೋಚನಃ ॥೬॥

ಹೃತ್ಪದ್ಮಸದ್ಮಗಂ ದೇವಂ ತ್ರಿನೇತ್ರಂ ಚಂದ್ರಶೇಖರಂ
ಸರ್ವಾಭರಣಸಂಯುಕ್ತಂ ಫುಲ್ಲಪಂಚಮುಖಾಂಬುಜಂ ॥೭॥

ತ್ರಿಪುಂಡ್ರೇಣೋಜ್ಜ್ವಲತ್ಫಾಲಂ ಟಂಕಪಾಶಾಹಿ ಶೂಲಭೃತ್ ।
ವೃತ್ತ ಬಾಹುಚತುಷ್ಟೋತ್ಥ ಪ್ರಭಾಭರವಿಶೋಭಿತೇ ॥೮॥

---

ಜಮದಗ್ನೇರಿತಿಲಲಾಟೇ' ಇತ್ಯಾದಿ ಮಂತ್ರವನ್ನು ಚ್ಚರಿಸುತ್ತಾ ಭಸ್ಮತ್ರಿಪುಂಡ್ರವನ್ನು ದರ್ಭಾಸನದಲ್ಲಿ ಉತ್ತರಾಭಿಮುಖವಾಗಿಯೋ, ಪೂರ್ವಾಭಿಮುಖವಾಗಿಯೋ ಕುಳಿತು ಧರಿಸಬೇಕು. (ಪರಶಿವನ ಪೂರ್ವದಿಕ್ಕಿನ ಮುಖವೇ ತತ್ಪುರುಷ ಮುಖ. ಉತ್ತರ ದಿಕ್ಕಿನ ಮುಖವೇ ಸದ್ಯೋಜಾತ.) ಅನಂತರ ಕಂಠ, ಕಿವಿ, ಕತ್ತು, ಎದೆ, ಬಾಹು, ಶಿರಸ್ಸು ಈ ಅಂಗಗಳಿಗೆ ರುದ್ರಾಕ್ಷಿಮಾಲೆಯನ್ನು ಹಾಕಿಕೊಳ್ಳಬೇಕು. ಅನಂತರ ಪ್ರಣವ ಸಹಿತವಾಗಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಬೇಕು. ॥೪-೫॥

ಜಪಸಂಖ್ಯೆಯು ಸಾವಿರ, ಅಥವಾ ಐದುನೂರು, ಅಥವಾ ನೂರೆಂಟು ಹೀಗಿರಬೇಕು. ಈ ಮಂತ್ರವನ್ನು ಜಪಿಸುತ್ತಾ ಮತ್ತಾವ ವಸ್ತುವನ್ನೂ ದೃಷ್ಟಿಸಿನೋಡದೇ ತನ್ನ ಮೂಗಿನ ತುದಿಯಲ್ಲಿ ದೃಷ್ಟಿಯಿಟ್ಟು ಪರಶಿವನ ಸ್ವರೂಪವನ್ನು ಈ ರೀತಿ ಧ್ಯಾನಿಸಬೇಕು:— ಉಮಾಪತಿಯಾದ ಮಹೇಶ್ವರನಿಗೆ ಮೂರು ಕಣ್ಣುಗಳಿವೆ. ತಲೆಯಲ್ಲಿ ಚಂದ್ರಲೇಖೆಯಿದೆ. ಸದಾ ಶಿವನು ಭಕ್ತರ ಹೃದಯಕಮಲದಲ್ಲಿ ವಾಸಿಸುವನು. ಸರ್ವಾಭರಣಗಳಿಂದ ಅಲಂಕೃತನಾಗಿರುವನು. ಅರಳಿದ ಕಮಲಗಳಂತೆ ಶೋಭಿಸುವ ಐದು ಮುಖಗಳುಳ್ಳವನು. ಹಣೆಯಲ್ಲಿ ಭಸ್ಮತ್ರಿಪುಂಡ್ರವೂ, ಕೈಗಳಲ್ಲಿ ಟಂಕ, ಪಾಶ, ಸರ್ಪ, ತ್ರಿಶೂಲ ಇವುಗಳಿವೆ. ದುಂಡಾದ ನಾಲ್ಕು ತೋಳುಗಳ ಕಾಂತಿಯಿಂದ ದೇಹವೆಲ್ಲಾ ಪ್ರಕಾಶಮಾನವಾಗಿರುವುದು. ॥೬-೭-೮॥

ಸರ್ವಾಂಗಸುಂದರೀಂ ದೇವೀಂ ಚಂದ್ರಾರ್ಧಮುಕುಟೋಜ್ಜ್ವಲಾಂ ।
ನಾಸಾಭರಣಶೋಭಾಢ್ಯಾಂ ರತ್ನಾಭರಣಭಾಸುರಾಂ ॥೯॥

ತಾಟಂಕದ್ವಯಸಂಶೋಭಿಮಹೇಂದುಸದೃಶಾನನಾಂ ।
ಮಹಾಗಂಧಜಕಸ್ತೂರೀಪಾಟೀರದ್ರವಲೇಪಿತಾಂ ॥೧೦॥

ಚಂಪಕೈರ್ಮಲ್ಲಿಕಾಜಾಜೀಮಾಲತೀಸರಭೂಷಿತಾಂ ।
ತಾಂಬೂಲರಾಗರಕ್ತಾಭಾಂ ಬಿಂಬಾಧರಮನೋಹರಾಂ ॥೧೧॥

ಹಸ್ತಪಾದಾಗ್ರಸಂಶೋಭಿಕಿಂಕಿಣೀನೂಪುರೋಜ್ಜ್ವಲಾಂ ।
ಫುಲ್ಲಹಲ್ಲಕಹಸ್ತಾಗ್ರಾಂ ಹರವಾಮಾಂಕಗಾಂ ಸದಾ ॥೧೨॥

ಪಾರ್ಶ್ವದ್ವಯೇ ಷಡಾಸ್ಯೇನ ಗಜಾಸ್ಯೇನ ಚ ಶೋಭಿತಾಂ ।
ಧ್ಯಾಯೇದ್ದೇವಂ ಮಹಾದೇವಂ ಸಾಂಬಂ ಚಾರುತ್ರಿಲೋಚನಂ ॥೧೩॥

ಶುದ್ಧಸ್ಫಾಟಿಕಸಂಕಾಶಂ ನೀಲಕಂಠಂ ಶಿವಂ ತಥಾ ।
ಮಹಾಮರಕತೋದ್ಗರ್ಭಸಚ್ಛಾಯಾಂ ಚಾರುಹಾಸಿನೀಂ ॥೧೪॥

---

ಪರಶಿವನ ವಾಮಾರ್ಧದಲ್ಲಿ ಪಾರ್ವತೀದೇವಿಯು ವಿರಾಜಿಸುತ್ತಿರುವಳು. ಆ ದೇವಿಯು ಸರ್ವಾಂಗ ಸುಂದರಿಯು. ತನ್ನ ಕಿರೀಟದಲ್ಲಿ ಅರ್ಧಚಂದ್ರಕಲೆಯನ್ನು ಧರಿಸಿರುವಳು. ಸುಂದರವಾದ ಮೂಗುಬೊಟ್ಟಿನಿಂದಲೂ ರತ್ನಾಭರಣಗಳಿಂದಲೂ, ಪ್ರಜ್ವಲಿಸುವ ಕಿವಿಯೋಲೆಗಳಿಂದಲೂ ಪೂರ್ಣಚಂದ್ರನಂತೆ ಪ್ರಕಾಶಿಸುತ್ತಿರುವಳು. ಶ್ರೀಗಂಧ, ಕಸ್ತೂರಿ ಮುಂತಾದ ಸುಗಂಧದ್ರವ್ಯಗಳಿಂದಲೂ, ಸಂಪಿಗೆ, ಮಲ್ಲಿಗೆ, ಜಾಜೀ, ಮಾಲತೀ ಮುಂತಾದ ಸುಗಂಧ ಪುಷ್ಪಹಾರಗಳಿಂದಲೂ, ಗಮಗಮಿಸುತ್ತಿರುವಳು. ದೇವಿಯ ತುಟಿಗಳು ತಾಂಬೂಲರಾಗದ ಕೆಂಪಿನಿಂದ ಮನೋಹರವಾಗಿರುವುವು. ಮುಂಗೈ ಮತ್ತು ಮುಂಗಾಲುಗಳಲ್ಲಿ ರತ್ನಮಯವಾದ ಬಳೆಗಳು ಧ್ವನಿಗೈಯುತ್ತಿರುವುವು. ಅರಳಿದ ಕಲ್ಹಾರಪುಷ್ಪಗಳನ್ನು ಕೈಯಲ್ಲಿ ಹಿಡಿದು ಪರಶಿವನ ಎಡಭಾಗದಲ್ಲಿ ಮಂಡಿಸಿರುವಳು. ತನ್ನ ಎರಡು ಪಕ್ಕಗಳಲ್ಲಿಯೂ, ಕ್ರಮವಾಗಿ ಗಣಪತಿ, ಷಣ್ಮುಖ ಇವರು ಕುಳಿತಿರುವರು. ಇಂತಹ ದೇವಿಯೊಡನೆ ಪ್ರಕಾಶಿಸುವ ಮಹೇಶ್ವರ ಸ್ವರೂಪವನ್ನು ಧ್ಯಾನಕಾಲದಲ್ಲಿ ಅನುಸಂಧಾನಮಾಡಬೇಕು. ಮತ್ತು ಶುದ್ಧ ಸ್ಫಟಿಕದಂತೆ ಶುಭ್ರದೇಹಿಯಾಗಿಯೂ ನೀಲಕಂಠನೆನಿಸಿಯೂ ಇರುವ

ಏವಂ ಧ್ಯಾತ್ವಾ ಚಿರಂ ದೇವಂ ಲಿಂಗೇಚಾವಾಹ್ಯ ತಂ ಶಿವಂ ।
ಪಾದಾರ್ಘ್ಯಾಚಮನೈಃ ಪುಷ್ಪಗಂಧಾಂಬುಪರಿಪೂರಿತೈಃ ॥೧೩॥

ಪಾತ್ರೈಃ ಪಂಚಾಕ್ಷರಾವೃತ್ತ್ಯಾ ಮುದ್ರಯಾ ದರ್ಶಿತೈಸ್ತಥಾ ।
ಆವಾಹ್ಯ ಸ್ಥಾಪ್ಯ ಪೀಠೇತು ಲಿಂಗಂ ಸ್ಫಾಟಿಕಧಾತುಜಂ ॥೧೬॥

ಬಾಣಂ ವಾ ರಸಸಂಭೂತಂ ಚರಂ ವಾ ಸ್ಥಾವರಂ ತು ವಾ ।
ಪಂಚಾಕ್ಷರೇಣ ತಸ್ಮೌಲೌ ಪುಷ್ಪಂ ದದ್ಯಾಚ್ಚ ಭಕ್ತಿತಃ ॥೧೭॥

ಸ ಕೂರ್ಚಂ ಪಾದಮೂಲೇತು ನಿಧಾಯ ಸ್ಥಾಪಯೇಚ್ಛಿವಂ ।
ಪಾದಾರ್ಘ್ಯಾಚಮನಂ ದತ್ವಾ ಮಧುಪರ್ಕಾದಿ ದಾಪಯೇತ್ ॥೧೮॥

ಕ್ಷೀರಾಭಿಷೇಕಃ ಪ್ರಥಮಂ ತತೋ ದಧಿಘೃತಂ ಮಧು ।
ಸಿತಾ ಚ ನಾರಿಕೇಲೋದ ಕದಲೀಫಲಜಾಲಕಂ ॥೧೯॥

---

ಶಂಕರನನ್ನೂ ಮರಕತಮಣಿಯಂತೆ ಪ್ರಕಾಶಿಸುತ್ತಾ ಪ್ರಸನ್ನಮುಖಿಯಾದ ದೇವಿಯನ್ನೂ ಧ್ಯಾನಪೂರ್ವಕವಾಗಿ ಶಿವಲಿಂಗದಲ್ಲಿ ಆವಾಹಿಸಿ ಅರ್ಚಿಸಬೇಕು. ॥೯-೧೦-೧೧-೧೨-೧೩-೧೪॥

ಹಾಗೆಯೇ ಪಾದ್ಯ, ಅರ್ಘ್ಯ, ಆಚಮನೀಯಗಳನ್ನು ಪುಷ್ಪಗಂಧಪರಿಪೂರಿತವಾದ ನೀರಿನಿಂದ ಬೇರೆ ಬೇರೆ ಪಾತ್ರೆಗಳಲ್ಲಿ ಪಂಚಾಕ್ಷರೀಮಂತ್ರಪುರಶ್ಚರಣೆಯಿಂದಲೂ, ಪೂಜಾಮುದ್ರೆಗಳಿಂದಲೂ ಸಮರ್ಪಿಸಬೇಕು. ಶಿವಲಿಂಗವನ್ನು ಸುಂದರವಾದ ಪೀಠಮಧ್ಯದಲ್ಲಿ ಸ್ಥಾಪನೆ ಮಾಡಿರಬೇಕು. ಆ ಶಿವಲಿಂಗವು ಸ್ಫಟಿಕಲಿಂಗ, ಲೋಹಲಿಂಗ, ಬಾಣಲಿಂಗ, ರಸಲಿಂಗ, ಚರಲಿಂಗ, ಸ್ಥಾವರಲಿಂಗಗಳೆಂದು ವಿಧವಿಧಗಳಾಗಿವೆ. ಈ ಎಲ್ಲಾ ವಿಧವಾದ ಶಿವಲಿಂಗಗಳ ಮೇಲೆಯೂ, ಭಕ್ತಿಪುರಸ್ಸರವಾಗಿ ಪುಷ್ಪಗಳನ್ನರ್ಪಿಸಬೇಕು. ॥೧೫-೧೬-೧೭॥

ಶಿವಲಿಂಗದ ಕೆಳಭಾಗದಲ್ಲಿ ದರ್ಭಮಯವಾದ ಕೂರ್ಚವನ್ನಿಟ್ಟು ಅದಕ್ಕೆ ಪಾದ್ಯ, ಅರ್ಘ್ಯ ಇವುಗಳನ್ನು ಅರ್ಪಿಸಬೇಕು. ಹಾಗೆಯೇ ದಧಿಸಹಿತವಾದ ಫಲವನ್ನು ಮಧುಪರ್ಕವನ್ನಾಗಿ ನಿವೇದಿಸಿ, ಅನಂತರ ಕ್ರಮವಾಗಿ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಎಳನೀರು, ಬಾಳೆಹಣ್ಣು, ಹಲಸಿನಹಣ್ಣು, ಮಾವಿನಹಣ್ಣಿನ ರಸ, ನಿಂಬೆ (ಹೇರಳೆ) ರಸ, ಕಬ್ಬಿನರಸ, ಗಂಧೋದಕ,

ಪನಸಾಮ್ರರಸಂ ಚಾಪಿ ತತೋ ಲಿಕುಚಜಂ ರಸಂ ।
ಇಕ್ಷುಸಾರಂ ಚ ಗಂಧೋದರತ್ನಸ್ವರ್ಣೋದ್ಭವಂ ಜಲಂ ॥೨೦॥

ಅನ್ನಾಭಿಷೇಕಂ ಚ ತತೋ ನೀರೈಃ ರುದ್ರಾಭಿಷೇಚನಂ ।
ಪಾದ್ಯಾಚಮನದಾನಂ ಚ ತತ ಉದ್ವಾಸ್ಯ ಪೂಜಯೇತ್ ॥೨೧॥

ಪೀಠೇ ಲಿಂಗೇ ಚ ಸಂಸ್ಥಾಪ್ಯ ವಸ್ತ್ರಂ ಯಜ್ಞೋಪವೀತಕಂ ।
ಭಸ್ಮನಾ ತ್ರ್ಯಂಬಕೇಣೈವ ಪೂಜಯೇದಿಂದುಶೇಖರಂ ॥೨೨॥

ಗಂಧಾಕ್ಷತಾನ್ ತತೋ ದದ್ಯಾತ್ಸ್ವರ್ಣಾಕಲ್ಪಂ ಯಥಾರುಚಿ ।
ನಿಧನೇತ್ಯಾದಿಭಿರ್ಮಂತ್ರೈರ್ಭವಾದ್ಯೈಃ ಬಿಲ್ವಪತ್ರಕೈಃ ॥೨೩॥

ಅನ್ಯೈರ್ವಾ ವಿವಿಧೈಃ ಪುಷ್ಪೈರ್ಗ್ರಾಮ್ಯಾರಣ್ಯೋದ್ಭವೈರಪಿ ।
ತತ್ತತ್ಕಾಲಭವೈರೇವ ಪೂಜಯಿತ್ವಾ ಮಹೇಶ್ವರಂ ॥೨೪॥

ಧೂಪಂ ದೀಪಂ ತತೋ ದತ್ವಾ ನೈವೇದ್ಯಂ ಚಾಪಿ ದಾಪಯೇತ್ ।
ತಾಂಬೂಲಂ ಚ ತತೋ ದದ್ಯಾತ್ತತೋ ನೀರಾಜನಂ ದ್ವಿಜ ॥೨೫॥

---

ರತ್ನೋದಕ, ಸುವರ್ಣೋದಕ, ಶಾಲ್ಯನ್ನ ಇವುಗಳಿಂದ ಅಭಿಷೇಕಮಾಡಿ, ಅನಂತರ ರುದ್ರಮಂತ್ರಪುರಸ್ಸರವಾಗಿ ಶುದ್ಧೋದಕದಿಂದ ಅಭಿಷೇಕಮಾಡಬೇಕು. ಅಭಿಷೇಕಾನಂತರದಲ್ಲಿ ಪುನಃ ಪಾದ್ಯಾಚಮನಾದಿಗಳನ್ನು ಅರ್ಪಿಸಿ, ಪೂಜೆಗೆ ಆರಂಭಿಸಬೇಕು. ॥೧೮-೧೯-೨೦-೨೧॥

ಅಭಿಷೇಕಾನಂತರ ಪೀಠ ಮತ್ತು ಶಿವಲಿಂಗ ಇವೆರಡನ್ನೂ ಮುಚ್ಚುವಂತೆ ವಸ್ತ್ರವನ್ನು ಹೊದಿಸಿ, ಯಜ್ಞೋಪವೀತವನ್ನು ಧರಿಸಬೇಕು. ಅನಂತರ "ತ್ರ್ಯಂಬಕಂ ಯಜಾಮಹೆ" ಎಂಬ ಮಂತ್ರದಿಂದ ಭಸ್ಮವನ್ನೂ, ಗಂಧ, ಅಕ್ಷತೆ, ಸುವರ್ಣಾಭರಣ ಇವುಗಳನ್ನು ತನ್ನ ಇಷ್ಟಬಂದಂತೆ ಅರ್ಪಿಸಬೇಕು. ಹಾಗೆಯೇ ಆಯಾ ಕಾಲಗಳಲ್ಲಿ ದೊರಕುವ ಪತ್ರ ಮತ್ತು ಪುಷ್ಪಗಳಿಂದಲೂ, ಕಾಡಿನಲ್ಲಾಗಲಿ, ಊರಿನಲ್ಲಾಗಲಿ ಬೆಳೆದ ಹೂಗಳಿಂದಾಗಲಿ, ಬಿಲ್ವಪತ್ರೆಗಳಿಂದಾಗಲಿ "ನಿಧನಪತಯೇ ನಮಃ, ಭವಾಯ ದೇವಾಯ ನಮಃ" ಎಂಬ ಶಿವನಾಮಗಳಿಂದಲೂ ಅರ್ಚಿಸಬೇಕು. ಆಮೇಲೆ ಧೂಪ, ದೀಪ, ನೈವೇದ್ಯ, ತಾಂಬೂಲ, ಮಂಗಳಾರತಿ ಮುಂತಾದುವುಗಳಿಂದ ಪರಶಿವನನ್ನು ತೃಪ್ತಿಪಡಿಸಬೇಕು. ॥೨೨-೨೩-೨೪-೨೫॥

ಛತ್ರಂ ಚ ಚಾಮರಾದರ್ಶೌ ತತಸ್ತೌರ್ಯತ್ರಿಕಕ್ರಮಂ ।
ಪ್ರದಕ್ಷಿಣಂ ನಮಸ್ಕಾರಂ ರುದ್ರಸೂಕ್ತೇನ ಕಾರಯೇತ್ ॥೨೬॥

ತತಃ ಸ್ತೋತ್ರೈಶ್ಚ ವೇದೋಕ್ತೈಃ ಪೌರಾಣೈರಪಿ ಶಂಕರಂ ।
ಸ್ತೋತ್ರೇಣಾನೇನ ಪತಗ ಸ್ತುವೀತೈವಂ ಮಹೇಶ್ವರಂ ॥೨೭॥

॥ ಕಶ್ಯಪ ಉವಾಚ ॥

ನಮೋ ನಮಸ್ತೇ ಶಶಿಚೂಡ ಗಂಗಾ
ಧರಾವ್ಯಯಾಪಾರಗರಾದಿಧಾರಿನ್ ।
ಶ್ರೀವ್ಯೋಮಕೇಶಾಯ ದಯಾರ್ಣವಾಯ
ಸಂಸಾರವೈದ್ಯಾಯ ನಮೋ ನಮಸ್ತೇ ॥೨೮॥

ನಮೋ ನಮೋ ದೇವದಯಾಂಬುಧೇ ಹರ
ಮಾರಾಂಗ ಸಂಹಾರಕ ಕಾಲಶತ್ರೋ ।
ವಿಶ್ವೇಶ್ವರಾಪಾರ ದಯಾನಿಧಾನ
ಪಾಹೀಶ ಶ್ರೀ ಶಂಕರ ರಕ್ಷ ಮಾಂ ಸದಾ ॥೨೯॥

---

ಛತ್ರಿ, ಚಾಮರ, ಕನ್ನಡಿ, ತುತ್ತೂರಿ ಮುಂತಾದುವುಗಳ ಉಪಚಾರವನ್ನು ಸಲ್ಲಿಸಿ, ರುದ್ರಸೂಕ್ತಪಠನಪೂರ್ವಕವಾಗಿ ಪ್ರದಕ್ಷಿಣ ನಮಸ್ಕಾರ ಮಾಡಬೇಕು. ಆಮೇಲೆ ವೇದೋಕ್ತವಾದ ಅಥವಾ ಪುರಾಣೋಕ್ತವಾದ ಸ್ತೋತ್ರಗಳಿಂದ ಸ್ತುತಿಸಬೇಕು. ಇಷ್ಟಾದಮೇಲೆ ಎಲೈ ಪಕ್ಷಿರಾಜನೇ, ಈ ರೀತಿಯಾಗಿ ಸ್ವಾಮಿಯನ್ನು ಧ್ಯಾನಿಸಬೇಕು. ॥೨೬-೨೭॥

" ಚಂದ್ರಶೇಖರನೂ, ಗಂಗಾಧರನೂ, ನಾಶರಹಿತನೂ, ವಿಷಕಂಠನೂ ಆದ ಪರಶಿವನೇ, ನಿನಗೆ ನಮಸ್ಕಾರ. ನೀನು ವ್ಯೋಮಕೇಶನೆನಿಸಿ ಅಂತರಿಕ್ಷವನ್ನೆಲ್ಲಾ ನಿನ್ನ ಜಟಾಜೂಟದಿಂದ ಮುಚ್ಚಿರುವೆ. ದಯಾಸಾಗರನೂ, ಸಂಸಾರವೆಂಬ ರೋಗಕ್ಕೆ ಶ್ರೇಷ್ಠನಾದ ವೈದ್ಯನೂ ಎನಿಸಿರುವೆ. ॥೨೮॥

ದಯಾಸಾಗರನೂ, ಮನ್ಮಥ ಮತ್ತು ಯಮ ಇವರನ್ನು ಅಡಗಿಸಿದವನೂ, ಲೋಕದೊಡೆಯನೂ, ದಯಾನಿಧಿಯೂ ಆದ ಶಂಕರನೇ, ನಿನಗೆ ನಮಸ್ಕಾರ. ನನ್ನನ್ನು ಸದಾ ರಕ್ಷಿಸು. ॥೨೯॥

ಭಗಾಕ್ಷಿಹರ ಶಂಕರ ತ್ರಿದಶನಾಥ ಪಾದ್ಮಬ್ಜಜ
ಪ್ರಕಾಶವರಮೌಲಿಧೃಕ್ಪ್ರಮಥನಾಥ ವಿಶ್ವಾಧಿಕ ।
ಗಜಾಂತಸುಮಹಾಹವತ್ರಿಪುರಘೋರಸಂಹಾರಕ
ಪ್ರಸೀದ ಚ ಯಥಾಧುನಾ ಮಧುಹರಾಕ್ಷಿಪೂಜ್ಯಾಂಘ್ರಿಕ ॥೩೦॥

ದೇವದೇವ ನಿಗಮಾಂತವೇದ್ಯ ಹೃತ್ತಾಪ
ಪಾಪವಿನಿವಾರಕ ಶಂಭೋ ।
ಕಾಲಕಾಲಕರುಣಾಕರ ಶಂಭೋ
ಪಾಹಿ ಮಾಮಖಿಲದುಃಖಸಮೂಹಾತ್ ॥೩೧॥

ಸ್ತುತ್ವೈವಂ ಶಿವಮಿಷ್ಟದಾನಕರುಣಾಪಾಂಗಂ ಚ ಲಿಂಗಸ್ಥಿತಂ
ಸಂಪೂಜ್ಯ ಪ್ರಮಥಾಧಿನಾಥಮಗಜಾಕಾಂತಂ ಸ ಮುಕ್ತಿಂ ಲಭೇತ್ ।
ಕಾಮಾನಪ್ಯಮಿತಾನವಾಪ್ಯ ಸ ಮುದಾ ಭುಕ್ತ್ವಾ ಸುಖಂ ಶಾಂಕರೋ
ಪುಣ್ಯೈಶ್ಚಾಪಿ ಪ್ರದೋಷಪರ್ವಣಿ ತಥಾ ಪಾಪೈರ್ವಿಮುಕ್ತೋ ಭವೇತ್॥೩೨॥

---

ದಕ್ಷಬ್ರಹ್ಮನ ಯಾಗದಲ್ಲಿ ಭಗದೇವತೆಯ ಕಣ್ಣನ್ನು ಅಪಹರಿಸಿದ ಮಹಾದೇವನೇ, ನೀನು ದೇವತೆಗಳಿಗೆಲ್ಲಾ ಒಡೆಯನಲ್ಲವೇ ? ಬ್ರಹ್ಮನ ತಲೆಬುರುಡೆಯನ್ನು ರುಂಡಗಳ ಮಾಲೆಯಲ್ಲಿಟ್ಟು ಪ್ರಕಾಶಪಡಿಸಿದವನಲ್ಲವೇ ? ಪ್ರಮಥಗಣಗಳಿಗೂ, ಸಕಲ ಪ್ರಪಂಚಕ್ಕೂ ಒಡೆಯನೆನಿಸಿ, ಗಜಾಸುರನೇ ಮೊದಲಾದ ರಾಕ್ಷಸರನ್ನು ಯುದ್ಧದಲ್ಲಿ ಸದೆಬಡಿದು, ಮಧುಕೈಟಭರನ್ನು ನಾಶಗೊಳಿಸಿದ ಮಹಾವಿಷ್ಣುವಿನ ನೇತ್ರದಿಂದಲೂ ನೀನು ಪೂಜಿತನಾಗಿರುವೆ. ಇಂತಹ ಮಹಾಮಹಿಮನಾದ ನೀನು ನನ್ನನ್ನು ದಯೆಯಿಂದ ಕಾಪಾಡು. ॥೩೦॥

ಎಲೈ ದೇವದೇವನೇ, ಉಪನಿಷತ್ಶ್ರುತಿಸಾಧ್ಯನೇ, ಭಕ್ತರ ಹೃದಯತಾಪವನ್ನು ನಿವಾರಿಸುವ ಶಂಕರನೇ, ಕಾಲಕಾಲನೂ, ಕರುಣಾಕರನೂ ಆದ ನೀನು ನನ್ನನ್ನು ದುಃಖಸಮುದ್ರದಿಂದ ಉದ್ಧರಿಸಿ ಕಾಪಾಡು.'' ॥೩೧॥

ಈರೀತಿ ಸ್ತುತಿಸಿ ಪಾರ್ವತೀಪತಿಯಾದ ಪರಶಿವನನ್ನು ಶಿವಲಿಂಗದಲ್ಲಿ ಆವಾಹಿಸಿ ಪೂಜಿಸುವ ಶಾಂಕರರು ನಿಜವಾಗಿಯೂ ಮುಕ್ತಿಯನ್ನು ಹೊಂದುವರು. ಅಲ್ಲದೆ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಸುಖದಿಂದ ಜೀವಿಸುವರು. ಅಲ್ಲದೆ

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಗರುಡಸ್ಯ
ಶಿವಪೂಜಾವಿಧಾನೋಪದೇಶೋ ನಾಮ ಏಕೋನವಿಂಶೋಽಧ್ಯಾಯಃ

---

ಪ್ರದೋಷಕಾಲದಲ್ಲಿ ಈರೀತಿ ಪೂಜಿಸಿದವರಂತೂ ಅತಿಶಯವಾದ ಪುಣ್ಯಾರ್ಜನೆ ಮಾಡಿ, ಸಮಸ್ತಪಾಪವಿಮುಕ್ತರಾಗಿ ಶಿವಸಾಮೀಪ್ಯವನ್ನು ಪಡೆಯುವರು ಎಂದು ಕಶ್ಯಪಮುನಿಯು ಗರುಡನಿಗೆ ಹೇಳಿದನು. ||೩೨||

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಗರುಡನಿಗೆ ಶಿವಪೂಜಾವಿಧಾನವನ್ನು ತಿಳಿಸುವ ಹತ್ತೊಂಬತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ವಿಂಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಸ ಕಾಶ್ಯಪಿರ್ನಮಶ್ಚಕ್ರೇ ಸ್ವಪಿತುಶ್ಚರಣಾಂಬುಜಂ ।
ಕದ್ರುದ್ರಪೂಜಾಸಕ್ತಸ್ಯ ಕಶ್ಯಪಸ್ಯ ಮಹಾತ್ಮನಃ ॥೧॥

ತೇನ ಪ್ರಾಪ್ತಮಹಾವಿದ್ಯಾಪ್ರಭಾವೇಣೋದ್ಯತಃ ಸದಾ ।
ಲಬ್ಧಾನುಜ್ಞೋಽಥ ಗುರುಣಾ ವಿತತ್ಯ ಸ್ವಭುಜಾವುಭೌ ॥೨॥

ಜಗರ್ಜ ಬಲವಾನ್ನಾದಂ ತದಾ ಹರಹರೇತಿ ಚ ।
ಉತ್ಪಪಾತಾಥ ಗಗನೇ ತರುಣಾರುಣನಾಥವತ್ ॥೩॥

ಮೇರೋರ್ಮೂರ್ಧ್ನಿ ಸರೋ ನಾಮ ಮಾನಸಾಖ್ಯಂ ತದಾಂಡಜಃ ।
ಸ ಮಾನಸಸರಃಸ್ನಾನಂ ಚಕಾರಾಶು ಹತಾಶುಭಃ ॥೪॥

---

### ಇಪ್ಪತ್ತನೆಯ ಅಧ್ಯಾಯ

ಸದಾ ರುದ್ರನಾಮಕ ಈಶ್ವರನ ಪೂಜಾಕಾರ್ಯದಲ್ಲಿಯೇ ಆಸಕ್ತನಾದ (ಕತ್, ರುದ್ರಾಯ, ಅತ್ರ, ಕದಾ ಇತ್ಯರ್ಥೇ ಕತ್, ಅಂತ್ಯಲೋಪಶ್ಛಾಂದಸಃ) ಮಹಾತ್ಮನಾದ ಕಶ್ಯಪಋಷಿಗೆ ಮಗನಾದ ಗರುಡನು ವಂದಿಸಿ ಆವನಿಂದ ಉಪದಿಷ್ಟವಾದ ಶಿವವಿದ್ಯಾಬಲದಿಂದ ತೇಜಸ್ವಿಯಾಗಿ ತನ್ನ ಎರಡು ಭುಜಗಳನ್ನೂ ಮೇಲೆತ್ತಿ ನಮಸ್ಕರಿಸಿ ಅಪ್ಪಣೆ ಪಡೆದು ಹೊರಟನು. ॥೧-೨॥

ಹರಹರನೆಂದು ಶಿವನಾಮಗಳಿಂದ ಗರ್ಜಿಸುತ್ತಾ ಗರುಡನು ತೇಜಸ್ವಿಯಾದ

ಮೇರೋರುಪವನೇ ತತ್ರ ಬಿಲ್ವಮಂದಾರಸಂಯುತೇ ।
ಚಂಪಕಾಶೋಕಸಹಿತೇ ಮಾಕಂದದ್ರುಮಸಂಯುತೇ ॥೫॥

ಪಾರಿಜಾತವನೋದ್ದೇಶೇ ಕಂದಮೂಲಫಲಾವೃತೇ ।
ನಾನಾಮೃಗಾಂಡಜಯುತೇ ಕೇಕೀಕೋಕಿಲನಾದಿತೇ ॥೬॥

ನಿಧಾಯ ತತ್ರ ಲಿಂಗಂ ಚ ಪತಗೇಶ್ವರನಾಮಕಂ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮಾಭ್ಯಕ್ತನುಹಾಂಗಕಃ ॥೭॥

ಧೃತತ್ರಿಪುಂಡ್ರರುದ್ರಾಕ್ಷಃ ಪಂಚಾಕ್ಷರಜಪಾದರಃ ।
ರುದ್ರಸೂಕ್ತಜಪಾಸಕ್ತಃ ಫಲಮೂಲೈಶ್ಶುಭೈಸ್ತಥಾ ॥೮॥

ಸ ಮಾನಸಜಲೈಃ ಸ್ನಾಪ್ಯ ಪ್ರತ್ಯಹಂ ಪೂಜಯಂಛಿವಂ ।
ಬಿಲ್ವಮಂದಾರಕುಸುಮೈರನ್ಯೈಃ ಕಮಲೋತ್ಪಲೈಃ ॥೯॥

ನಿವೇದ್ಯ ಫಲಮೂಲಾನಿ ನಿರಾಹಾರೋ ಚರತ್ತಪಃ ।
ವರ್ಷಂ ಫಲಾಶನಃ ಪಕ್ಷೇ ವರ್ಷಂ ವಾಯುಜಲಾಶನಃ ॥೧೦॥

---

ಸೂರ್ಯನಂತೆ ಅಂತರಿಕ್ಷದಲ್ಲಿ ಹಾರಿದನು. ಮೇರುಪರ್ವತದ ಶಿರೋಭಾಗದಲ್ಲಿದ್ದ ಮಾನಸ ಸರೋವರಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಪಾಪಮುಕ್ತನಾದನು. ॥೩-೪॥

ಮೇರುಪರ್ವತದ ಉದ್ಯಾನದಲ್ಲಿ ಬಿಲ್ವ, ಮಂದಾರ, ಸಂಪಿಗೆ, ಅಶೋಕ, ಮಾವು ಮುಂತಾದ ನಾನಾಜಾತಿಯ ವೃಕ್ಷಗಳಿದ್ದುವು. ಅಲ್ಲಿಯೇ ಪಾರಿಜಾತವೃಕ್ಷದ ಸಮೀಪದ ಗೆಡ್ಡೆಗೆಣಸುಗಳಿಂದ ತುಂಬಿದ್ದ ಆ ಪ್ರದೇಶವು ವಿಧವಿಧವಾದ ಪಕ್ಷಿಗಣಗಳಿಂದ ತುಂಬಿ ನಿಬಿಡವಾಗಿದ್ದಿತು. ಅಂತಹ ಸ್ಥಳದಲ್ಲಿ ಪತಗೇಶ್ವರನೆಂಬ ಹೆಸರಿನಿಂದ ಒಂದು ಶಿವಲಿಂಗವನ್ನು ಸ್ಥಾಪಿಸಿದನು. ಒಡನೆಯೇ ಅಗ್ನಿರಿತಿ ಭಸ್ಮ ಇತ್ಯಾದಿ ಮಂತ್ರಗಳಿಂದ ಭಸ್ಮಧಾರಣೆಮಾಡಿಕೊಂಡನು. ॥೫-೬-೭॥

ಹಾಗೆಯೇ ಭಸ್ಮತ್ರಿಪುಂಡ್ರವನ್ನು ಧರಿಸಿ, ಶಿವಪಂಚಾಕ್ಷರೀಮಂತ್ರದಲ್ಲಿ ಆಸಕ್ತನಾಗಿ, ಶ್ರೀ ರುದ್ರಸೂಕ್ತವನ್ನು ಜಪಿಸುತ್ತಾ, ಫಲಮೂಲಾದಿಗಳಿಂದ ಜೀವಿಸುತ್ತಾ, ಮಾನಸಸರೋವರದ ನೀರಿನಿಂದಲೇ ಸ್ನಾನಪಾನಾದಿಗಳನ್ನು ನಡೆಸುತ್ತಾ ನಿತ್ಯವೂ ಶಿವಪೂಜೆಯಿಂದಲೇ ಕಾಲಕಳೆಯುತ್ತಿದ್ದನು. ಬಿಲ್ವ, ಮಂದಾರ, ಕಮಲ ಮುಂತಾದ ಪುಷ್ಪಗಳಿಂದಲೇ ಪರಶಿವನನ್ನು ಪೂಜಿಸಿ, ಆಹಾರರಹಿತನಾಗಿಯೂ, ಕೆಲವು ಕಾಲ

ಏವಂ ದ್ವಾದಶವರ್ಷಾಣಿ ತಪಸಾ ವಿನತಾಸುತಃ ।
ನಿನಾಯ ಕಾಲಕಾಲಸ್ಯ ಪೂಜಯಾ ಹೃಜ್ಜಯೇನ ಚ ॥೧೧॥

ತಲ್ಲಿಂಗಮಧ್ಯಾದೀಶಾನಸ್ತಸ್ಮೈ ಪ್ರಾದುರಭೂಚ್ಛಿವಃ ।
ಗಂಗಾಚಂದ್ರಕಲಾಮೌಳಿ ಕಪರ್ದವಿಲಸಚ್ಛಿರಾಃ ॥೧೨॥

ಉಮಯಾ ಸಹಿತೋ ನಿತ್ಯಂ ನೀಲಕಂಠಸ್ತ್ರಿಲೋಚನಃ ।
ಮಹಾವೃಷಂ ಸಮಾರುಹ್ಯ ನಂದೀಭೃಂಗೀ ಗಣಾವೃತಃ ॥೧೩॥

ತಂ ದೃಷ್ಟ್ವಾ ಗರುಡಂ ತತ್ರ ಮಹಾಪಶುಪತಿಃ ಸ್ವಯಂ ।
ತಪಸಾಕರ್ಷಿತಂ ತತ್ರ ಪ್ರಾಹ ದೇವೋ ವೃಷಧ್ವಜಃ ॥೧೪॥

॥ ಮಹಾದೇವ ಉವಾಚ ॥

ನಿತರಾಂ ಪರಿಖಿನ್ನೋಽಸಿ ತಪಸಾ ಪತಗೇಶ್ವರ ।
ಕಸ್ತೇ ಕಾಮಂ ವದ ಕ್ಷಿಪ್ರಂ ತತ್ತೇ ಸಂಪೂರಯಾಮ್ಯಹಂ ॥೧೫॥

---

ವಾಯು, ಜಲ ಇವುಗಳನ್ನು ಆಹಾರವನ್ನಾಗಿ ಮಾಡಿಕೊಂಡೂ ಶಿವಾರಾಧನೆ ಮಾಡುತ್ತಿದ್ದನು. ॥೮-೯-೧೦॥

ಹೀಗೆಯೇ ಗರುಡನು ಹನ್ನೆರಡುವರ್ಷಪರ್ಯಂತ ತಪಸ್ಸುಮಾಡುತ್ತಾ ಜಿತೇಂದ್ರಿಯನಾಗಿ ಪರಶಿವನನ್ನು ಮೆಚ್ಚಿಸಿದನು. ಆಗ ಪತಗೇಶ್ವರಲಿಂಗಮಧ್ಯದಿಂದ ಶಂಕರನು ಪ್ರತ್ಯಕ್ಷನಾದನು. ಪರಶಿವನ ಶಿರೋಭಾಗದಲ್ಲಿ ಗಂಗಾ, ಚಂದ್ರಕಲೆ, ಜಟಾಜೂಟ ಇವು ಪ್ರಕಾಶಿಸುತ್ತಿದ್ದವು. ॥೧೧-೧೨॥

ಪಾರ್ವತೀಸಹಿತನಾಗಿ, ನೀಲಕಂಠನೂ, ಮೂರುಕಣ್ಣುಳ್ಳವನೂ ಆದ ಮಹಾದೇವನು ದೊಡ್ಡ ಬಸವನ ಮೇಲೆ ಕುಳಿತಿದ್ದನು. ಅಕ್ಕಪಕ್ಕದಲ್ಲಿ ನಂದಿ, ಭೃಂಗಿಯೇ ಮೊದಲಾದ ಪ್ರಮಥಗಣಗಳಿದ್ದುವು. ಪರಮೇಶ್ವರನು ಎದುರಿನಲ್ಲಿ ತಪಸ್ಸಿನ ಕ್ಲೇಶದಿಂದ ಖಿನ್ನನಾಗಿ ನಿಂತಿರುವ ಗರುಡನನ್ನು ನೋಡಿ ಹೀಗೆಂದನು. ॥೧೩-೧೪॥

"ಅಯ್ಯಾ ವತ್ಸ ಗರುಡನೇ, ನೀನು ತಪಸ್ಸಿನಿಂದ ಬಹಳ ಖಿನ್ನನಾಗಿರುವೆ. ನಿನ್ನ ತಪಸ್ಸಿಗೆ ನಾನು ಮೆಚ್ಚಿರುವೆನು. ನಿನಗೆ ಬೇಕಾದ ವರವೇನು? ಕೇಳು.

॥ ಸೂತ ಉವಾಚ ॥

ಇತಿ ಶಂಭೋರ್ವಚಶ್ಶ್ರುತ್ವಾ ಪ್ರಣಮ್ಯಾಂಡಜರಾಟ್ ಶಿವಂ ।
ಭಕ್ತ್ಯಶ್ರುಪುಲಕೋ ದೇವಂ ಮೌಳಾವಂಜಲಿಮಾವಹನ್ ॥೧೬॥

ತುಷ್ಟಾವ ಶಿಪಿವಿಷ್ಟಂ ತಂ ಅಷ್ಟಮೂರ್ತಿಂ ಕೃಪಾಕರಂ ॥೧೭॥

॥ ಗರುಡ ಉವಾಚ ॥

ದೇವದೇವ ಸಕಲಾಮರವಂದ್ಯ
ವಿಶ್ವನಾಥ ಶಶಿಚೂಡ ಮಹೇಶ ।
ವ್ಯೋಮಕೇಶ ಜಿತಕಾಮ ಕಾಲಹೃತ್
ಶೂಲಮೂಲಕರ ದಾರಿತಕಾಲ ॥೧೮॥

ಮಾರಮಾರ ಹರಿಸಾಯಕ ಶಂಭೋ
ಕಾಲಕಂಠಕರುಣಾಕರ ಧೀರ ।
ಘೋರಪಾತಕಭಯಾದಿವಿದೂರ
ಪಾಹಿ ಮಾಂ ವರದಯಾಘನಸಾರ ॥೧೯॥

---

ಈಗಲೇ ನಿನ್ನ ಇಷ್ಟಾರ್ಥವನ್ನು ಸಫಲಗೊಳಿಸುವೆನು" ಎಂದು ಹೇಳಲು, ಆಗ ಗರುಡನು ಪರಶಿವನ ಅನುಗ್ರಹಕ್ಕೆ ಆನಂದಪಟ್ಟು, ಆನಂದಬಾಷ್ಪಸಹಿತನಾಗಿ, ಅಂಜಲಿಯನ್ನು ತಲೆಯಲ್ಲಿಟ್ಟು, ಅಷ್ಟಮೂರ್ತಿಯೂ, ದಯಾನಿಧಿಯೂ ಆದ ಪರಶಿವನನ್ನು ಈರೀತಿ ಸ್ತೋತ್ರಮಾಡಿದನು. ॥೧೫-೧೬-೧೭॥

ದೇವದೇವನೂ; ದೇವಪೂಜ್ಯನೂ, ಜಗದೊಡೆಯನೂ ಆದ ಚಂದ್ರಶೇಖರನೇ, ಮಹೇಶ್ವರನೇ, ನೀನು ನಿನ್ನ ಜಟಾಜೂಟದಿಂದ ಅಂತರಿಕ್ಷವನ್ನೆಲ್ಲಾ ಮುಚ್ಚಿರುವೆ. ಕಾಮನನ್ನೂ, ಕಾಲನನ್ನೂ ಜಯಿಸಿರುವೆ. ತ್ರಿಶೂಲವನ್ನು ಧರಿಸಿರುವೆ. ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡೆ. (ತ್ರಿಪುರಾಸುರರ ನಾಶಕಾಲದಲ್ಲಿ) ವಿಷಧಾರಣೆಯಿಂದ ಕಂಠವನ್ನು ಕಪ್ಪಾಗಿ ಮಾಡಿಕೊಂಡಿರುವೆ. ದಯಾಸಮುದ್ರನೂ, ಧೀರನೂ, ಸಮಸ್ತ ಪಾಪವಿದೂರನೂ, ದಯಾಘನಸಾರನೂ ಆದ ಮಹಾದೇವನೇ, ನನ್ನನ್ನು ಕಾಪಾಡು. ॥೧೮-೧೯॥

ಕ್ಷಯದ್ವೀರಂ ವೀರಂ ಗರಧರಮುಮಾಕಾಂತಮಧುನಾ
ಶರಣ್ಯಂ ಮೌಲೀಂದುದ್ಯುತಿವಿದಿತ ದಿಕ್ಷ್ವಕ್ರತಮಸಂ ।
ಮಹಾಂಗೋದ್ಯಚ್ಛವರ್ಮಾಕೃತಪಟಸಟಾ ಶೋಭಿನೃಹರಿ
ಸ್ಫುರದ್ವಕ್ಷೋಹಾರಿಪ್ರಖರನಖರೋದ್ಯೋತಿತಸುಖಂ ॥೨೦॥

ಪ್ರಪದ್ಯೇ ದೇವಂ ತ್ವಾಂ ಶ್ರುತಿವರಶಿರಶ್ಚಾರುಪಟಲೀ
ವಲೀಢಂ ತೇ ಪಾದಂ ಸಕಲಸುರಮೌಲಿದ್ಯುತಿಪದಂ ।
ಅನಾಥಾನಾಂ ನಾಥಂ ಸಕಲಜಗತಾಮೇಕಶರಣಂ
ಶರಣ್ಯಂ ತ್ವಾಂ ಶಂಭುಂ ಭವಹರಣಪಾದಂ ಕಲಯತಃ ॥೨೧॥

ಯಥಾ ಚೇತೋ ನಿತ್ಯಂ ನ ಭಜತಿ ತಥಾ ಪ್ರಾಕೃತಸುರಾನ್
ಹರಿಬ್ರಹ್ಮಾದಿತ್ಯಾಂಸ್ತ್ವವರುಣ ಮರುತ್ವಾದಿಕಗಣಾನ್ ।
ಭವಂ ಭಾವಾಪನ್ನಂ ಶ್ರುತಿವರಶಿರೋ ವೇದ್ಯಚರಿತಂ ।
ತವೇಶಾನ ಕಸ್ತೇ ಪ್ರಚರತಿ ನರಃ ಸ್ತವ್ಯಮಧುನಾ ॥೨೨॥

---

ಮಹಾದೇವನೇ, ನೀನು ವೀರರಾದ ಶತ್ರುಗಳನ್ನೆಲ್ಲಾ ನಾಶಗೊಳಿಸಿರುವೆ. ವಿಷವನ್ನು ಧರಿಸಿರುವೆ. ಪಾರ್ವತೀಪತಿಯೆನಿಸಿರುವೆ. ಸರ್ವರಕ್ಷಕನೂ, ತಲೆಯಲ್ಲಿರುವ ಚಂದ್ರಕಲೆಯಿಂದ ದಿಗಂತದ ಕತ್ತಲೆಯನ್ನೆಲ್ಲಾ ನಾಶಗೊಳಿಸುವವನೂ ಆಗಿರುವೆ. ದೊಡ್ಡ ಅವಯುವಗಳಿಂದ ಶೋಭಿಸುವ ಮತ್ತು ಕೇಸರಗಳ ಕಾಂತಿಯಿಂದ ಭಯಂಕರವಾದ ನೃಸಿಂಹಾಕಾರದ ಎದೆಯನ್ನು ಸೀಳುವಂತಹ · ಶರಭಸ್ವರೂಪವನ್ನು ತೋರ್ಪಡಿಸಿದೆ. ಇಂತಹ ಮಹಾಮಹಿಮನಾದ ನೀನು ನನ್ನನ್ನು ಸರ್ವದಾ ರಕ್ಷಿಸು. ॥೨೦॥

ಮಹೇಶ್ವರನೇ, ನಿನ್ನನ್ನು ವೇದವೇದಾಂತಗಳು ಮುಕ್ತಕಂಠದಿಂದ ಸದಾ ಸ್ತುತಿಸುತ್ತಿವೆ. ಸಕಲ ದೇವತೆಗಳ ಕಿರೀಟಗಳ ಕಾಂತಿಯಿಂದ ನಿನ್ನ ಪಾದವು ಪ್ರಕಾಶಿಸುತ್ತಿರುವುದು. ಅನಾಥರಿಗೆಲ್ಲಾ ನೀನೇ ನಾಥನು. ಸಕಲ ಜಗತ್ತಿಗೂ ನೀನೇ ಆಶ್ರಯವಿತ್ತವನು. ಸಂಸಾರದ ದುಃಖವನ್ನು ದೂರಮಾಡ ಬಯಸುವ ನಾನು ನಿನ್ನನ್ನು ಶರಣುಹೊಂದುವೆನು. ದಯೆಯಿಂದ ನಮ್ಮನ್ನು ಉದ್ಧರಿಸು. ॥೨೧॥

ಸರ್ವಜನರಕ್ಷಕನೇ, ಸಾಮಾನ್ಯದೇವವರ್ಗಕ್ಕೆ ಸೇರಿದ ವಿಷ್ಣು, ಬ್ರಹ್ಮ, ಸೂರ್ಯ, ವರುಣ, ವಾಯು ಇವರೇ ಮೊದಲಾದ ದೇವತೆಗಳ ಸ್ಮರಣೆಯು ನನ್ನ

ಮದೀಯೋಽಯಂ ಮಂತುಃ ಸಹತು ಚ ಭವಾನೇವ ಮನಸಾ
ಯತೋ ವೇದ್ಯೈರ್ವೇದ್ಯೋ ಭವಸಿ ಸಹಮಾನಸ್ತ್ವಮಧುನಾ ।
ತಥಾಪ್ಯೇತದ್ಭಕ್ತ್ಯಾ ತ್ವಯಿ ಗದಿತಮೇದ್ವ್ರಜತು ಮೇ
ವಚಃ ಪಥ್ಯಂ ಸ್ವಾಸ್ಥ್ಯಂ ಕ್ಷಮಸಿ ಮಯಿ ತಿರ್ಯಕ್ತ್ವದಯಯಾ ॥೨೩॥

॥ ಸೂತ ಉವಾಚ ॥

ಗರುಡೋದ್ಗೀತಮೇತದ್ವೈ ಸ್ತವ್ಯಂ ಶ್ರುತ್ವಾ ಪ್ರಹರ್ಷಿತಃ ।
ಉವಾಚ ವರದೋಽಸ್ಮೀತಿ ವರಂ ವೃಣು ಯಥಾಮತಿ ॥೨೪॥

ತವಾನಯಾಂಡಜ ಸ್ತುತ್ಯಾ ನಿತರಾಂ ತುಷ್ಟಮಾನಸಃ ॥೨೫॥

॥ ಈಶ್ವರ ಉವಾಚ ॥

ಮದ್ವರೇಣ ಚ ತೇ ಕಾಮೋ ಭವಿಷ್ಯತಿ ನ ಚಾನ್ಯಥಾ ।
ಇತಿ ಶ್ರುತ್ವಾ ವಚಶ್ಶಂಭೋಃ ಪ್ರಾಂಜಲಿಃ ಪ್ರಾಹ ಚಾಂಡಜಃ ॥೨೬॥

---

ಮನಸ್ಸಿಗೆ ಹಿತವೆನಿಸಲಾರದು. ವೇದವೇದಾಂತ ಪ್ರತಿಪಾದ್ಯನೂ, ದೃಢವಾದ ಮನಸ್ಸಿಗೆ ಪ್ರತಿಬಿಂಬಿಸುವವನೂ ಆದ ನಿನ್ನನ್ನು ಬಿಟ್ಟು ಮತ್ತಾರೂ ನನ್ನ ಸ್ತೋತ್ರಕ್ಕೆ ವಿಷಯರಾಗದಿರಲಿ. ಇದೇ ನನ್ನ ಪ್ರಾರ್ಥನೆ. ॥೨೨॥

ನಾನು ಅಲ್ಪಜ್ಞನು. ನೀನಾದರೋ ಸಕಲ ವೇದರಾಶಿಯಿಂದಲೂ ಸ್ತುತಿಸಲ್ಪಟ್ಟಿರುವವನು. ಅಂತಹ ನಿನಗೆ ಈ ಸ್ತುತಿಯು ತೃಪ್ತಿಯನ್ನುಂಟುಮಾಡಲಾರದು: ಆದರೂ ನೀನು ಸರ್ವವನ್ನೂ ಸಹಿಸುವವನಾದುದರಿಂದ ನಿನ್ನಲ್ಲಿ ನಾನು ನಿರ್ಭಯವಾಗಿ ಕೆಲವು ಮಾತುಗಳನ್ನಾಡುವೆನು. ಈಗ ನಾನು ಸ್ತುತಿಸಿದ ಕೆಲವು ಮಾತುಗಳಾದರೂ ನಿನ್ನ ಮನಸ್ಸಿಗೆ ಬಂದು, ನಾನು ಚತುಷ್ಪಾತ್ ಪ್ರಾಣಿಯೆಂಬ ದಯೆಯಿಂದಲಾದರೂ ನನ್ನನ್ನುದ್ಧರಿಸು. ನನ್ನ ಸ್ತೋತ್ರದಿಂದ ನೀನು ತೃಪ್ತನಾಗು."॥೨೩॥

ಹೀಗೆ ಗರುಡನು ವಿಶೇಷವಾಗಿ ಪ್ರಾರ್ಥಿಸಿದುದನ್ನು ಕೇಳಿ ಮಹಾದೇವನು ಹರ್ಷಿತನಾಗಿ 'ನಿನಗೆ ಬೇಕಾದ ವರವನ್ನು ಕೇಳು ಅನುಗ್ರಹಿಸುವೆನು, ನಿನ್ನ ಪ್ರಾರ್ಥನೆಯಿಂದ ನಾನು ತೃಪ್ತನಾಗಿರುವೆನು' ಎಂದು ಪರಶಿವನು ಆಶ್ವಾಸನವಿತ್ತನು. ॥೨೪-೨೫॥

ನನ್ನ ವರದಿಂದ ಈಗ ನಿನ್ನ ಇಷ್ಟಾರ್ಥವೆಲ್ಲವೂ ಸಿದ್ಧಿಸುವುದು ಹೆದರಬೇಡ,

॥ ಗರುಡ ಉವಾಚ ॥

ಪ್ರಜ್ಞಾಂ ಬಲಂ ಚ ವಿಜಯಮಮೃತಾಹರಣಾಯ ಮೇ ।
ಮಾತುರ್ದಾಸ್ಯವಿಮೋಕ್ಷಂ ಚ ಸರ್ಪಕೌಟಿಲ್ಯಜಂ ಹಿ ಮೇ ॥೨೭॥
ತವ ಪ್ರಸಾದತಃ ಶಂಭೋ ಭವಿಷ್ಯತ್ಯದ್ಯಮಾಚಿರಂ
ಮೇರುಮೂರ್ಧ್ನಿ ಮಹಾದೇವ ಮತ್ಕೃತೇ ಪತಗೇಶ್ವರೇ ॥೨೮॥

ಅಸ್ಮಿಂತ್ಸನ್ನಿಹಿತೋ ಲಿಂಗೇ ಭವ ತ್ವಂ ಸರ್ವದಾ ಶಿವ ।
ಇತಿ ತದ್ವಚಸಾ ಸರ್ವಂ ತಥಾಸ್ತ್ವಿತ್ಯವದದ್ಧರಃ ॥೨೯॥

ಪ್ರವಾದಯಂಸ್ತ್ರೇ ವಾದ್ಯಾನಿ ನನೃತುಸ್ತಾವದಪ್ಸರಾಃ ॥೩೦॥

ರಂಭೋರ್ವಶೀ ಮೇನಕಾದ್ಯಾ ಮಹೇಶಸ್ಯೈವ ಸಂನಿಧೌ ॥೩೧॥

---

ಎಂಬ ವರವು ಈಶ್ವರನಿಂದ ಬಂದೊಡನೆಯೇ ಗರುಡನು ಸಂತುಷ್ಟನಾಗಿ ಪರಶಿವನಲ್ಲಿ ಈರೀತಿ ಹೇಳಿಕೊಂಡನು. ॥೨೬॥

ವಿನತಾತನಯನಾದ ಗರುಡನು ಪರಶಿವನಲ್ಲಿ ತನಗೆ ಅಮೃತವನ್ನು ತರುವಷ್ಟು ಶಕ್ತಿಯನ್ನೂ ಪ್ರಜ್ಞೆಯನ್ನೂ ಜಯವನ್ನೂ ಕೊಡಬೇಕೆಂದು ಪ್ರಾರ್ಥಿಸಿದನು. ಮತ್ತು ತಾಯಿಯ ದಾಸ್ಯಪರಿಹಾರವಾಗಬೇಕೆಂದೂ, ಮುಂದೆ ತಾಯಿಗೆ ಸರ್ಪಗಳ ಮೋಸವು ತಪ್ಪಬೇಕೆಂದೂ, ವಿಶೇಷವಾಗಿ ಮೇರುಪರ್ವತದ ಶಿಖರಭಾಗದಲ್ಲಿ ನಿರ್ಮಿತವಾಗಿರುವ ಪತಗೇಶ್ವರ ಲಿಂಗದಲ್ಲಿ ಪರಶಿವನ ಸಾನ್ನಿಧ್ಯವು ಸದಾ ಇರಬೇಕೆಂದೂ ಪ್ರಾರ್ಥಿಸಿಕೊಂಡನು. ॥೨೭-೨೮॥

ಒಡನೆಯೇ ಪರಶಿವನು ಗರುಡನ ಇಷ್ಟದಂತೆ ಸಕಲ ವರಗಳನ್ನೂ ಆತನಿಗೆ ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನಹೊಂದಿದನು. ಕೂಡಲೆ ದೇವತೆಗಳು ಹೂಮಳೆಗರೆದರು. ದೇವವಾದ್ಯಗಳು ಮೊಳಗಿದವು. ಅಪ್ಸರಸ್ತ್ರೀಯರು ನರ್ತನಮಾಡಿದರು. ರಂಭಾ, ಊರ್ವಶೀ, ಮೇನಕಾ ಇವರು ಶಿವಸನ್ನಿಧಿಯಲ್ಲಿ ನಾಟ್ಯವಾಡಿದರು. ॥೩೦-೩೧॥

॥ ಸ್ಕಂದ ಉವಾಚ ॥

ತತಃ ಪತಗರಾಟ್ ತದಾ ಪುರಹರಾಂಘ್ರಿಸಂಪೂಜನಾತ್
ಬಭೂವ ಬಲಗರ್ವಿತಃ ಫಣಿವರೋರುಮಾಲಾಧರಃ ।
ವಿತತ್ಯ ನಿಜಪಕ್ಷತಿಕ್ಷಪಿತನಾತಪೋತಾಹತಿ
ಪ್ರಕೀರ್ಣವರಶೈಲಹೃತ್ಸುರಫಣೀಂದ್ರವಿತ್ರಾಸನಃ ॥೩೨॥

ಹರೋಽಪಿ ವಿಜಹಾರ ವೈ ಗಿರಿಜಯಾ ಸಮಾಲಿಂಗಿತೋ
ಮರುದ್ಗಣಗಣಾವೃತೋ ಫಣಿಗಣೋರುಮಾಲಾಗಲಃ ।
ಕೃತೋರುಗಣಪೋಲ್ಲಸದ್ವರ ಶಿಖಂಡಕೋಟಿಪ್ರಭಾ
ವಿರಾಜಿತಕಪರ್ದಕೋ ವೃಷವರಾಧಿರೂಢೋ ಯಯೌ ॥೩೩॥

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ
ವಿಂಶೋಽಧ್ಯಾಯಃ

---

ಅನಂತರ ತ್ರಿಪುರಾರಿಯಾದ ಮಹಾದೇವನ ಅನುಗ್ರಹಬಲದಿಂದ ಗರುಡನು, ಅತ್ಯಂತ ಬಲಿಷ್ಠನಾಗಿ, ಅನೇಕ ಸರ್ಪಶ್ರೇಷ್ಠಗಳನ್ನೆಲ್ಲಾ ರೆಕ್ಕೆಯಿಂದ ಅಪ್ಪಳಿಸುತ್ತಾ ತನ್ನ ರೆಕ್ಕೆಯ ಬಡಿತದಿಂದ ಹುಟ್ಟಿದ ಕಿರುಗಾಳಿಯಿಂದಲೇ ದೊಡ್ಡ ದೊಡ್ಡ ಪರ್ವತಗಳನ್ನೆಲ್ಲಾ ಅಲುಗಿಸುತ್ತಾ ಆದಿಶೇಷನಿಗೂ ಭಯವನ್ನುಂಟುಮಾಡಿ, ಅಮೃತಾಹರಣಕ್ಕಾಗಿ ಮುಂದುವರಿದನು. ॥೩೨॥

ಅತ್ತ ಪರಶಿವನೂ ಸಹ ಗೌರೀದೇವಿಯಿಂದ ಆಲಿಂಗಿತನಾಗಿ ಪ್ರಮಥಗಣಗಳಿಂದಲೂ, ದೇವತೆಗಳ ಸಮೂಹದಿಂದಲೂ ಕೂಡಿದವನಾಗಿ, ಸರ್ಪಮಾಲೆಗಳಿಂದಲಂಕೃತನಾಗಿ, ಪ್ರಮಥಗಣಗಳು ಹಿಡಿದಿರುವ ಸಕಲ ಸುವರ್ಣಾಭರಣಗಳ ಕಾಂತಿಯಿಂದ ಪ್ರಕಾಶಿತನಾಗಿ, ಪ್ರಜ್ವಲಿಸುವ ಜಟಾಜೂಟವುಳ್ಳವನಾಗಿ, ವೃಷಭದ ಮೇಲೆ ಕೈಲಾಸಕ್ಕೆ ಪ್ರಯಾಣಮಾಡಿದನು. ಎಂದು ಸ್ಕಂದನು ಜೈಗೀಷವ್ಯ ಮಹರ್ಷಿಗೆ ಗರುಡನ ಇತಿಹಾಸವನ್ನು ವಿವರವಾಗಿ ತಿಳಿಸಿದನು. ॥೩೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಎಂಟನೆಯ ಅಂಶದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಏಕವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ತರುಣಃ ಕರುಣಾಮೂರ್ತೇಃ ಕೃಪಯಾ ಅರುಣಾನುಜಃ ।
ವರುಣಾಲಯಗಾನ್ ಸರ್ಪಾನುಜ್ಜಹಾರ ಮಹೇಂದ್ರಹಾ ॥೧॥

ಯೋದ್ಧುಂ ಯಯೌ ದೇವಲೋಕಂ ಪಕ್ಷಾವುತ್ಕ್ಷಿಪ್ಯ ವೇಗತಃ ।
ಅಟ್ಟಹಾಸೇನ ಘೋರೇಣ ಕಂಪಯನ್ನಮರಾವತೀಂ ॥೨॥

ತತೋ ದೇವಾ ಭಯಾಪನ್ನಾಃ ಸರ್ವೇ ಚಾಪಿ ಸ ಕಿಂಕರಾಃ ।
ವಿದ್ಯಾಧರಾಶ್ಚ ಗಂಧರ್ವಾ ಸುಪರ್ವಾಣೋ ಮಹೌಜಸಃ ॥೩॥

---

## ಇಪ್ಪತ್ತೊಂದನೆಯ ಅಧ್ಯಾಯ

ಹಾಗೆ ಅರುಣಾನುಜನಾದ ಗರುಡನು ಪರಶಿವನ ವರಬಲದಿಂದ ಬಲಿಷ್ಠನಾಗಿ ಪಾತಾಳದಲ್ಲಿದ್ದ ಸರ್ಪಗಳನ್ನೂ, ದೇವೇಂದ್ರನನ್ನೂ ಸೋಲಿಸಿ, ಅಮೃತವನ್ನು ತರಲು, ಅವರೊಡನೆ ಯುದ್ಧಕ್ಕೆ ಸಿದ್ಧನಾಗಿ, ರೆಕ್ಕೆಗಳನ್ನು ಎತ್ತಿ ಹೊಡೆಯುತ್ತಾ ಅಮರಾವತಿಯನ್ನು ಮುತ್ತಿದನು. ಆಗ ಆ ಪಟ್ಟಣವೇ ನಡುಗಲಾರಂಭಿಸಿತು. ಅಲ್ಲಿದ್ದ ಸಕಲ ಗಂಧರ್ವ ವಿದ್ಯಾಧರರೇ ಮೊದಲಾದ ಶೂರದೇವತೆಗಳು ಹೆದರಲಾರಂಭಿಸಿದರು. ॥೧-೨-೩॥

ಕಿಮೇತದಿತಿಮನ್ವಾನಾಃ ಸಮುತ್ತಸ್ಥುರುದಾಯುಧಾಃ ।
ಅಮೃತಂ ಯತ್ರ ನಿಕ್ಷಿಪ್ತಂ ಗುಪ್ತಮುತ್ತಮಧನ್ವಿಭಿಃ ॥೪॥

ದೇವೈಃ ಕಿನ್ನರಗಂಧರ್ವೈರುರಗೈರಂಡಜೇಶ್ವರಃ ।
ಪ್ರಚಂಡ ಚಂಡ ದಂಡೇನ ಪಕ್ಷಕಾಂಡೇನ ಭೂಯಸಾ ॥೫॥

ಮಾರ್ತಾಂಡಸಾರಥೇರ್ಭ್ರಾತಾ ಖಂಡಯಚ್ಚಂಡವಿಕ್ರಮಃ ।
ಕಾಂಶ್ಚಿತ್ಪಕ್ಷಪ್ರಹಾರೇಣ ದೇವಾಂತ್ಸಂಮೂರ್ಛಿತಾಂಸ್ತದಾ ॥೬॥

ಕಾಂಶ್ಚಿದ್ದ್ರವದ್ರಕ್ತಧಾರಾನ್ ಕಾಂಶ್ಚಿದ್ಗಂಧರ್ವಸತ್ತಮಾನ್ ।
ತಾಡಯಾಮಾಸ ಪಾದೇನ ಗರುಡೋ ಮೃಡಭಾವಿತಃ ॥೭॥
ಉಜ್ಜಹಾರೈವ ಬಲವಾನತುಲಾಮಲವಿಕ್ರಮಃ
ಕಲಶಂ ಪೂರ್ಣಮಾದಾಯ ಅಮೃತಸ್ಯ ತದಾಂಡಜಃ ॥೮॥

ಉಜ್ಜಹಾರಾಮೃತಂ ಮಧ್ಯಾನ್ಮಧ್ಯಂ ದಿನಕರೋ ಯಥಾ ।
ಸ ಮಾತುರ್ನಿಕಟೇ ಗತ್ವಾ ನತ್ವಾ ದತ್ವಾಮೃತಂ ತದಾ ॥೯॥

---

ಮತ್ತು ಏನು ವಿಪತ್ತು ಬಂದಿತೋ ಎಂದು ಭಯಗೊಳ್ಳುತ್ತಾ ಆ ದೇವತೆಗಳೆಲ್ಲರೂ ಆಯುಧಧಾರಿಗಳಾಗಿ ಗರುಡನನ್ನು ಎದುರಿಸಲು ಸಿದ್ಧರಾದರು. ಗರುಡನಾದರೋ ಎಲ್ಲರನ್ನೂ ನಿರ್ಲಕ್ಷಿಸಿ, ಅಮೃತವಿದ್ದ ಕಡೆಗೆ ನುಗ್ಗಿದನು. ಅದನ್ನು ಶಸ್ತ್ರಾಸ್ತ್ರಧಾರಿಗಳಾದ ಗಂಧರ್ವ ವೀರರು ರಕ್ಷಿಸುತ್ತಿದ್ದರು. ಆದರೂ ಅವರನ್ನು ಲಕ್ಷಿಸದೆ ಅರುಣಾಗ್ರಜನಾದ ಗರುಡನು ತನ್ನ ಗರಿಗಳ ಹೊಡೆತದಿಂದ ಮೂರ್ಛೆಗೊಳಿಸಿ ಮುನ್ನುಗ್ಗಿದನು. ॥೪-೫-೬॥

ಗರುಡನ ಏಟಿನಿಂದ ಕೆಲವರ ದೇಹದಿಂದ ರಕ್ತಧಾರೆ ಹರಿಯಿತು. ಕೆಲವರು ಗಂಧರ್ವರನ್ನು ಕಾಲಿನಿಂದ ಒದ್ದು ಕೆಡವಿದನು. ಅಂತೂ ಎಲ್ಲರನ್ನೂ ಹೊಡೆದೋಡಿಸಿ ಪೂರ್ಣವಾಗಿದ್ದ ಅಮೃತಕಲಶವನ್ನು ಕೈಯಿಂದ ಎತ್ತಿಕೊಂಡನು. ॥೭-೮॥

ಸೂರ್ಯನಂತೆ ಹಾರುತ್ತಾ ಅಮೃತಕಲಶವನ್ನು ಹಿಡಿದು ತಾಯಿಯ ಸಮೀಪಕ್ಕೆ ಹೋಗಿ ಅಮೃತಕಲಶವನ್ನು ತಾಯಿಯ ಮುಂದಿಟ್ಟು, ಅದನ್ನು ಕದ್ರೂದೇವಿಗೆ ಒಪ್ಪಿಸಿ ತಾಯಿಯ ದಾಸ್ಯವನ್ನು ಬಿಡಿಸಿದನು. ಹಾಗೆಯೇ ಕದ್ರೂ

ಮಾತರಂ ಮೋಚಯಾಮಾಸ ದಾಸ್ಯಭಾವಾತ್ಸ್ವಭಾವತಃ ।
ಕದ್ರುಪುತ್ರಾಂಸ್ತದಾ ಯುದ್ಧೇ ಯೋಧಯಾಮಾಸ ವೈ ಖಗಃ ॥೧೦॥

ಆಶೀವಿಷಾಂಸ್ತದಾ ಸರ್ಪಾನ್ ನಿರ್ವೀರ್ಯಾನಕರೋತ್ತದಾ ।
ತತ್ಫಣಾಮಣಿಮಾಲಾಭಿಃ ಶೋಭಿತಃ ಪತಗೇಶ್ವರಃ ॥೧೧॥

ದ್ರಾವಯಾಮಾಸ ತಾನ್ ಸರ್ಪಾನ್ ಕಾದ್ರವೇಯಾಂಸ್ತದಾ ಖಗಃ ।
ತಾಂ ಮಾತರಂ ಸುಪರ್ಣೀಂ ಚ ಸಾಂತ್ವಯನ್ನತಿವೇಗತಃ ॥೧೨॥

ಮೇರೋರ್ಮೂರ್ಧ್ನಿ ತದಾ ಗತ್ವಾ ಪ್ರತ್ಯಹಂ ವೈ ತದಾಂಡಜಃ ।
ಪತಗೇಶ್ವರಮಭ್ಯರ್ಚ್ಯ ಬಿಲ್ವಪತ್ರೈಶ್ಚ ಪಂಕಜೈಃ ॥೧೩॥

ಸಮಾಯಾತಿ ಗೃಹಂ ಮಾತುರ್ಭಕ್ತೋ ನಿತ್ಯಂ ಮಹೇಶಿತುಃ ।
ತದಾಮೃತಂ ಗತಂ ದೃಷ್ಟ್ವಾ ದೇವಾಸ್ಸರ್ವೇ ಸವಾಸವಾಃ ॥೧೪॥

ಗಂಧರ್ವಾಃ ಕಿನ್ನರಾ ಯಕ್ಷಾ ವಿದ್ಯಾಧರಮಹೋರಗಾಃ ।
ಬಲಪ್ರಮಥನಾಚ್ಚಾರ್ಕಾತೋ ಬಲವಂತಂ ಚ ಪಕ್ಷಿಣಂ ॥೧೫॥

---

ದೇವಿಯು ಮೇಲಿನ ಅಗ್ರಹದಿಂದ ಅವಳ ಪುತ್ರರಾದ ಸರ್ಪಗಳನ್ನೆಲ್ಲಾ ಹಿಡಿದು ಅವರೊಡನೆ ಯುದ್ಧಮಾಡಿ ಅವರನ್ನು ಸದೆಬಡಿಯಲಾರಂಭಿಸಿದನು. ॥೯-೧೦॥

ಮತ್ತು ಕದ್ರೂದೇವಿಯ ಪುತ್ರರಾದ ಸರ್ಪಗಳನ್ನು ಸೋಲಿಸುತ್ತಾ, ಅವರ ತಲೆಯಲ್ಲಿದ್ದ ನಾಗರತ್ನಗಳನ್ನೆಲ್ಲಾ ಕಿತ್ತು ತಂದು ತಾನು ಮಾಲೆಯನ್ನಾಗಿ ಮಾಡಿ ಕೊಂಡು ಧರಿಸಿದನು. ಹಾಗೆ ಅವರನ್ನೆಲ್ಲಾ ಓಡಿಸಿ, ತಾಯಿಯಾದ ಸುಪರ್ಣಾ ದೇವಿಗೆ ಈ ವಿಷಯವನ್ನು ತಿಳಿಸಿ ಸಮಾಧಾನಪಡಿಸಿದನು. ॥೧೧-೧೨॥

ಈರೀತಿ ಗರುಡನು ಅತಿವೀರ್ಯಶಾಲಿಯಾಗಿ ನಿತ್ಯವೂ ಮೇರುಪರ್ವತ ಶಿಖರಕ್ಕೆ ಹಾರಿಹೋಗಿ, ಅಲ್ಲಿದ್ದ ಪತಗೇಶ್ವರಲಿಂಗಕ್ಕೆ ಕಮಲ ಮತ್ತು ಬಿಲ್ವಪತ್ರಾದಿ ಗಳಿಂದ ಪೂಜಿಸಿ ಬಂದು ಮಾತೃಸೇವೆ ಮಾಡುತ್ತಿದ್ದನು. ಇತ್ತಲಾಗಿ ಇಂದ್ರಾದಿ ದೇವತೆಗಳು ಅಮೃತವು ಹೋದುದನ್ನು ನೋಡಿ ಬಹಳ ವ್ಯಥೆಪಟ್ಟರು. ॥೧೩-೧೪॥

ಮತ್ತು ಸಿದ್ಧವಿದ್ಯಾಧರಾದಿ ದೇವತೆಗಳು ಗರುಡನು ಪರಶಿವನ ವರಬಲದಿಂದ ಇಷ್ಟು ಬಲಿಷ್ಠನಾಗಿರುವನೆಂದು ನಂಬಿ, ಆಶ್ಚರ್ಯಹೊಂದಿ, ಇಂದ್ರನೊಡಗೂಡಿ

ಮೇನಿರೇ ವಿಸ್ಮಯೋಪೇತಾಃ ವಿಷ್ಣುಂ ಗತ್ವಾ ತದಾಬ್ರುವನ್ ।
ಉದಂತಂ ತತ್ಕೃತಂ ಸರ್ವೇ ದೇವಾಸ್ತತ್ರ ಸ ವಾಸವಾಃ ॥೧೬॥

॥ ದೇವಾ ಊಚುಃ ॥

ಶೃಣು ವಿಷ್ಣೋ ಭಯಂ ಪ್ರಾಪ್ತಂ ದೇವಾನಾಂ ಗರುಡಾತ್ಸದಾ ।
ಅಮೃತಂ ಯತ್ಪುರಾ ದತ್ತಂ ಸಮುದ್ರಮಥನೋದ್ಭವಂ ॥೧೭॥

ಪೀತಾವಶೇಷಂ ದೇವೈಶ್ಚ ರಕ್ಷಿತಂ ತದ್ಗೃಹೇ ಸದಾ ।
ತದುಜ್ಜಹಾರ ಬಲವಾನಮರಾರಿಃ ಸ ಪಕ್ಷಿರಾಟ್ ॥೧೮॥

ಅಮುಂಚನ್ಮಾತರಂ ಸ್ವಸ್ಯ ದಾಸ್ಯಭಾವಾದಪಿ ಧ್ರುವಂ ।
ಕಶ್ಯಪಸ್ಯೋಪದೇಶೇನ ಶಿವಪೂಜಾಪ್ರಭಾವತಃ ॥೧೯॥

ಹಿನಸ್ತಿ ದೇವಾನ್ ಗಂಧರ್ವಾನ್ ಕಾದ್ರವೇಯಾನಪಿ ದ್ವಿಜಃ ।
ಹೀನಾಮೃತಾನ್ ಹರೇ ದೇವಾನ್ ಮೃತಾನಿತ್ಯುಪಧಾರಯ ॥೨೦॥

ನಿಶ್ರೀಕಂ ವಿಷ್ಟಪಂ ಸರ್ವಂ ಕಷ್ಟಮಂಧಸಮಾವೃತಂ ।
ನ ಭ್ರಾಜತೇ ಯಥಾಪೂರ್ವಂ ತಸ್ಯೋಪಾಯಂ ವದಸ್ವ ನಃ ॥೨೧॥

---

ವಿಷ್ಣುವಿನ ಸಮೀಪಕ್ಕೆ ಹೋಗಿ, ಗರುಡನಿಂದ ತಮಗಾದ ಪರಾಭವವನ್ನೆಲ್ಲಾ ವಿಜ್ಞಾಪಿಸಿದರು. ॥೧೫-೧೬॥

"ಮಹಾವಿಷ್ಣುವೇ, ದೇವತೆಗಳಾದ ನಮಗೆ ಗರುಡನಿಂದ ಮಹಾಭಯ ವೊದಗಿದೆ. ನೀನು ಸಮುದ್ರಮಥನ ಮಾಡಿಸಿ ನಮಗಾಗಿ ತಂದುಕೊಟ್ಟ ಅಮೃತ ವನ್ನು ಸ್ವಲ್ಪ ಕುಡಿದು ಉಳಿದ ಭಾಗವನ್ನು ರಕ್ಷಿಸಿಕೊಂಡಿದ್ದೆವು. ಈಗ ಆ ಅಮೃತ ಭಾಗವನ್ನು ಪಕ್ಷಿರಾಜನಾದ ಗರುಡನು ಅಪಹರಿಸಿರುವನು. ॥೧೭-೧೮॥

ಆದರಿಂದ ಅವನ ತಾಯಿಯ ದಾಸ್ಯವು ಪರಿಹಾರವಾಯಿತು. ತಂದೆಯಾದ ಕಶ್ಯಪಮಹರ್ಷಿಯ ಉಪದೇಶದಿಂದ ಈಶ್ವರಾರಾಧನೆ ಮಾಡಿ, ಆ ವರಬಲದಿಂದ ಶೂರನಾಗಿ ದೇವತೆಗಳಾದ ನಮ್ಮನ್ನೂ, ಕದ್ರೂಪುತ್ರರಾದ ಸರ್ಪಗಳನ್ನೂ ಸೋಲಿಸಿ ದನು. ಮಹಾವಿಷ್ಣುವೇ, ಅಮೃತವು ಹೊರಟುಹೋದಮೇಲೆ ನಾವು ಮೃತ ರಾದಂತೆಯೇ ಸರಿ ॥೧೯-೨೦॥

ಈಗ ನಮ್ಮ ಲೋಕವೆಲ್ಲಾ ಮಂಕಾಗಿದೆ. ಎಲ್ಲವೂ ಕಗ್ಗತ್ತಲೆಯಿಂದ

ಇತ್ಯುಕ್ತೋಽಮರಪುಂಗವೈಃ ಸಹ ಹರಿರ್ವಿಸ್ಮಾಯಿತೋಽನಾಂತರಾ
ದೇವಾನಾಹ ತದಾ ಭಯೇನ ಭಗವದ್ಭಕ್ತಂ ಖಗಂ ತಂ ತದಾ ।
ಓಜಸ್ತೇಜಯುತಂ ಶಿವಾರ್ಚನ ಮಹಾಪ್ರಾಭಾವ್ಯಜಾತಂಪ್ರಭುಂ
ಜೇತಾರಂ ತ್ವಪರಾಜಿತಂ ರಣಗಣೇ ಮೇನೇ ತದಾ ವೈ ಹರಿಃ ॥೨೨॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಅಮೃತಾಹರಣಂ ನಾಮ
ಏಕವಿಂಶೋಽಧ್ಯಾಯಃ

---

ಆವೃತವಾದಂತಿದೆ. ಹಿಂದಿನಂತೆ ನಮ್ಮ ಯಾವ ಪದಾರ್ಥವೂ ಶೋಭಿಸುತ್ತಿಲ್ಲ. ಹೀಗಾದರೆ ನಾವು ಬದುಕುವ ಬಗೆ ಹೇಗೆ? ಈಗ ಯಾವುದಾದರೊಂದುಪಾಯ ವನ್ನು ನಮಗೆ ತಿಳಿಸಿಕೊಟ್ಟು ಎಂದಿನಂತೆ ನಮ್ಮನ್ನುದ್ಧರಿಸು" ಎಂದು ಸಕಲ ದೇವತೆಗಳೂ ಅನನ್ಯಪ್ರವಣತೆಯಿಂದ ಮೊರೆಯಿಡಲು, ಅದನ್ನು ಕೇಳಿ ವಿಷ್ಣುವಿಗೆ ಆಶ್ಚರ್ಯವಾಯಿತು. ಮತ್ತು ಭಗವದ್ಭಕ್ತನೂ, ಶಿವಾರ್ಚನೆಯಿಂದ ಮಹಾಪ್ರಭಾವ ವನ್ನು ಪಡೆದವನೂ ಎನಿಸಿದ ಗರುಡನ ವಿಷಯದಲ್ಲಿ ವಿಷ್ಣುವಿಗೆ ಸ್ವಲ್ಪ ಭಯವೂ ಉಂಟಾಯಿತು. ಅಲ್ಲದೆ ಶಿವಾರ್ಚನೆಯಿಂದ ಓಜಸ್ಸನ್ನೂ, ತೇಜಸ್ಸನ್ನೂ ಪಡೆದಿರುವ ಗರುಡನು ನಿಜವಾಗಿಯೂ ಸಕಲ ಲೋಕವನ್ನೂ ಜಯಿಸಿರುವನು. ಮತ್ತಾರಿಗೂ ಸೋಲತಕ್ಕವನಲ್ಲ. ಯುದ್ಧದಲ್ಲಿ ಅವನನ್ನು ಜಯಿಸುವುದು ಕಷ್ಟವೆಂದು ವಿಷ್ಣುವು ದೇವತೆಗಳೊಡನೆ ಮಾತನಾಡಿದನು. ॥೨೧-೨೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ದ್ವಾವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತತೋ ವಿಷ್ಣುಃ ಸುರಾನಾಹ ಭೀತಾನ್ವೈ ಗರುಡಾತ್ತದಾ ।
ಮನಸಾ ಚಿಂತಯನ್ನರ್ಥಂ ಜಯೇ ತಸ್ಯ ಧೃತವ್ರತಃ ॥೧॥

॥ ಶ್ರೀ ವಿಷ್ಣುರುವಾಚ ॥

ಶೃಣುಧ್ವಮಮರಾಸ್ಸರ್ವೇ ಜಯಂ ಮೇದ್ಯ ಗರುತ್ಮತಃ ।
ಸ ನ ಶಕ್ಯೋ ಬಲೈರ್ಜೇತುಂ ಸರ್ವೈರಪಿ ಸುರಾಸುರೈಃ ॥೨॥

ಮಯಾ ಚ ಬ್ರಹ್ಮಣಾ ಚೈವ ಕಶ್ಯಪಸ್ಯಾತ್ಮಜೋ ಯುವಾ ।
ಕಿಂ ಚ ಶರ್ವಾರ್ಚನಬಲಾದಖರ್ವಂ ಗರ್ವಮಾಶ್ರಿತಃ ॥೩॥

---

## ಇಪ್ಪತ್ತೆರಡನೆಯ ಅಧ್ಯಾಯ

ದೇವತೆಗಳು ಗರುಡನಿಂದ ಹೆದರಿ ಮೊರೆಯಿಟ್ಟುದನ್ನು ಕೇಳಿ ವಿಷ್ಣುವು ಗರುಡನನ್ನು ಜಯಿಸುವ ವಿಷಯವನ್ನೇ ಆಲೋಚಿಸುತ್ತಾ ಹೀಗೆಂದನು. "ಎಲೈ ದೇವತೆಗಳಿರಾ, ಗರುಡನನ್ನು ಜಯಿಸುವುದು ಕಷ್ಟ. ದೇವಾಸುರರಲ್ಲಿ ಯಾರೂ ಅವನನ್ನು ಎದುರಿಸಿ ಜಯಿಸಲಾರರು. ನನಗೂ ಬ್ರಹ್ಮನಿಗೂ ಸಹ ಅವನನ್ನು ಜಯಿಸುವುದು ಕಷ್ಟವಾಗುವುದು. ॥೧-೨॥

ಅದರಲ್ಲಿಯೂ ಈಗ ಈಶ್ವರಾರಾಧನೆಯಿಂದ ಗರುಡನು ಮತ್ತೂ ಬಲಿಷ್ಠನಾ ಗಿರುವನು. ಆದರಿಂದಲೇ ಈಗ ಮನುಷ್ಯರು, ರಾಕ್ಷಸರು, ದೇವತೆಗಳು, ಸರ್ಪಗಳು

ಸ ತೇನ ಪೀಡಯತ್ಯೇವ ಜಗತ್ಸಾಸುರಮಾನುಷಂ ।
ಆಶೀವಿಷಾನಪಿ ಮುದಾ ನಿರ್ವಿಷಾನಕರೋದ್ಬಲೀ ॥೪॥

ಸ ಬಲೀ ಶಂಭುಭಕ್ತಶ್ಚ ಭಸ್ಮರುದ್ರಾಕ್ಷಧೃಕ್ಸದಾ ।
ಪತಗೇಶ್ವರಮಭ್ಯರ್ಚ್ಯ ಮೇರುಮೌಲೌ ಕೃತಾಶ್ರಮಃ ॥೫॥

ಶ್ರಮಹೀನಃ ಸದಾ ಶಂಭೋಃ ಪಾದಸಂಶ್ರಯಕಃ ಖಗಃ ।
ಕ್ಷಯದ್ವೀರಪದಾರ್ಚಾತೋ ವೀರಸೂರ್ಯಃ ಖಗೇಶ್ವರಃ ॥೬॥

ಬಲೀ ಯುವಾ ಚ ಪಕ್ಷೀ ಚ ತ್ರ್ಯಕ್ಷಸಾಪಾರ್ಚನೇ ರತಃ ।
ಬಲಿನೋ ವಿಜಯೋ ಪ್ರಾಪ್ತೇ ಸಾಂತ್ವೇನೈವ ವಶಂ ನಯೇತ್ ॥೭॥

ಸಾಮ್ನೈವಾಭಿಪ್ರಸನ್ನಸ್ಯ ಸರ್ವಂ ಭವತಿ ಹೃದ್ಗತಂ ।
ಶಾಂಭವೇಷು ನ ಮೇ ಧಾರ್ಷ್ಟ್ಯಮುಪಾಯೋ ವಾಪಿ ವಿಕ್ರಮಃ ॥೮॥

ಶಿವಭಕ್ತಾ ಮಹಾಘೋರಾ ಪರಾಕ್ರಮಯುತಾಃ ಸದಾ ।
ಅಘೋರಪಾದಸಂಸಕ್ತಾ ಅಸುರಾ ಭೂಸುರಾಸ್ತದಾ ॥೯॥

---

ಈ ಎಲ್ಲರನ್ನೂ ಹಿಂಸಿಸುತ್ತಿರುವನು. ಮತ್ತು ವಿಷಪೂರಿತಗಳಾದ ಸರ್ಪಗಳನ್ನು ನಿರ್ವಿಷಗಳನ್ನಾಗಿ ಮಾಡಿರುವನು. ||೩-೪||

ಈಶ್ವರನನ್ನು ಭಕ್ತಿಯಿಂದರ್ಚಿಸುತ್ತಾ, ಭಸ್ಮರುದ್ರಾಕ್ಷಧಾರಿಯಾಗಿದ್ದು, ಮೇರುಪರ್ವತಾಗ್ರದಲ್ಲಿರುವ ಪತಗೇಶ್ವರನನ್ನು ಆರಾಧಿಸಿ, ಬಲತೇಜೋವಿಶಿಷ್ಟನಾಗಿ ಅನಾಯಾಸದಿಂದ ಸಕಲರನ್ನೂ ಜಯಿಸಿರುವನು. ಶತ್ರುವೀರರನ್ನು ನಾಶಗೊಳಿಸುವ ಪರಶಿವನ ಪಾದಾನುಗ್ರಹದಿಂದ ಖಗೇಶ್ವರನಾದ ಗರುಡನು ಸಕಲರನ್ನೂ ಭಯಪಡಿಸುತ್ತಿರುವನು. ನಾವು ಈಗ ಬಲಿಷ್ಠನಾದವನೊಡನೆ ಯುದ್ಧಮಾಡುವುದಕ್ಕಿಂತ ಸಮಾಧಾನಕರವಾದ ಮಾತುಗಳಿಂದ ಅವನನ್ನು ವಶಪಡಿಸಿಕೊಳ್ಳುವುದು ಉತ್ತಮಮಾರ್ಗ. ||೫-೬-೭||

ಸಾಮೋಪಾಯದಿಂದಲೇ ಪ್ರಸನ್ನನಾದವನಿಂದ ಸರ್ವವೂ ಅಧೀನವಾಗುವುದು. ಈಶ್ವರಾನುಯಾಯಿಗಳಲ್ಲಿ ನನ್ನ ಶೌರ್ಯವಾಗಲಿ, ತಂತ್ರವಾಗಲಿ ನಡೆಯುವುದಿಲ್ಲ. ಈಶ್ವರಭಕ್ತರು ಬಹಳ ಶೂರರು ಮತ್ತು ಭಯಂಕರಸ್ವರೂಪರು. ಆದಕ್ಕಾಗಿಯೇ

ಪುರಾ ದಕ್ಷಾಧ್ವರೇ ಸರ್ವೇ ವೀರಭದ್ರೇಣ ಶಿಕ್ಷಿತಾಃ ।
ಅಹಂ ದೇವೇಶ್ವರಸ್ತ್ವಂ ಚ ಭಗಾದ್ಯಾ ದೇವತಾ ಗಣಾಃ ॥೧೦॥

ಸಾಗರೋದ್ಭವತೋ ಘೋರಾದ್ಗರಾದ್ದಗ್ಧೋಽಸ್ಮಿ ದೇವತಾಃ ।
ಕರುಣಾಕರದೇವೇನ ತಾರಿತಾ ಗರಭಕ್ಷಣಾತ್ ॥೧೧॥

ಮತ್ಸ್ಯಃ ಕೂರ್ಮೋ ವರಾಹಂ ಚ ನಾರಸಿಂಹತನುಂ ಹರಃ ।
ಶಿಕ್ಷಯಾಮಾಸ ಮೇ ಪೂರ್ವಂ ಕಂದರ್ಪೋ ದರ್ಪಸರ್ಪಹಾ ॥೧೨॥

ಯಸ್ಯ ಭಕ್ತೈರ್ದ್ವಿಜೈಶ್ಚಾಹಂ ಸರ್ವದಾಪಿ ನಿರಾಕೃತಃ ।
ಶಾಪಿತೋಽಹಂ ಚ ಭೃಗುಣಾ ಮಾನುಷೀಂ ಯೋನಿಮಾಶ್ರಿತಃ ॥೧೩॥

ರಾವಣೇನ ರಣೇ ಪೂರ್ವಂ ನಿರ್ವಿಣ್ಣೋಽಸ್ಮಿ ತದಾ ಸುರಾಃ ।
ದಶ ಜನ್ಮಸ್ವಪಿ ತದಾ ಅಸುರೈಃ ಪೀಡಿತೋಽಸ್ಮ್ಯಹಂ ॥೧೪॥

---

ಹಿಂದೆ ಅನೇಕ ರಾಕ್ಷಸರೂ, ಬ್ರಾಹ್ಮಣರೂ, ದೇವತೆಗಳೂ ಅಘೋರನಾದ ಪರಶಿವನ ಪಾದಪೂಜೆಯಿಂದ ಧನ್ಯರಾದರು. ಹಿಂದೆ ದಕ್ಷಬ್ರಹ್ಮನ ಯಾಗಮಂಟಪದಲ್ಲಿ ದೇವೇಂದ್ರನಾದ ನೀನೂ, ನಾನೂ, ಇತರ ಭಗಾದಿದೇವತೆಗಳೂ ಶಿವನಿರ್ಮಿತನಾದ ವೀರಭದ್ರನಿಂದ ಶಿಕ್ಷಿತರಾಗಿರುವೆವು. ॥೮-೯-೧೦॥

ಹಿಂದೆ ಸಮುದ್ರಮಥನಕಾಲದಲ್ಲಿ ಸಮುದ್ರದಿಂದ ಉದ್ಭವಿಸಿದ ಹಾಲಾಹಲ ವಿಷವನ್ನು ದಯೆಯಿಂದ ಈಶ್ವರನು ಪಾನಮಾಡಿ ನಮ್ಮನ್ನು ಬದುಕಿಸಿದನು. ನಾನು ಹಿಂದೆ ಮಾಡಿದ ಮತ್ಸ್ಯ, ಕೂರ್ಮ, ವರಾಹ, ನರಸಿಂಹಾದ್ಯವತಾರಗಳನ್ನು ಅಪಮಾನಗೊಳಿಸಿ ಭಂಗಪಡಿಸಿದನು. ಅಲ್ಲದೆ ನನ್ನ ಪುತ್ರನಾದ ಮನ್ಮಥನ ದರ್ಪವನ್ನು ಶೀಘ್ರದಲ್ಲಿಯೇ ಮುರಿದುಬಿಟ್ಟನು. ॥೧೧-೧೨॥

ನಾನು ಅನೇಕವೇಳೆ ಈಶ್ವರನ ಭಕ್ತರಿಂದ ತಿರಸ್ಕಾರಹೊಂದಿದ್ದೇನೆ. ಭೃಗು ಮಹರ್ಷಿಯ ಶಾಪದಿಂದ ಮಾನುಷಜನ್ಮ ಪಡೆದಿದ್ದೇನೆ. ಮಹಾ ಶಿವಭಕ್ತನಾದ ರಾವಣನಿಂದ ಅನೇಕ ಕಷ್ಟಪಟ್ಟಿದ್ದೇನೆ. ಹೆಚ್ಚೇನು? ನನ್ನ ದಶಾವತಾರಗಳಲ್ಲಿಯೂ ರಾಕ್ಷಸರಿಂದ ಅನೇಕ ದುಃಖಗಳನ್ನು ಅನುಭವಿಸಿದ್ದೇನೆ. ॥೧೩-೧೪॥

ಯದಾ ಯದಾ ಮಾಂ ಗರ್ವಾಢ್ಯಂ ದೃಷ್ಟ್ವಾ ದೇವಃ ಪಿನಾಕಧೃಕ್ ।
ಭವತಶ್ಚ ತದಾ ದೃಪ್ತಾನ್ ದೃಷ್ಟ್ವಾ ವೈ ಸ ಮಹೇಶ್ವರಃ ॥೧೫॥

ಉತ್ಪಾದ್ಯೈವಾಸುರಶ್ರೇಷ್ಠಾನ್ ಮುರಜಂಭಾದಿ ವೃತ್ರಕಾನ್ ।
ನಮುಚಿಪ್ರಮುಖಾಂಶ್ಚಾಪಿ ತಥಾನ್ಯಾಂಶ್ಚ ಯುಗೇಯುಗೇ ॥೧೬॥

ಹಿರಣ್ಯಾಕ್ಷಾದಿಭಿರ್ಯುದ್ಧೇ ಅಸ್ಮಾನ್ಯೋಽಹಯತೀಶ್ವರಃ ।
ತಾಂಶ್ಚ ದೃಪ್ತಾನಥ ಜ್ಞಾತ್ವಾ ಅಸ್ಮಾಭಿರ್ವಿನಿಹಂತಿತಾನ್ ॥೧೭॥

ಅಸ್ಮಾಭಿರಪಿ ಯೇಽಶಕ್ಯಾ ನ ಯುದ್ಧೇ ಹಂತ್ಯಸೌ ಸ್ವಯಂ ।
ತ್ರಿಪುರಾಂಧಕಕಾಮಾದಿ ಕಾಲಕಾಲಃ ಕೃಪಾನಿಧಿಃ ॥೧೮॥

ದಧೀಚಿನಾಪಿ ಮುನಿನಾ ನಿರ್ಜಿತೋಽಸ್ಮಿ ರಣಾಜಿರೇ ।
ಕ್ಷುಪಸ್ಯ ಪಕ್ಷಪಾತೇನ ಏವಮಾದಿ ಮಯಾದ್ಭುತಂ ॥೧೯॥

ಭವೋದ್ಭವಸ್ಯ ಚರಿತಂ ದೃಷ್ಟಂ ಪೂರ್ವಂ ಸುರಾಸುರಾಃ ।
ತಸ್ಮಾತ್ಸಗೇಶ್ವರಜಯೇ ತಂ ಪ್ರಸಾದ್ಯ ಜಯೋ ಭವೇತ್ ॥೨೦॥

---

ನಾನು ಎಂದಾದರೂ ಅಹಂಕಾರದಿಂದ ಮೆರೆದರೆ, ನೀವು ಯಾವಾಗಲಾದರೂ ಗರ್ವದಿಂದ ವರ್ತಿಸಿದರೆ, ಕೂಡಲೆ ಪರಶಿವನು ಮುರ, ಜಂಭ, ವೃತ್ರಾಸುರ, ನಮುಚಿ ಮುಂತಾದ ರಾಕ್ಷಸರನ್ನು ಸೃಷ್ಟಿಮಾಡಿ ನಮ್ಮ ಶಕ್ತಿಯನ್ನು ಕುಂಠಿತವನ್ನಾಗಿ ಮಾಡುವನು. ॥೧೫-೧೬॥

ಹಿರಣ್ಯಾಕ್ಷಾದಿ ರಾಕ್ಷಸರು ಈಶ್ವರಬಲದಿಂದ ನಮ್ಮನ್ನು ಸೋಲಿಸಿ ಅನಂತರ ಅವರೂ ಅಹಂಕಾರಪಡಲು ಆರಂಭಿಸಿದರು. ಆಗ ಅದೇ ಬಲವನ್ನು ನಮಗೆ ಕೊಟ್ಟು ನಮ್ಮಿಂದ ಅವರನ್ನು ಶಿಕ್ಷಿಸಿದನು. ನಮ್ಮಿಂದ ಕೊಲ್ಲಲಾಗದ ತ್ರಿಪುರಾಸುರ, ಅಂಧಕಾಸುರ, ಮನ್ಮಥ, ಯಮ ಮುಂತಾದವರನ್ನು ಸದೆಬಡಿಯಲು ತಾನೇ ಯುದ್ಧಕ್ಕೆ ಹೊರಟುಬಿಟ್ಟನು. ॥೧೭-೧೮॥

ದಧೀಚಿಮಹರ್ಷಿಯಿಂದ ನಾನು ಅಪಮಾನಿತನಾಗಿರುವೆನು. ಕ್ಷುಪನ ಮೇಲಿನ ಅಭಿಮಾನದಿಂದ ಶ್ರಮಪಟ್ಟಿದ್ದೇನೆ. ಭವೋದ್ಭವನೆನಿಸಿದ ಮಹಾದೇವನ ಚರಿತೆಯನ್ನು ದೇವಾಸುರರೆಲ್ಲರೂ ಹಿಂದೆ ತಿಳಿದಿರುವರು. ಹೀಗಿರುವುದರಿಂದ

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಸ ಸುರೈಃ ಸಾರ್ಧಂ ಯಯೌ ಯತ್ರ ಖಗೇಶ್ವರಃ ।
ಮೇರುಮೂರ್ಧ್ನಿ ಕೃತಾವಾಸಮಂಡಜಂ ಪ್ರಾಹ ಮಾಧವಃ ॥೨೧॥

ಧನ್ಯೋಽಸಿ ಕೃತಕೃತ್ಯೋಽಸಿ ಮಾನ್ಯೋಽಸಿ ಪತಗೇಶ್ವರ ।
ನ ತ್ವಯಾ ಸದೃಶಂ ಭೂತಂ ಲೋಕೇ ದೃಷ್ಟಂ ಮಯಾ ಸುರೈಃ॥೨೨॥

ಶಿಪಿವಿಷ್ಟಪದಾರ್ಚಾತಃ ಸರ್ವೇಷಾಂ ಕಷ್ಟನಾಶಕಃ ।
ಸುಸಂತುಷ್ಟಃ ಸುನಿಷ್ಠಾವಾನ್ ಜ್ಯೇಷ್ಠಲಿಂಗಾರ್ಚನಾತ್ಸದಾ ॥೨೩॥

ಬಲಪ್ರಮಥನಾರ್ಚಾತೋ ಬಲವಾಂಸ್ತ್ವಂ ಖಗೇಶ್ವರ ।
ಕ್ಷಯದ್ವೀರಪದಾರ್ಚಾತೋ ವೀರೋಽಸ್ಯಂಡಜಸತ್ತಮ ॥೨೪॥

॥ ಸೂತ ಉವಾಚ ॥

ಕಸ್ತೇ ಪ್ರಭಾವಂ ಚ ಗುಣಂ ಶಕ್ತೋ ವಕ್ತುಂ ಸುರೇಷ್ವಪಿ ।
ಅಶಕ್ತಾ ಏವ ಸರ್ವೇಽಪಿ ತುಲ್ಯಃ ಶಕ್ತಿಧರೇಣ ಹಿ ॥೨೫॥

---

ಗರುಡನನ್ನು ಜಯಿಸುವ ಕಾರ್ಯದಲ್ಲಿ ಪ್ರಯತ್ನಿಸದೆ ಅವನನ್ನು ಸಾಂತ್ವಯಿಸುವುದೇ ಒಳ್ಳೆಯದು. ॥೧೯-೨೦॥

ಹೀಗೆ ನಿಶ್ಚಯಿಸಿ ವಿಷ್ಣುವು ಇತರ ದೇವತೆಗಳೊಡಗೂಡಿ, ಮೇರುಶಿಖರದಲ್ಲಿ ವಾಸಮಾಡುತ್ತಿದ್ದ ಗರುಡನ ಸಮೀಪಕ್ಕೆ ಪ್ರಯಾಣ ಮಾಡಿ, ಗರುಡನನ್ನು ನೋಡುತ್ತಾ ಹೀಗೆಂದನು—"ಪಕ್ಷೀಶ್ವರನೇ, ನೀನೇ ಧನ್ಯನು, ನೀನೇ ಮಾನ್ಯನು. ಈ ಲೋಕದಲ್ಲಿ ನಿನಗೆ ಸಮಾನವಾದ ಪ್ರಾಣಿಯೊಂದನ್ನು ನಾನೂ ದೇವತೆಗಳಾರೂ ಕಾಣೆವು. ॥೨೧-೨೨॥

ಕಿರಣರೂಪದಿಂದ ಪ್ರವೇಶಿಸುವ ಸಾಮರ್ಥ್ಯವುಳ್ಳ ಪರಶಿವನ ಪಾದಪೂಜೆಯಿಂದ ನೀನು ಸರ್ವರ ಕಷ್ಟವನ್ನೂ ಪರಿಹರಿಸುವಷ್ಟು ಶಕ್ತನಾಗಿರುವೆ. ದಿವ್ಯವಾದ ಶಿವಲಿಂಗಾರ್ಚನೆ, ಹಾಗೆಯೇ ಬಲಿಷ್ಠರಾದ ಮತ್ತು ಪರಾಕ್ರಮಿಗಳೆನಿಸಿದ ಶತ್ರುಗಳನ್ನೆಲ್ಲಾ ಧ್ವಂಸಮಾಡಿದ ಪರಶಿವನ ಪಾದಪೂಜೆಯ ಫಲವಾಗಿ ಈಗ ನೀನು ಮಹಾಮಹಿಮನೂ, ಶೂರನೂ ಆಗಿರುವೆ. ॥೨೩-೨೪॥

ನಿನ್ನ ಪ್ರಭಾವವನ್ನೂ ಗುಣವನ್ನೂ ವಿವರಿಸಿ ಹೇಳುವಷ್ಟು ಶಕ್ತಿ ನಮ

ಮತ್ತೋ ವೃಣುಷ್ವ ಕಾಮಂ ತೇ ತದದ್ಯೈವ ಪ್ರಪೂರಯೇ ॥೨೬॥

ಇತಿ ವಿಷ್ಣುವಚಶ್ಶ್ರುತ್ವಾ ಪ್ರಹಸ್ಯ ಗರುಡೋಽವದತ್ ।
ಮೃಡಾರ್ಚನರತೋ ವಿಷ್ಣುಮಿಂದ್ರಾಗ್ನೀನಪಿ ತತ್ರ ವೈ ॥೨೭॥

॥ ಗರುಡ ಉವಾಚ ॥

ಸರ್ವಂ ಜಾನಾಮಿ ತೇ ಚಿತ್ರಂ ಸುರಾಣಾಂ ಕಾರ್ಯಸಾಧಕ ।
ತ್ರ್ಯಕ್ಷಾರ್ಚನಪ್ರಭಾವೇನ ತ್ವಯಾ ಚಕ್ರಮಿದಂ ಹರೇ ॥೨೮॥

ಲಬ್ಧಂ ತೇನೈವ ವಿಜಯೋ ಭವಿಷ್ಯತಿ ಸುರೇಷ್ವಪಿ ।
ವೈಕುಂಠಮಪಿ ಸಂಪ್ರಾಪ್ತಂ ತದಾ ಶರ್ವಪದಾಶ್ರಯಾತ್ ॥೨೯॥

ದೇವಾನಹಂ ಸದಾ ಜಾನೇ ಕಾಂದಿಶೀಕಾನ್ ಹಿ ಮತ್ಸರಃ ।
ಪುರಾ ದಕ್ಷಮಖೇ ಯೂಯಂ ವೀರಭದ್ರೇಣ ಶಿಕ್ಷಿತಾಃ ॥೩೦॥

ಭ್ರಷ್ಟಾ ನಷ್ಟೌಜಸಃ ಸರ್ವೇ ಶಿವದ್ರೋಹೇಣ ವೈ ತದಾ ।
ಗರಜ್ವಾಲಾವಲೀದಗ್ಧತನುಸ್ತ್ವಂ ಭಾಸಿ ಕಾಷ್ಠವತ್ ॥೩೧॥

---

ಗಾರಿಗೂ ಇಲ್ಲ. ನೀನು ನಿಜವಾಗಿಯೂ ಸಾಕ್ಷಾತ್ಪರಶಿವನಿಗೆ ಸರಿಸಮನೆನಿಸಿರುವೆ. ಈಗಲೂ ನನ್ನಿಂದ ನಿನಗೇನು ಬೇಕೋ ಕೇಳು. ವರಕೊಡುವೆನು" ಎಂದು ವಿಷ್ಣುವು ಗರುಡನೊಡನೆ ಮಾತನಾಡಲು, ಪರಶಿವನ ನಿಜಭಕ್ತನಾದ ಗರುಡನು ನಗುತ್ತಾ ವಿಷ್ಣು ಮತ್ತು ದೇವತೆಗಳನ್ನು ಕುರಿತು ಹೀಗೆಂದನು. ॥೨೫-೨೭॥

"ಮಹಾವಿಷ್ಣುವೇ, ನಿನ್ನ ಉಪಾಯವು ನನಗೆ ಗೊತ್ತು. ಹೀಗೆಯೇ ನೀನು ದೇವತೆಗಳ ಕಾರ್ಯವನ್ನೆಲ್ಲಾ ಸಾಧಿಸಿರುವೆ. ಹಿಂದೆ ನೀನು ಪರಶಿವನನ್ನು ಅರ್ಚಿಸಿ ಅದರ ಬಲದಿಂದಲೇ ಸುದರ್ಶನ ಚಕ್ರವನ್ನೂ, ದೇವತೆಗಳಿಗೆ ಜಯವನ್ನೂ, ವಾಸಕ್ಕೆ ವೈಕುಂಠಲೋಕವನ್ನೂ ಸಂಪಾದಿಸಿದೆ. ॥೨೮-೨೯॥

ನನ್ನ ಆರ್ಭಟಕ್ಕೆ ಹೆದರಿ ದಿಕ್ಕು ದಿಕ್ಕಿಗೆ ಓಡಿದ ಈ ದೇವತೆಗಳನ್ನು ನಾನು ಬಲ್ಲೆನು. ಇವರೆಲ್ಲರೂ ಹಿಂದೆ ಶಿವದ್ರೋಹವೆಸಗಿ ದಕ್ಷಬ್ರಹ್ಮನ ಸಭೆಯಲ್ಲಿ ವೀರಭದ್ರನಿಂದ ಶಿಕ್ಷಿತರಾಗಿ ನಿರ್ವೀರ್ಯರಾಗಿ ಹೋಗಿರುವರು. ನೀನೂ ಸಹ ಸಮುದ್ರಮಥನದಿಂದ ಹುಟ್ಟಿದ ಹಾಲಾಹಲ ವಿಷದಿಂದ ಕರುಕಾಗಿ, ಸೌದೆಯಂತೆ ನಿಶ್ಚೇತನನಾಗಿದ್ದೆ. ॥೩೦-೩೧॥

ತ್ವಂ ಕಥಂ ವರದೋ ಮೇಽದ್ಯ ಕಿಂ ನೂನಂ ಮಮ ವೈ ಹರೇ ।
ಶಿವಾರ್ಚಕಸ್ಯ ಮೇ ಕಿಂಚಿತ್ಸ್ವಪ್ನೇಽಪ್ಯದ್ಯ ನ ದುರ್ಲಭಂ ॥೩೨॥

ಅಚಲಾತುಲರಾಜಕನ್ಯಕಾ
ಕುಚಲೀಲಾಲಲಿತೋರುಚಾರುವಕ್ಷಂ ॥೩೩॥
ಶ್ರುತಿಲೋಲಾಕ್ಷವರಾಕ್ಷಮಾಲಭೂಷಂ ।
ವಿಷಮಾಕ್ಷಂ ಭಜತಿ ಪ್ರದೋಷಕಾಲೇ ॥೩೪॥

ಯಃ ಕಾಲಾಂತಕಪೂಜನೇನ ದಿವಸಂ ನಿನ್ಯೇ ಸ ಕಾಲಾತಿಗೋ
ಭೂಯಾನ್ನೈವ ಭವೇಷು ಸಂಸೃತಿಭರೇಷ್ವಾಕಂತಲಗ್ನೋಽಪ್ಯಸೌ ।
ದುಃಖೇಷು ಪ್ರಸಭಂ ಹಿ ಮಜ್ಜತಿ ನ ವೈ ಕಿಂ ದುಷ್ಕೃತೈಃ ಶಾಂಕರೋ
ಭದ್ರಾಣ್ಯೇವ ಲಭೇತ ಶಂಕರಕೃಪಾಪೀಯೂಷಧಾರಾರಸೈಃ ॥೩೫॥

ಶತಪಥಯಜುಷಾಮಥೋರ್ಧ್ವಗನ್ಯಂ
ಯಚ್ಛ್ರುತಿಸಾರಂ ಜಪತಾಮಥ ಪ್ರದೋಷೇ ।

---

ಅಂತಹ ನೀನು ನನಗೆ ವರಕೊಡುವುದೆಂದರೇನು? ಈಶ್ವರಭಕ್ತನಾದವನಿಗೆ ಇನ್ನೊಬ್ಬನು ಕೊಡಬೇಕಾದ ವರವೇನಿದೆ? ನನಗೆ ದುರ್ಲಭವಾದ ವಸ್ತುವು ಪ್ರಪಂಚದಲ್ಲಿ ಯಾವುದೂ ಇಲ್ಲ. ನಾನೇ ನಿನಗೆ ಬೇಕಾದ ವರಗಳನ್ನು ಕೊಡ ಬಲ್ಲೆನು. ಸಂತೋಷದಿಂದ ನಿನಗೆ ಬೇಕಾದ ವರವನ್ನು ಕೇಳು, ಎಂದನು.॥೩೩-೩೪॥

ಯಾವನು ಪ್ರದೋಷಕಾಲದಲ್ಲಿ ಗಿರಿರಾಜಕನ್ಯೆಯಾದ ಪಾರ್ವತಿಯ ಕುಚ ಗಳಿಂದಲಂಕೃತವಾದ ವಕ್ಷಸ್ಸುಳ್ಳ ಮತ್ತು ಕರ್ಣಕುಂಡಲಗಳಿಂದಲೂ, ರುದ್ರಾಕ್ಷಿಯ ಸರಗಳಿಂದಲೂ ಅಲಂಕೃತನಾಗಿರುವ, ತ್ರಿಲೋಚನನಾದ ಕಾಲಾಂತಕನೆನಿಸಿರುವ ಮಹಾದೇವನನ್ನು ಪೂಜಿಸಿ ಭಜಿಸುವನೋ, ಅಂತಹವನಿಗೆ ಎಂದಿಗೂ ಯಮಬಾಧೆ ಯಿರಲಾರದು. ಪುನರ್ಜನ್ಮವೇ ಲಭಿಸಲಾರದು. ಒಂದುವೇಳೆ ಮಾನವನಾಗಿ ಜನಿಸಿ ಸಂಸಾರವನ್ನು ಸೇರಿದರೂ ಅವನಿಗೆ ಎಂದೂ ದುಃಖವು ಲಭಿಸಲಾರದು. ಶಾಂಕರರೆ ನಿಸಿದವರಿಗೆ ಸಕಲ ದುಃಖಗಳೂ ಮಂಗಳಕಾರ್ಯಗಳಾಗಿ ಪರಿಣಮಿಸುವುವು. ಪರಶಿವನ ದಯಾಸುಧೆಯನ್ನು ಬೀರುವ ಕಟಾಕ್ಷವೀಕ್ಷಣಕ್ಕೆ ಪಾತ್ರರಾದವರಿಗೆ ಯಾವ ಸುಖಕ್ಕೆ ತಾನೆ ಕೊರತೆಯಿದ್ದೀತು? ॥೩೪-೩೫॥

ಶತಪಥಬ್ರಾಹ್ಮಣದಲ್ಲಿ ಉಕ್ತವಾದ ಅನೇಕ ಮಹಿಮೆಗಳುಳ್ಳ ಮತ್ತು ಸಕಲ

ಪ್ರಮಥಪತಿಪದಾಬ್ಜಲೋಲಚಿತ್ತೋ
ಭ್ರಮತೇ ನೈವ ಭವೇ ಭವೇಷು ಸಂಸಕ್ತಃ ॥೩೬॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ದ್ವಾವಿಂಶೋಽಧ್ಯಾಯಃ

---

ವೇದಾರ್ಥಗಳ ಸಾರದಂತಿರುವ ಮಹಾದೇವನನ್ನೂ, ರುದ್ರಾಧ್ಯಾಯವನ್ನೂ ಪ್ರದೋಷಕಾಲದಲ್ಲಿ ಜಪಿಸುತ್ತಾ, ಸದಾ ಪರಶಿವನ ಪಾದಕಮಲದಲ್ಲಿ ದುಂಬಿಯಂತೆ ಚಲಿಸುತ್ತಿರುವ ಮನಸ್ಸುಳ್ಳವನಾಗಿ ಯಾವನು ಜೀವಿಸುವನೋ ಅವನಿಗೆ ಎಂದೂ ಜನ್ಮಾಂತರಗಳು ದೊರೆಯಲಾರವು. ಅಂದರೆ ಸಾಕ್ಷಾನ್ಮುಕ್ತನೇ ಆಗುವನು ಎಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ಶಿವಮಹಿಮೆಯನ್ನು ವಿವರಿಸಿ ಹೇಳಿದರು. ॥೩೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ತ್ರಯೋವಿಂಶೋಽಧ್ಯಾಯಃ

॥ ಸೂತ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ತಮಾಹ ಸುರಸತ್ತಮೈಃ ।
ವಿಷ್ಣುಸ್ತದಾಂಡಜಶ್ರೇಷ್ಠಂ ಕಾಶ್ಯಪಿಂ ಮೇರುಮೂರ್ಧನಿ ॥೧॥

॥ ವಿಷ್ಣುರುವಾಚ ॥

ಯದಿ ದೇಯೋ ವರೋ ಮಹ್ಯಂ ಸತ್ಯಮದ್ಯ ಖಗೇಶ್ವರ ।
ಮಾತುರ್ದಾಸ್ಯಾಯ ಹರಣೇ ಯನ್ನೀತಮಮೃತಂ ತ್ವಯಾ ॥೨॥

ತದದ್ಯ ದೇಹಿ ದೇವಾನಾಮಮೃತಾಸ್ತೇ ನ ವೈ ಸುರಾಃ ।
ಹೀನಾಮೃತಾಃ ಸುರಾಸ್ಸರ್ವೇ ಮೃತಾನಿತ್ಯುಪಧಾರಯ ॥೩॥

---

## ಇಪ್ಪತ್ತಮೂರನೆಯ ಅಧ್ಯಾಯ

ಗರುಡನೇ ವಿಷ್ಣುವನ್ನು ವರಕೇಳುವಂತೆ ಪ್ರೇರಿಸಲು, ಆಗ ಮಹಾವಿಷ್ಣುವು ದೇವತೆಗಳೊಡಗೂಡಿ, ಗರುಡನೊಡನೆ ಹೀಗೆಂದನು. "ಪಕ್ಷಿರಾಜನೇ, ನನಗೆ ನೀನು ವರಕೊಡುವುದು ನಿಜವಾದರೆ, ನೀನು ದೇವತೆಗಳಿಂದ ಅಮೃತವನ್ನು ಕೊಂಡೊಯ್ದಿರುವೆಯಲ್ಲವೆ! ಅದನ್ನು ಹಿಂದಕ್ಕೆ ನಮಗೆ ಕೊಡು. ॥೧-೨॥

ಅಮೃತವಿಲ್ಲದ ಮೇಲೆ ದೇವತೆಗಳು ಮೃತರಾದಂತೆಯೇ ಸರಿ. ಆದ್ದರಿಂದಲೇ ಅಮೃತವನ್ನು ಹಿಂದಕ್ಕೆ ಕೊಡು. ಅಲ್ಲದೆ ಮುಂದೆ ನಾನು ರಾಕ್ಷಸರ ಮೇಲೆ ಯುದ್ಧ

ಸಾಹಾಯ್ಯಮಾಸುರೇ ಯುದ್ಧೇ ವಾಹನತ್ವೇನ ಮೇ ಕುರು ।
ವರದ್ವಯಂ ಮೇ ದೇಹ್ಯದ್ಯ ಸತ್ಯಸಂಧೋ ಭವಾನ್ ಖಗ ॥೪॥

ಸತ್ಯೇ ಪ್ರತಿಷ್ಠಿತಾ ಲೋಕಾ ಋತಂ ಸತ್ಯಂ ಮಹೇಶ್ವರಃ ।
ಸತ್ಯೇನಾದಿತ್ಯಾ ಬಲಿನಃ ಸತ್ಯೇನ ಧೃತಯೋ ಮಹೀ ॥೫॥

ನಕ್ಷತ್ರಾಣಾಮಥೋಪಸ್ಥೇ ಸೋಮಸ್ಸತ್ಯೇನ ಆಹಿತಃ ।
ಇತ್ಯೇಷಾ ಬಹ್ವೃಚಃ ಪ್ರೋಕ್ತಾಃ ಶ್ರುತಿರೇಷಾ ಸನಾತನೀ ॥೬॥

ತಸ್ಮಾತ್ಸತ್ಯಪರೋ ಭೂಯಾಃ ಪತಗೇಶಸ್ಯ ಸಂನಿಧೌ ।
ತದಾ ವಿಷ್ಣುವಚಶ್ಶ್ರುತ್ವಾ ಪ್ರಾಹಾಂಡಜಕುಲೋದ್ಭವಃ ॥೭॥

ಶರ್ವಪಾದಾರ್ಚನರತೋ ಗರ್ವಪರ್ವತಮಧ್ಯಗಃ ॥೮॥

॥ ಪತಗ ಉವಾಚ ॥

ಸತ್ಯೇ ಸ್ಥಿತೋಽಹಮೇವಾದ್ಯ ಸತ್ಯಭೂತಾಃ ಶಿವಾಶ್ರಯಾಃ ।
ಆಜ್ಞಯಾ ದೇವದೇವಸ್ಯ ಯೂಯಂ ಸರ್ವೇ ಸುರಾಸುರಾಃ ॥೯॥

---

ಮಾಡಬೇಕಾಗುವುದು. ಆಗ ನೀನು ನನಗೆ ವಾಹನನಾಗಿದ್ದು ಸಹಾಯಮಾಡು. ಸತ್ಯವಂತನಾದ ನೀನು ದಯೆಯಿಂದ ಈ ಎರಡು ವರಗಳನ್ನು ನನಗೆ ಕೊಡು ॥೩-೪॥

ಸಕಲ ಲೋಕಗಳೂ ಸತ್ಯದಿಂದಲೇ ನಿಂತಿವೆ. ಸತ್ಯಸ್ವರೂಪನೇ ಮಹೇಶ್ವರನು. ಮಹೇಶ್ವರನೇ ಸತ್ಯವು. ದ್ವಾದಶಾದಿತ್ಯರೂ ಸತ್ಯದಿಂದಲೇ ಬಲಿಷ್ಠರು. ಭೂಮಿ ನಿರಾಧಾರವಾಗಿ ನಿಂತಿರುವುದೂ ಸತ್ಯದಿಂದಲೇ. ನಕ್ಷತ್ರಗಳೂ, ಚಂದ್ರನೂ ಸತ್ಯದಿಂದಲೇ ಜ್ಯೋತಿಸ್ವರೂಪದಿಂದಿರುವರು. ಎಂಬ ಅರ್ಥಬೋಧಕಗಳಾದ ಶ್ರುತಿಯ ಋಕ್ಕುಗಳು ಸತ್ಯಸ್ವರೂಪವನ್ನು ವಿವರಿಸುತ್ತಿರುವುವು. ॥೫-೬॥

ಆದ್ದರಿಂದ ನೀನೂ ಸತ್ಯವನ್ನು ಬಿಡದೆ ಪತಗೇಶ್ವರನ ಸನ್ನಿಧಿಯಲ್ಲಿ ಆಡಿದಂತೆ ವರವನ್ನು ಸಲ್ಲಿಸು" ಎಂದು ವಿಷ್ಣುವು ಹೇಳಲು, ಆಗ ಗರುಡನು ಗರ್ವಪರ್ವತದ ಮಧ್ಯದಲ್ಲಿರುವಂತೆ, ಈಶ್ವರನ ಪಾದಾರ್ಚನೆಯಿಂದ ಬಲಿಷ್ಠನಾಗಿ ಹೀಗೆಂದನು. ॥೭-೮॥

ಎಲೈ ವಿಷ್ಣುದೇವನೇ, ನಾನು ಸತ್ಯವಂತನು ನಿಜ. ಸತ್ಯವಂತರೆಲ್ಲಾ ಶಿವಾಶ್ರಿತರೇ. ನೀವೂ ಸಹ ದೇವದೇವನಾದ ಪರಶಿವನ ಆಜ್ಞೆಯಿಂದ ಸತ್ಯವಂತರೆ

ಉದೇತಿ ಸವಿತಾ ನಿತ್ಯಂ ವಾಯುರ್ವಾತಿ ಶಿವಾಜ್ಞಯಾ ।
ಚಂದ್ರೋಽಪಿ ಭಗಣೈಃ ಸಾರ್ಧಂ ಭ್ರಮಂತೇಽಹರ್ನಿಶಂ ಗ್ರಹಾಃ ॥೧೦॥

ಶೇಷೋ ಶೇಷೈಃ ಶಿರೋವೃಂದೈರ್ಬಿಭರ್ತಿ ಪೃಥಿವೀಮಪಿ ।
ಸಾಗರೋ ಗರಕಂಠಸ್ಯ ಶಾಸನಾನ್ನೋರ್ಧ್ವಗೋ ಭವೇತ್ ॥೧೧॥

ಮುನಯೋ ಮನವಶ್ಚೈವ ಅನಲೋ ವಹತೇ ಹವಿಃ ।
ಲೋಕಾಲೋಕ್ಯಾಸ್ತಥಾ ಸರ್ವೇ ವಿಷ್ಣೋ ಸತ್ಯೇ ಪ್ರತಿಷ್ಠಿತಾಃ ॥೧೨॥

ದದಾಮ್ಯದ್ಯ ಪರಂ ತೇಽದ್ಯ ಯಥಾ ಸಂಪ್ರಾರ್ಥಿತಂ ತ್ವಯಾ ।
ಸುರಾಣಾಂ ಸನ್ನಿಧೌ ವಿಷ್ಣೋ ಕಿಂ ಪುನಃ ಶಿವಸನ್ನಿಧೌ ॥೧೩॥

ಯಶ್ಶಂಭೋಃ ಸನ್ನಿಧೌ ಸತ್ಯಂ ಕೃತ್ವಾ ನೈವ ಪ್ರಪಾಲಯೇತ್ ।
ಸ ಯಾತಿ ನರಕಂ ಘೋರಂ ದಾರುಣಂ ದೇಹಸಂಕ್ಷಯೇ ॥೧೪॥

ತಸ್ಮಾದವಶ್ಯಂ ಕರ್ತಾಸ್ಮಿ ದದಾಮ್ಯಮೃತಮೇವ ತೇ ।
ಸುರಾಣಾಂ ದುಃಖಜನಕಂ ನ ಮೇ ಕಾರ್ಯಂ ಹರೇ ಸದಾ ॥೧೫॥

---

ನಿಸಿರುವಿರಿ. ಶಿವಾಜ್ಞೆಯಿಂದಲೇ ಸೂರ್ಯೋದಯ, ವಾಯುಚಲನೆ, ಚಂದ್ರನಕ್ಷತ್ರಗಳ ಭ್ರಮಣ, ಅಹೋರಾತ್ರಗಳ ಬದಲಾವಣೆ ಇವೆಲ್ಲವೂ ನಡೆಯುತ್ತಿರುವುವು. ॥೯-೧೦॥

ಆದಿಶೇಷನು ತನ್ನ ಸಹಸ್ರಶಿರಸ್ಸುಗಳಿಂದ ಪ್ರಪಂಚವನ್ನು ಹೊತ್ತಿರುವುದೂ, ಸಮುದ್ರರಾಜನು ಎಲ್ಲೆಯನ್ನು ಮೀರದಿರುವುದೂ, ಮುನಿಗಳೂ, ಮನುಗಳೂ, ಪ್ರಭಾವಶಾಲಿಗಳಾಗಿರುವುದೂ, ಅಗ್ನಿಯು ಹವಿಸ್ಸನ್ನು ಹೊರುವುದೂ, ಲೋಕಗಳು ಊರ್ಧ್ವಾಧೋಭಾಗದಲ್ಲಿ ನಿಂತಿರುವುದೂ ಶಿವಾಜ್ಞೆಯಿಂದಲೇ. ಅವೆಲ್ಲವೂ ಸತ್ಯದಿಂದಲೇ ನಡೆಯತಕ್ಕವುಗಳು. ॥೧೧-೧೨॥

ಆದ್ದರಿಂದ ಮಹಾವಿಷ್ಣುವೇ, ದೇವತೆಗಳ ಸಮೀಪದಲ್ಲಿ ನೀನು ವರವನ್ನು ಕೇಳಿದರೇ ಸಾಕು. ವರಕೊಡಲು ಸಿದ್ಧನಾಗುವೆನು. ಹಾಗಿರುತ್ತಾ ಶಿವಸನ್ನಿಧಿಯಲ್ಲಿ ನಾನು ಪ್ರತಿಜ್ಞೆ ಮಾಡಿರುವಾಗ ಮಾತಿಗೆ ತಪ್ಪುವುದುಂಟೇ? ಶಿವಸನ್ನಿಧಿಯಲ್ಲಿ ಆಡಿದ ಮಾತಿಗೆ ತಪ್ಪುವವನು ಮರಣಾನಂತರ ಘೋರನರಕಕ್ಕೆ ಬಲಿಯಾಗುವನು. ॥೧೩-೧೪॥

ಆದ್ದರಿಂದ ವಿಷ್ಣುವೇ, ನಿನ್ನ ಇಷ್ಟದಂತೆ ಅಮೃತವನ್ನು ಹಿಂದಿರುಗಿ ಕೊಡು

ಮಾತುರ್ದಾಸ್ಯಾಪಹರಣೇ ಸಮಾನೀತಂ ಮಯಾಧುನಾ ।
ಕಿಂ ಚೈಕಂ ವಚ್ಮಿ ತೇ ವಿಷ್ಣೋ ಸುರಾಣಾಮುಪಶೃಣ್ವತಾಂ ॥೧೬॥

ಸನ್ನಿಧೌ ಪತಗೇಶಸ್ಯ ಸತ್ಯಂ ವದ ಹರೇಧುನಾ ।
ಯದಾ ಭಸ್ಮಾದಿದಿಗ್ಧಾಂಗಸ್ತ್ರಿಪುಂಡ್ರೋಜ್ವಲಚಿಹ್ನವಾನ್ ॥೧೭॥

ರುದ್ರಾಕ್ಷಮಾಲಾಭರಣೋ ಯತ್ರ ಕ್ರುದ್ಧೋ ಗಮಿಷ್ಯತಿ ।
ಲಿಂಗಾರ್ಚಕೋಸಿ ನಿಯತಂ ಬಿಲ್ವಪತ್ರೈರಖಂಡಿತೈಃ ॥೧೮॥

ಶಿವನೈವೇದ್ಯಭೋಕ್ತಾ ತ್ವಂ ಸದಾ ಶರ್ವಪದಾಶ್ರಯಃ ।
ಸುರೈರಪೀದೃಶೈರ್ಯುಕ್ತೋ ಯದಾ ವಿಷ್ಣೋ ಗಮಿಷ್ಯಸಿ ॥೧೯॥

ತದಾ ತೇ ವಿಜಯೋ ವಿಷ್ಣೋ ಭವಿಷ್ಯತಿ ಶಿವಾರ್ಚನಾತ್ ।
ಶಿವಚಿಹ್ನಾಂಕಿತಶ್ಯತ್ರೂನ್ ಜೇಷ್ಯತ್ಯೇವ ನ ಸಂಶಯಃ ॥೨೦॥

ಭಸ್ಮರುದ್ರಾಕ್ಷಹೀನಾಂಗಾನ್ ಪರಾನಾಜೌ ಹನಿಷ್ಯತಿ ।
ತದಾ ವಹಾಮಿ ಸ್ಕಂಧೇನ ನಾನ್ಯಥಾ ಮಮ ಭಾಷಿತಂ ॥೨೧॥

---

ವೆನು. ದೇವತೆಗಳಿಗೆ ದುಃಖವನ್ನುಂಟುಮಾಡುವುದು ನನಗೆ ಸಮ್ಮತವಲ್ಲ. ತಾಯಿಯ ದಾಸ್ಯನಿವಾರಣೆಗಾಗಿ ಮಾತ್ರವೇ ಈ ಅಮೃತವನ್ನು ತಂದೆನು. ಆದರೆ ವಿಷ್ಣುವೇ, ದೇವತೆಗಳ ಎದುರಿನಲ್ಲಿ ಒಂದು ಮಾತನ್ನು ಹೇಳುವೆನು. ಗಮನ ದಲ್ಲಿಡು. ॥೧೫-೧೬॥

ಪತಗೇಶ್ವರನ ಸನ್ನಿಧಿಯಲ್ಲಿ ನಿಜ ಹೇಳು. ನೀನು ಭಸ್ಮೋದ್ಧೂಳನ ದಿಂದಲೂ, ಭಸ್ಮತ್ರಿಪುಂಡ್ರಧಾರಣೆಯಿಂದಲೂ, ರುದ್ರಾಕ್ಷಮಾಲೆಗಳಿಂದಲೂ ಕೂಡಿದ ವನಾಗಿ ದಳತ್ರಯಗಳಿಂದ ಕೂಡಿದ ಬಿಲ್ವಪತ್ರೆಗಳಿಂದ ಪರಶಿವನನ್ನು ಅರ್ಚಿಸಿ, ಶಿವನೈವೇದ್ಯಪ್ರಸಾದವನ್ನೇ ಭಕ್ಷಿಸುತ್ತಾ, ಸದಾ ಶಿವಾರಾಧನೆಯಲ್ಲಿ ಮನಸ್ಸಿಟ್ಟು, ನಿನ್ನಂತೆಯೇ ಇರುವ ದೇವತೆಗಳಿಂದೊಡಗೂಡಿ, ಕೋಪದಿಂದ ನಿನ್ನ ಶತ್ರುಗಳ ಮೇಲೆ ಯುದ್ಧಕ್ಕೆ ಹೊರಟಿಯಾದರೆ ಶಿವಚಿಹ್ನೆಯನ್ನು ಧರಿಸಿ ಶಿವಭಕ್ತಿಯುತರಾಗಿ ಬರುವ ಶತ್ರುಗಳನ್ನು ಜಯಿಸಬಹುದು. ಇಲ್ಲವಾದರೆ ಈಶ್ವರಭಕ್ತರನ್ನು ಗೆಲ್ಲುವುದು ಬಹಳ ಕಷ್ಟವಾದೀತು. ॥೧೭-೧೮-೧೯-೨೦॥

ಅಲ್ಲದೆ ಭಸ್ಮರುದ್ರಾಕ್ಷಹೀನರಾದ ಶತ್ರುಗಳನ್ನು ನೀನು ನಿರ್ದಾಕ್ಷಿಣ್ಯವಾಗಿ ಕೊಲ್ಲಬೇಕು. ಹಾಗೆ ಮಾಡುವುದಾದರೆ ನಾನು ನಿನಗೆ ವಾಹನವಾಗುವೆನು. ಹಿಂದೆ

ಕಿಂ ಚ ಜಾಲ್ಮೋಽಸಿ ಭಗವಾನ್ ತ್ಯಕ್ತ್ವಭಸ್ಮಾಕ್ಷಕಃ ಪುರಾ ।
ಸಂಶಿಕ್ಷಿತೋಽಸಿ ತ್ಯಕ್ತೇನ ತೇನ ದೇವ್ಯೈಃ ಪರಾಜಿತಃ ॥೨೨॥

ವೀರಭದ್ರೇಣ ಹಿ ಪುರಾ ತಸ್ಮಾತ್ಸತ್ಯಂ ವದಾಧುನಾ ॥೨೩॥

॥ ಶ್ರೀ ಸ್ಕಂದ ಉವಾಚ ॥

ಇತ್ಯುಕ್ತೋಽ ಗರುಡೇನ ಶಂಕರಪದಧ್ಯಾನಾನುರಕ್ತೇಣ ಹಿ
ವಿಷ್ಣುರ್ವಾಕ್ಯಮಿದಂ ಜಗಾದ ರಭಸಾಹರ್ಷಾಶ್ರುಧಾರಾವೃತಃ ।
ದೇವಾನಾಮುಪಶೃಣ್ವತಾಂ ಶಿವಪುರೋ ದೃಷ್ಟ್ವಾಂಡಜೇಶಂ ತದಾ
ಪ್ರಾಪ್ಯಾತ್ರಾಮೃತಮುತ್ತಮಂ ಸುರಕರೇ ದತ್ವಾತಿಸಂತೋಷತಃ ॥೨೪॥

॥ ಶ್ರೀ ವಿಷ್ಣುರುವಾಚ ॥

ಯಶ್ಶಾಂಭವೇನ ಭವತಾಜಿಷು ಸರ್ವದಾಪಿ
ಸಾಹಾಯ್ಯಭೂತಬಲಿನಾ ವಿಜಯೋ ಹಿ ಮೇದ್ಯ ।
ಕಾಂಕ್ಷೇಕ್ಷತಾಢ್ಯ ಹೃದಯೇ ಖಲು ಸತ್ಯಮಿಷ್ಟ
ಮೇತತ್ತ್ವಯೋಕ್ತಮಧುನಾ ಪ್ರಕರೋಮಿ ಪಕ್ಷಿನ್ ॥೨೫॥

---

ನೀನು ಈ ಶೈವಚಿಹ್ನೆಗಳನ್ನು ದೂರಮಾಡಿ ನಡೆದಿದ್ದೆ. ಆದರ ಫಲವಾಗಿಯೇ ವೀರಭದ್ರನಿಂದ ನೀನು ಹಿಂದೆ ಶಿಕ್ಷಿಸಲ್ಪಟ್ಟಿದ್ದೀಯೆ. ಆದೆಲ್ಲವನ್ನೂ ಜ್ಞಾಪಿಸಿಕೊಂಡು ಈಗ ನಾನು ಹೇಳಿದಂತೆ ನಡೆಯುತ್ತೇನೆಂದು ಪ್ರತಿಜ್ಞೆಮಾಡು." ॥೨೧-೨೨-೨೩॥

ಹೀಗೆ ಹೇಳಿದ ಈಶ್ವರನ ಪದಸೇವಕನಾದ ಗರುಡನ ಮಾತನ್ನು ಕೇಳಿ ವಿಷ್ಣುವು ಆನಂದಬಾಷ್ಪಸಹಿತನಾಗಿ, ದೇವತೆಗಳೆದುರಿನಲ್ಲಿಯೂ, ಪತಗೇಶ್ವರಸನ್ನಿಧಿಯಲ್ಲಿಯೂ, ಗರುಡನಿಂದ ಹಿಂದಿರುಗಿ ಕೊಡಲ್ಪಟ್ಟ ಅಮೃತಕಲಶವನ್ನು ದೇವತೆಗಳ ಕೈಯಲ್ಲಿಟ್ಟು ಸಂತೋಷದಿಂದ ಈರೀತಿ ಹೇಳಿದನು. ॥೨೪॥

ಪರಮಶಾಂಭವನೂ, ಮಹಾಬಲಿಷ್ಠನೂ ಆದ ನಿನ್ನ ಸಹಾಯವೊಂದು ನನಗೆ ಯುದ್ಧದಲ್ಲಿ ಒದಗಿದರೆ ನನಗೆ ವಿಜಯವು ದೊರೆತಂತೆಯೇ ಸರಿ. ಎಲೈ ಪಕ್ಷಿವರ್ಯನೇ, ಇಲ್ಲಿನವರೆಗೂ ನೀನು ಹೇಳಿದುದನ್ನು ಸದಾ ಮನಸ್ಸಿನಲ್ಲಿಯೇ ಧಾರಣಮಾಡುತ್ತಾ, ನಿನ್ನ ಇಷ್ಟದಂತೆಯೇ ನಾನು ನಡೆಯುಲು ಪ್ರಯತ್ನಿಸುವೆನು. ॥೨೫॥

ಇತ್ಯುಕ್ತ್ವಾ ಸ ಜಗಾಮ ದೇವಸಹಿತೋ ಭಕ್ತಿಂ ಚ ವೀಕ್ಷ್ಯಾಂಡಜೇ
ಸಂತುಷ್ಟೋಽಪಿ ಖಗೋಽಪಿ ವಿಷ್ಣುಮವಹದ್ದೈತ್ಯಾಜಿಮಧ್ಯೇ ಸ್ವಯಂ ।
ರುದ್ರಾಕ್ಷಾಮಲಭಸ್ಮಸಂಗತಮುಮಾಕಾಂತಾರ್ಚಕಂ ತಂ ಹರಿಂ
ಪದ್ಮಾಕ್ಷ್ಯಾಮಲ ಪೂಜಿತೋತ್ತಮಹರೇ ನಿಷ್ಠಾವತಾ ಚೇತಸಾ ॥೨೬॥

ಇತಿ ಶ್ರೀಶಿವರಹಸ್ಯೇ ಅಷ್ಟಮಾಂಶೇ ತ್ರಯೋವಿಂಶೋಽಧ್ಯಾಯಃ

---

ಎಂದು ಹೇಳಿ ವಿಷ್ಣುವು ದೇವತೆಗಳೊಡನೆ ತನ್ನ ನಿವಾಸಕ್ಕೆ ಹಿಂದಿರುಗುತ್ತಾ ಪಕ್ಷಿರಾಜನಾದ ಗರುಡನು ಪರಶಿವನಲ್ಲಿಟ್ಟಿದ್ದ ಭಕ್ತಿಭಾವವನ್ನು ಮನದಲ್ಲಿಯೇ ನೆನೆಸಿಕೊಂಡು ಸಂತೋಷಪಡುತ್ತಾ ಹೊರಟುಹೋದನು. ಇತ್ತ ಗರುಡನಾದರೋ ರುದ್ರಾಕ್ಷಿ, ಭಸ್ಮ ಇವುಗಳಿಂದ ಅಲಂಕೃತನಾಗಿ ಸದಾ ಶಿವಾರಾಧನೆಯಲ್ಲಿಯೇ ನೆಟ್ಟ ಮನಸ್ಸುಳ್ಳ ಮಹಾವಿಷ್ಣುವಿಗೆ ವಾಹನವಾಗಿ ನಿಂತು, ಅನೇಕ ದೈತ್ಯರನ್ನೆಲ್ಲಾ ಯುದ್ಧದಲ್ಲಿ ಧ್ವಂಸಮಾಡಿದನು. ಅಂದಿನಿಂದ ಗರುಡನು ಮಹಾವಿಷ್ಣುವಿಗೆ ಭಕ್ತಿಶೀಲನಾದ ವಾಹನನೆನಿಸಿದನು. ॥೨೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಚತುರ್ವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಗರುಡೋಪದ್ರುತಾಃ ಸರ್ಪಾಃ ಕಾದ್ರವೇಯಾ ಮಹಾಬಲಾಃ ।
ನಖತುಂಡವಿನಿರ್ಭಿನ್ನಾಃ ಗರುಡೇನ ಹೃತೌಜಸಃ ॥೧॥

ಪಕ್ಷವಿಕ್ಷಿಪ್ತಘೂರ್ಣಾಕ್ಷಾಸ್ತೇ ಚಕ್ಷುಃಶ್ರವಸಾಂ ವರಾಃ ।
ಶೇಷೋಽನಂತೋ ವಾಸುಕಿಶ್ಚ ಕಾರ್ಕೋಟಕಧನಂಜಯೌ ॥೨॥

ಗುಲಿಕಃ ಶಂಖಪಾಲಶ್ಚ ಧೃತರಾಷ್ಟ್ರಃ ಪಿಲಿಪ್ಪಿಲಃ ।
ಕಂಬಲಾಶ್ವತರೌ ಬಭ್ರುಸ್ತುಹುಂಡೋ ಬಲವರ್ಧಕಃ ॥೩॥

ಪನಸೋ ವಾರಣೋ ರೈಭ್ಯೋ ತಕ್ಷಕೋ ಭದ್ರಕರ್ಣಕಃ ।
ಪವನಾಶೋಽಣಿ ಮಾಂಡವ್ಯೋ ಗರ್ಗೋಽಥ ವಸುಶೋಣಕಃ ॥೪॥

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ಇತ್ತ ಕದ್ರೂದೇವಿಯ ಪುತ್ರರಾದ ಮಹಾಬಲಿಷ್ಠರಾದ ನಾಗಗಳು ಗರುಡನ ಏಟನ್ನು ತಾಳಲಾರದೆ ಬಳಲಿಹೋದರು. ಗರುಡನು ತನ್ನ ಕೊಕ್ಕಿನಿಂದಲೂ, ಉಗುರುಗಳಿಂದಲೂ, ರೆಕ್ಕೆಗಳಿಂದಲೂ ಆ ನಾಗಗಳನ್ನೆಲ್ಲಾ ಬಡಿದು ಹಾಕುತ್ತಿದ್ದಿತು. ನಾಗಶ್ರೇಷ್ಠಗಳೆನಿಸಿದ, ಶೇಷ, ಅನಂತ, ವಾಸುಕಿ, ಕಾರ್ಕೋಟಕ, ಧನಂಜಯ, ಗುಲಿಕ, ಶಂಖಪಾಲ, ಧೃತರಾಷ್ಟ್ರ, ಪಿಲಿಪ್ಪಲ, ಕಂಬಲ, ಅಶ್ವತರ, ಬಭ್ರು, ತುಹುಂಡ, ಬಲವರ್ಧಕ, ಪನಸ, ವಾರಣ, ರೈಭ್ಯ, ತಕ್ಷಕ, ಭದ್ರಕರ್ಣಕ, ಪವನಾಶ,

ಉದಾವಸುರ್ಗೃಧ್ರಹನುರ್ಜಾತುಕರ್ಣೋಽಯಶ್ಶಿರಾಃ ।
ಕಪೋತರೋಮಾಸ್ತಬ್ಧಾಕ್ಷಶ್ಚಿತ್ರಘಂಟೋ ವಿದಾರುಣಃ ॥೫॥

ಇತ್ಯೇತೇ ನಾಗರಾಜಾನಃ (?) ಕದ್ರೂತನು ಸಮುದ್ಭವಾಃ ।
ಮಾತ್ರಾ ಸಹೈವ ತೇ ಸರ್ವೇ ದುಃಖಿತಾ ಗರುಡಾರ್ದಿತಾಃ ॥೬॥

ಕಾಶ್ಯಪಂ ಪ್ರಣಿಪತ್ಯೋಚುಃ ಸರ್ಪಾದರ್ಪವಿವರ್ಜಿತಾಃ ।
ಉಚ್ಛ್ವಸಂತಃ ಶ್ವಾಸಭಾರೈರ್ದುಃಖಶೋಕಾಕುಲಾಂತರಾಃ ॥೭॥

॥ ನಾಗಾ ಊಚುಃ ॥

ಪ್ರಣತಾಃ ಸ್ಮ ಮುನಿಶ್ರೇಷ್ಠ ಭಾರ್ಯಾಂ ಪಶ್ಯ ಕನೀಯಸೀಂ ।
ಆಯಸೀ ಪ್ರತಿಮೇವಾಸೀದ್ದುಃಖಶೋಕಜರಾತುರಾ ॥೮॥

ಗರುಡೇನ ಹತಾನ್ ಪುತ್ರಾನ್ ಶೋಷಂತೀಂ ತ್ವಾಂ ಸಮಾಗತಾ ।
ತಸ್ಮಾತ್ಕ್ಷಮಾಪರಾಧಂ ನಃ ಪುತ್ರವಾತ್ಸಲ್ಯತೋ ಮುನೇ ॥೯॥

ಯತ್ಕೌಟಿಲ್ಯಂ ಪುರಾ ಮಾತ್ರಾ ಯದಸ್ಮಾಭಿಃ ಕೃತಂ ತದಾ ।
ತತ್ಪಾಪಫಲಭೋಕ್ತಾರಸ್ತ್ವತ್ಸಕಾಶಮಿಹಾಗತಾಃ ॥೧೦॥

---

ಅಣಿಮಾಂಡವ್ಯ, ಗರ್ಗ, ವಸುಶೋಣ, ಉದಾವಸು, ಗೃಧ್ರಹನು, ಜಾತುಕರ್ಣ, ಅಯಶ್ಶಿರ, ಕಪೋತರೋಮ, ಸ್ತಬ್ಧಾಕ್ಷ, ಚಿತ್ರಘಂಟ, ವಿದಾರುಣ ಮೊದಲಾದವರು ತಾಯಿಯಾದ ಕದ್ರೂದೇವಿಯೊಡನೆ ಗರುಡನಿಂದ ಆಹತರಾಗಿ ನಿಟ್ಟುಸಿರು ಬಿಡುತ್ತಾ, ನೋವಿನಿಂದ ನರಳುತ್ತಾ, ತಂದೆಯಾದ ಕಶ್ಯಪಮಹರ್ಷಿಯ ಬಳಿಗೆ ಹೋಗಿ ತಂದೆಗೆ ವಂದಿಸಿ ಈರೀತಿ ಹೇಳಿಕೊಂಡರು. ॥೧-೨-೩-೪-೫-೬-೭॥

ಮುನಿಶ್ರೇಷ್ಠನೇ, ನಿನ್ನ ಕಿರಿಯ ಹೆಂಡತಿಯಾದ ಕದ್ರೂದೇವಿಯು ಶೋಕ, ದುಃಖ, ಮುಪ್ಪುಗಳಿಂದ ಕಂದಿ ಕಬ್ಬಿಣದ ಬೊಂಬೆಯಂತಿದ್ದಾಳೆ. ಗರುಡನಿಂದ ಏಟುತಿಂದ ಮಕ್ಕಳನ್ನು ನೋಡಿ ಕರಗುತ್ತಾ ನಮ್ಮ ತಾಯಿಯು ನಿನ್ನಲ್ಲಿಗೆ ಬಂದಿರುವಳು. ಪುತ್ರವಾತ್ಸಲ್ಯದಿಂದ ಬಂದಿರುವ ನಮ್ಮ ತಾಯಿಯು, ಅರಿಯದೆ ಮಾಡಿದ ಸ್ವಲ್ಪದೋಷಕ್ಕೆ ಕುಪಿತನಾದ ಗರುಡನು ನಮ್ಮೆಲ್ಲರಿಗೂ ಈರೀತಿ ಹಿಂಸೆಕೊಟ್ಟಿರುವನು. ಅದನ್ನು ತಾಳಲಾರದೆ ನಿನ್ನ ಸಮೀಪಕ್ಕೆ ಬಂದಿರುವೆವು. ॥೮-೯-೧೦॥

ಸಾಥ ಕದ್ರೂರ್ಮುನೇಃ ಪಾದೌ ನತ್ವಾಥ ವ್ರೀಡಿತಾ ತದಾ ।
ಪ್ರಾಹ ಭರ್ತಾರಮೀಕ್ಷಂತೀ ನಿಃಶ್ವಸಂತೀ ಚ ಪನ್ನಗೀ ॥೧೧॥

ಪನ್ನಗೀರತಿದೃಪ್ತಾಪಿ ದೃಪ್ತಾ ಕೌಟಿಲ್ಯವರ್ಜಿತಾ ॥೧೨॥

ಸಾಪತ್ನ್ಯಾಃಕ್ರೋಧತೋ ಭರ್ತಃ ಪುತ್ರವಾತ್ಸಲ್ಯಮೋಹಿತಾ ।
ಗರುಡೇನ ಹತಾಸ್ಸರ್ಪಾಃ ಮತ್ಕೌಟಿಲ್ಯಾಗ್ನಿಧರ್ಷಿತಾಃ ॥೧೩॥

ಹತಶಿಷ್ಟಾನ್ ಗೂಢಪಾದಾನ್ ಗರುದ್ರಕ್ಷಮೇ ಸುತಾನ್ ।
ದೃಢಂ ಮೃಡಪದಧ್ಯಾನಾತ್ತ್ವಂ ಚ ಗೂಢ ತಪೋಧಿಕಃ ॥೧೪॥

ಮೂಢಾಂ ಗೂಢಪದಾಂ ವಿಪ್ರ ಮಾತರಂ ಪ್ರೌಢವರ್ಜಿತಾಂ ॥೧೫॥

॥ ಸೂತ ಉವಾಚ ॥

ಇತಿ ತಸ್ಯಾ ವಚಶ್ಶ್ರುತ್ವಾ ಕಶ್ಯಪಃ ಪ್ರಾಹ ತಾಂ ತದಾ ।
ಸಾಂತ್ವಯನ್ ಸ ಮುನಿಶ್ರೇಷ್ಠಸ್ತದಾ ತಾಂ ಸರ್ಪಮಾತರಂ ॥೧೬॥

॥ ಕಾಶ್ಯಪ ಉವಾಚ ॥

ಮೈವಂ ವದ ವಿಶಾಲಾಕ್ಷಿ ಕಾ ಚಿಂತಾ ಮಯಿ ಸಂಸ್ಥಿತೇ ।
ಜೀವಯಿಷ್ಯೇ ಸುತಾಂಸ್ತೇದ್ಯ ಗರುಡೇನ ಹತಾನ್ ಪುನಃ ॥೧೭॥

---

ಹೀಗೆ ಹೇಳಿದೊಡನೆಯೇ, ತಾಯಿಯಾದ ಕದ್ರೂದೇವಿಯು ನಾಚಿಕೆಯಿಂದ ಕೂಡಿದವಳಾಗಿ, ಪತಿಯನ್ನು ನೋಡುತ್ತಾ, ಹಿಂದೆ ಅತಿಗರ್ವಿಷ್ಠಳಾಗಿದ್ದಾಗ್ಯೂ ಆಗ ಯಾವ ವಿಧವಾದ ಮೋಸವನ್ನೂ ಮನದಲ್ಲಿ ತಾಳದೆ ಈರೀತಿ ಹೇಳಿದಳು. "ಪತಿದೇವನೇ, ಸವತಿಯಮೇಲಿನ ಕೋಪದಿಂದಲೂ, ಮಕ್ಕಳ ಮೇಲಿನ ಮೋಹದಿಂದಲೂ ನಾನು ಮಾಡಿದ ಒಂದು ಅಚಾತುರ್ಯಕ್ಕೆ ಗರುಡನು ಕೋಪಿಸಿಕೊಂಡು ನನ್ನ ಮಕ್ಕಳನ್ನೆಲ್ಲಾ ಕೊಂದಿರುವನು. ॥೧೧-೧೨-೧೩॥

ಇನ್ನು ಉಳಿದಿರುವ ಈ ನನ್ನ ಪುತ್ರರನ್ನಾದರೂ ಕಾಪಾಡು. ನೀನಾದರೋ ಸದಾ ಶಿವಪಾದಾಸಕ್ತನಾಗಿ ಮಹಾತಪಸ್ವಿಯಾಗಿರುವೆ. ನಾನು ಕೇವಲ ಮೂಢಳು. ಔದ್ಧತ್ಯವಿಲ್ಲದವಳು. ಅಂತಹ ನನ್ನನ್ನು ಈಗ ರಕ್ಷಿಸು. ॥೧೪-೧೫॥

ಎಂದು ಕದ್ರೂದೇವಿಯು ಪತಿಯಲ್ಲಿ ಪ್ರಾರ್ಥಿಸಲು ಆಗ ಕಶ್ಯಪಮಹರ್ಷಿಯು ಸರ್ಪಮಾತೆಯನ್ನು ಸಮಾಧಾನಪಡಿಸುತ್ತಾ ಹೀಗೆಂದನು. "ವಿಶಾಲಾಕ್ಷಿಯೇ,

ಮಾ ಕೌಟಿಲ್ಯಂ ಕುರುಷ್ವಾದ್ಯ ಸಪತ್ನೀಂ ಪ್ರತಿ ಈದೃಶಂ ।
ಯೇ ಛದ್ಮ ಕುರ್ವತೇ ಮೂಢಾಸ್ತ್ರೈಃ ಪಶ್ಚಾತ್ತಪ್ಯತೇ ಭೃಶಂ ॥೧೮॥

ತತ್ಪಾಪಫಲತಸ್ತೇದ್ಯ ಪುತ್ರಾ ನಷ್ಟಾ ಹೃತೌಜಸಃ ।
ಇತಿ ತಾಂ ಸಾಂತ್ವಯನ್ ವಾಕ್ಯೈರ್ಮೃತಾನುಜ್ಜೀವಯನ್ಮುನಿಃ ॥೧೯॥

ಶಿವಾರ್ಚನಪ್ರಭಾವೇನ ಪದ್ಮಜಾತಸುತೋತ್ತಮಃ ।
ತಾನಾಹೂಯ ಸುತಾನ್ ಕದ್ರೋಃ ಪ್ರಾಹಾರ್ಥವದಿದಂ ವಚಃ ॥೨೦॥

॥ ಕಶ್ಯಪ ಉವಾಚ ॥

ಈಶಮಾರಾಧ್ಯ ಕೇದಾರೇ ಸ್ವಸುತೈಸ್ಸಹ ಸುವ್ರತೇ ।
ಈಶ್ವರಸ್ಯ ಪ್ರಸಾದೇನ ಕೇದಾರಸ್ಯಾರ್ಚನೇನ ಚ ॥೨೧॥

ಮಹೇಶಾಜ್ಞಾವಶಾತ್ಕದ್ರು ಸ್ವಸುತೈಸ್ಸಹ ಸಂವಸ ।
ಪಾತಾಳೇ ಹಾಟಕೇಶಾಖ್ಯಂ ಲಿಂಗಂ ಸಂಪೂಜಯಾಶು ಚ ॥೨೨॥

---

ಭಯಪಡಬೇಡ. ನಾನಿರುವಾಗ ನಿನಗೇಕೆ ಚಿಂತೆ? ಸತ್ತಿರುವ ನಿನ್ನ ಪುತ್ರರನ್ನೆಲ್ಲಾ ಈಗಲೇ ಬದುಕಿಸುವೆನು. ॥೧೬-೧೭॥

ಆದರೆ ಇನ್ನುಮೇಲೆ ಸವತಿಮಾತ್ಸರ್ಯವನ್ನು ಬಿಡು. ಅಂತಹ ಮೋಸ ಕೃತ್ಯವನ್ನು ಎಂದಿಗೂ ಎಸಗಬೇಡ. ಮೋಸಮಾಡುವವರು ಬಹು ದುಃಖಕ್ಕೆ ಗುರಿಯಾಗುವರು. ಆ ಮೋಸದ ಫಲವಾಗಿಯೇ ಈ ನಿನ್ನ ಮಕ್ಕಳು ದುರ್ಬಲರಾಗಿ ಹತರಾದರು ಎಂದು ಕದ್ರೂದೇವಿಗೆ ಬುದ್ಧಿ ಹೇಳಿ, ಬ್ರಹ್ಮಮಾನಸಪುತ್ರನಾದ ಕಶ್ಯಪನು ತನ್ನ ಶಿವಾರ್ಚನೆಯ ಮಹಿಮೆಯಿಂದ ಸತ್ತ ಹಾವುಗಳನ್ನೆಲ್ಲಾ ಬದುಕಿಸಿದನು. ಅನಂತರ ಕದ್ರೂದೇವಿಗೂ ಆ ನಾಗಗಳಿಗೂ ಈರೀತಿ ಉಪದೇಶಮಾಡಿದನು. ॥೧೮-೧೯-೨೦॥

ದೇವಿಯೇ, ಈಗಲೇ ನೀನು ಮಕ್ಕಳೊಡಗೂಡಿ ಕೇದಾರಕ್ಷೇತ್ರಕ್ಕೆ ಹೋಗಿ ಅಲ್ಲಿ ಕೇದಾರೇಶ್ವರನನ್ನು ಪೂಜಿಸು. ಅದರ ಬಲದಿಂದ ಶಿವಾನುಗ್ರಹವನ್ನು ಪಡೆದು, ಪಾತಾಳಲೋಕಕ್ಕೆ ಹೋಗಿ, ಹಾಟಕೇಶ್ವರನೆಂಬ ಹೆಸರಿನಿಂದ ಶಿವಲಿಂಗವೊಂದನ್ನು ಪ್ರತಿಷ್ಠೆಮಾಡಿ ನಿತ್ಯವೂ ಅದನ್ನು ಪೂಜಿಸುತ್ತಿರು. ॥೨೧-೨೨॥

ಪುತ್ರೈರಾರಾಧಯೇಶಾನಂ ತೇನ ತ್ವಂ ಸೌಖ್ಯಭಾಗಿನೀ ।
ಭೋಗಿಭಿರ್ಭೋಗನಿಲಯಂ ಪಾತಾಳಂ ಸರ್ವಸೌಖ್ಯದಂ ॥೨೩॥

ತ್ರಿವಿಷ್ಟಪಾದಪಿ ಸದಾ ಶಿಪಿವಿಷ್ಟಾಶ್ರಯಾತ್ಸದಾ ।
ತಲ್ಲಿಂಗಮಹಿಮಾನಂ ತೇ ಸಮಾಸಾತ್ಪ್ರಬ್ರವೀಮ್ಯಹಂ ॥೨೪॥

ಗಂಗಾಜಟಾಜೂಟಮೌಲೇರಿಂದುಶೂಲಭೃತೋದ್ಯ ಮೇ ।
ಹಾಟಕೇಶಾಖ್ಯಲಿಂಗಸ್ಯ ಮಹಿಮಾಂ ಮೇ ಶೃಣು ಧ್ರುವಂ ॥೨೫॥

॥ ಕಶ್ಯಪ ಉವಾಚ ॥

ತಲ್ಲಿಂಗಪ್ರಭಯಾ ಸುದೀಪಿತಮಹತ್ಪಾತಾಲಲೋಕಂ ಸದಾ
ನಾಗಾನಾಂ ವಿಲಸತ್ಫಣಾಮಣಿಗಣಜ್ಯೋತಿರ್ಜ್ಯೋತಿರುಧಾರಾ ತತಾಃ ।
ನೋ ಚಂದ್ರಾರ್ಕಸುವಿದ್ಯುದುಜ್ಜ್ವಲ ಮಹಾವಹ್ನಿಪ್ರಭಾಭಾಧಿಕಾಃ
ನೋಷಾ ನೋ ಭಗಣಾ ಸದೈವ ನ ದಿವಾ ರಾತ್ರಂ ಮಹೇಶಾಶ್ರಯಾತ್॥೨೬॥

---

ಆದರಿಂದ ನೀನು ಸೌಖ್ಯವಂತಳಾಗುವೆ. ಅಲ್ಲದೆ ಪಾತಾಳಲೋಕವೇ ಸರ್ಪಗಳಿಗೆ ಭೋಗನಿಲಯವಾಗುವುದು. ಶಂಕರನಿಗೆ ಆಶ್ರಯವಿತ್ತ ಸ್ಥಳದಲ್ಲಿ ಸ್ವರ್ಗಕ್ಕಿಂತ ಹೆಚ್ಚಿನ ಸೌಖ್ಯವು ದೊರೆಯುವುದು. ಶಿವಲಿಂಗದ ಮಹಿಮೆಯನ್ನು ನಿನಗೆ ಸಂಕ್ಷೇಪವಾಗಿ ಈಗ ತಿಳಿಸುವೆನು. ಗಂಗಾನದಿ, ಚಂದ್ರಕಲೆ, ಜಟಾಕಲಾಪ, ತ್ರಿಶೂಲ ಇವುಗಳಿಂದ ಅಲಂಕೃತನಾದ ಹಾಟಕೇಶ್ವರಲಿಂಗಸ್ವರೂಪಿಯಾದ ಪರಶಿವನ ಮಹಿಮೆಯನ್ನು ಈಗ ಹೇಳುವೆನು ಕೇಳು. ॥೨೩-೨೪-೨೫॥

ಆ ಹಾಟಕೇಶಲಿಂಗದ ಪ್ರಭೆಯಿಂದ ಪಾತಾಳಲೋಕವೇ ಪ್ರಕಾಶಿತವಾಗುವುದು. ಅದರ ಜೊತೆಗೆ ನಿನ್ನ ಪುತ್ರರ ಹೆಡೆಯಲ್ಲಿರುವ ರತ್ನಗಳ ಕಾಂತಿಯಿಂದ ಆ ಲೋಕವು ಮತ್ತೂ ತೇಜೋಮಯವಾಗುವುದು. ಆ ಪ್ರಕಾಶದ ಮುಂದೆ ಚಂದ್ರ, ಸೂರ್ಯ, ಮಿಂಚು, ಬೆಂಕಿ, ಶುಕ್ರನಕ್ಷತ್ರಗಳು ಇವು ಯಾವುವೂ ಶೋಭಿಸಲಾರವು. ಪರಶಿವನ ಸಾನ್ನಿಧ್ಯದಿಂದ ಆ ಲೋಕದಲ್ಲಿ ಹಗಲು ರಾತ್ರಿಗಳ ವ್ಯತ್ಯಾಸವೇ ಕಂಡುಬರಲಾರದು. ॥೨೬॥

ವಂದಾರುವೃಂದ ಗಣಸಾ ಅಪಿ ಚಂದ್ರಮೌಳಿ
ಪಾದಾರವಿಂದಭಜನಾಯ ಮುದಾ ಪ್ರಯಾಂತಿ ।
ನಾಗೈರ್ನಗೋಪಮ ಮಹೋರುಶರೀರಶೀರ್ಷೈ
ರ್ನಾಗಾರಿವಾಹಸಹಿತಾಃ ಪರಿಪೂಜಯಂತಿ ॥೨೭॥

ತತ್ಪಾತಾಲತಲೇಪಿ ಹಾಟಕಮಹಾಲಿಂಗಂ ಸದೈವಾರ್ಚಯ
ನ್ನಾಗೈರ್ನಾಗವರಾಃ ಸ್ವಕೀಯ ಸುಮಹಾಶುಂಡೋರುಕಾಂಡೋತ್ಥಿತೈಃ ।
ಧಾರಾಸಾರಸುಪುಷ್ಕರೋದ್ಧೃತಲಸದ್ಬಿಲ್ವೀದಲೈಃ ಕೋಮಲೈ
ಸ್ತೇಜಾಪ್ತ್ಯಾ ನಿವಸಂತಿ ಭೂಧರವರಾಃ ಕೈಲಾಸಸಾನುಪ್ರಭಾಃ ॥೨೮॥

ಪಾತಾಲೇ ತಾಲಕೇತು ಪ್ರಭೃತಿ ಬಲಿವರಾಃ ಶಕ್ರವಿತ್ರಾಸಸಾ ಯೇ
ದೇವಾ ಅಪ್ಯಮರಾಪತೀಂ ಪರಿವಿಹಾಯಾತ್ರೈವ ಸಂಮೋಹಿತಾಃ ।
ವಿಪ್ರೇಂದ್ರಾಃ ಸುರಸಿದ್ಧದೈತ್ಯನಿಕರಾ ಯೂಯಂ ಚ ನಾಗೋತ್ತಮಾಃ
ಶಾಂಗಂ ಲಿಂಗಮುಮಾಪತೇಃ ಪ್ರಿಯತಮಂ ಶ್ರೀ ಹಾಟಕೇಶಾಭಿಧಂ ॥೨೯॥

---

ಈ ಹಾಟಕೇಶ್ವರಲಿಂಗವನ್ನು ದೇವತೆಗಳ ಗುಂಪುಗಳೂ, ಬೆಟ್ಟದಂತಹ ದೇಹ ಮತ್ತು ಶಿರಸ್ಸುಗಳಿಂದ ಹೊಳೆಯುವ ನಾಗಗಳೂ, ಗರುಡವಾಹನನಾದ ಮಹಾವಿಷ್ಣುವೂ ಸಹ ಭಕ್ತಿಯಿಂದ ಪೂಜಿಸಿ, ಪರಶಿವನ ಪಾದಾರವಿಂದಗಳನ್ನು ಸದಾ ಭಜಿಸಲು ಇಲ್ಲಿಗೆ ಬರುವರು. ॥೨೭॥

ಪಾತಾಳಲೋಕದ ಸುತ್ತಲೂ ಇರುವ ಅಷ್ಟದಿಗ್ಗಜಗಳೂ ತಮ್ಮ ನೀಳವಾದ ಸೊಂಡಿಲುಗಳನ್ನು ಬೀಸುತ್ತಾ, ಕೋಮಲವಾದ ಬಿಲ್ವದಳಗಳನ್ನೂ, ಪವಿತ್ರವಾದ ಶುದ್ಧೋದಕವನ್ನೂ ಶ್ರೀ ಹಾಟಕೇಶ್ವರಲಿಂಗಕ್ಕೆ ಅರ್ಪಿಸುತ್ತಾ ಅದರ ತೇಜಃಪ್ರಸರದಿಂದ ಅವು ಕೈಲಾಸಾಚಲಕ್ಕೆ ಸಮನಾಗಿ ಹೊಳೆಯುತ್ತಿರುವುವು. ॥೨೮॥

ಪಾತಾಳಲೋಕದಲ್ಲಿ ತಾಳವೃಕ್ಷಾಕಾರವೇ ಧ್ವಜವಾಗಿಯುಳ್ಳ ಆದಿಶೇಷನೂ, ಬಲಿಚಕ್ರವರ್ತಿಯೂ ಸಹ ಇಂದ್ರನನ್ನು ಹೆದರಿಸುವಷ್ಟು ಶಕ್ತಿಯುಳ್ಳವರಾಗಿದ್ದರೂ, ಹಾಟಕೇಶ್ವರಸಾನ್ನಿಧ್ಯಕ್ಕೆ ಮೋಹಿತರಾಗಿ, ಅಮರಾವತಿಯನ್ನು ಸಹ ಬಿಟ್ಟು ಈ ಪಾತಾಳಲೋಕದಲ್ಲಿ ನೆಲಸುವರು. ಅದೂ ಅಲ್ಲದೆ ದೇವತೆಗಳೂ, ದೈತ್ಯರೂ, ನಾಗಶ್ರೇಷ್ಠರಾದ ನೀವೂ ಪರಮಪ್ರಿಯನೆನಿಸಿದ ಹಾಟಕೇಶ್ವರಲಿಂಗಾಂತರ್ಗತನಾದ ಪರಶಿವನನ್ನು ಸದಾ ಪೂಜಿಸುತ್ತಿರುವಿರಿ. ॥೨೯॥

ಕಷ್ಟಂ ವೀಕ್ಷ್ಯ ತ್ರಿವಿಷ್ಟಪಂ ಶ್ರುತಿಶಿರೋನಿಷ್ಠಾಂ ಹಿ ಸಂಪ್ರಾಪ್ಯತೇ
ಧನ್ಯಾಸ್ತೇ ಶಿಪಿವಿಷ್ಟ ಹೃಷ್ಟಮನಸಾ ಸಂಪೂಜಯಂತ್ಯಾದರಾತ್ ।
ಜೂಟಾಹಿದ್ಯುತಿಕೋಟಿಕೂಟಘಟನೋತ್ತುಂಗೋತ್ತಮಾಂಗೋಲ್ಲಸ
ಚ್ಚಂದ್ರಾಂಶುಸ್ಫುರದುತ್ಪಲಾರುಣರಜಃ ಸ್ವಃಸಿಂಧುಮೌಳಿಂ ಹರಂ ॥೩೦॥

ಲೀಲಾಪಾಂಗಸ್ಫುಲಿಂಗಸಂಗತಮಹಾನಂಗಾಂಗಮಾತಂಗಹೃತ್
ತಲ್ಲಿಂಗೋತ್ತಮಮಧ್ಯಸಂಗತಮುಮಾದೇಹಾರ್ಧಲಿಂಗಂ ಹರಂ ।
ಬಾಲೇಂದುದ್ಯುತಿಜೂಟಿತಾಖಿಲ ಜಟಾಕೋಟೀರಪಾಟೀರಕಂ
ಘೋಟೀವೇದವಧೂಟಿತಾರ್ಧನಿಲಸದ್ಗಾತ್ರಂ ನಿಟಾಲೇಕ್ಷಣಂ ॥೩೧॥

ಪಾಟೀರಾಗರುಚಂದ್ರಚಂದನವರೈರಾಲಿಪ್ಯ ಕಾಕೋದರಾಃ
ಸ್ವೈರ್ದಾರೈರತಿಸುಂದರೈಸ್ಸುಮನಸಾಂ ಭಾರೈಶ್ಚ ತದ್ಘಾಟಕಂ ।

---

ದೇವತೆಗಳು ತಮ್ಮ ಲೋಕದಲ್ಲಿ ಆಗಾಗ ಒದಗುವ ಕಷ್ಟನಷ್ಟಗಳನ್ನು ನೋಡಿ, ಯಾವ ತೊಂದರೆಯೂ ಇಲ್ಲದೆ ಹಾಟಕೇಶ್ವರಲಿಂಗವನ್ನು ಅರ್ಚಿಸುವ ಸಲುವಾಗಿ ಪಾತಾಳಲೋಕವನ್ನು ಬಂದು ಸೇರುವರು. ಹಾಗೆ ಬಂದವರೇ ಧನ್ಯರು. ಏಕೆಂದರೆ ಅವರು ಪಾತಾಳದಲ್ಲಿ ಜಟಾಜೂಟದಿಂದಲೂ, ಫಣಾಮಣಿಗಳಿಂದಲೂ ಪ್ರಕಾಶಿಸುವ ಪರಶಿವನ ಶಿರೋಭಾಗವನ್ನೂ, ಚಂದ್ರಸೂರ್ಯರ ಕಾಂತಿಯನ್ನು ಮೀರಿ ಶೋಭಿಸುವ ಪರಮೇಶ್ವರನ ಶಿವಲಿಂಗವನ್ನೂ ನೋಡಿ ಆನಂದಪಡುವರು. ॥೩೦॥

ಮಹೇಶ್ವರನು ತನ್ನ ಲೀಲಾಮಯವಾದ ಕಟಾಕ್ಷದಿಂದಲೇ ಮದಿಸಿದ ಮನ್ಮಥನೆಂಬ ಮದ್ದಾನೆಯನ್ನು ಧ್ವಂಸಮಾಡಿರುವನು. ಮತ್ತು ಹಾಟಕೇಶ್ವರಲಿಂಗದ ಮಧ್ಯಭಾಗದಲ್ಲಿ ಸುಂದರವಾದ ದೇಹದಿಂದ ಪ್ರಕಾಶಿಸುತ್ತಿರುವನು. ಅಲ್ಲದೆ ತನ್ನ ಶಿರೋಭಾಗದಲ್ಲಿ ಬಾಲಚಂದ್ರನನ್ನೂ, ಪ್ರಕಾಶಮಾನವಾದ ಜಟಾಜೂಟವನ್ನೂ, ತೇಜೋಮಯವಾದ ಕಿರೀಟವನ್ನೂ ಧರಿಸಿಕೊಂಡಿರುವನು. ಎಡಭಾಗದಲ್ಲಿ ಉಪನಿಷತ್ಪ್ರತಿಪಾದ್ಯಮಾನಳಾದ ದೇವಿಯನ್ನು ಹೊಂದಿರುವನು. ಇಂತಹ ದಿವ್ಯವಿಗ್ರಹಧಾರಿಯೂ, ಅಗ್ನಿನೇತ್ರನೂ ಆಗಿರುವ ಮಹಾದೇವನನ್ನು ನೀವು ಸದಾ ತಪ್ಪದೆ ಪೂಜಿಸಿರಿ. ॥೩೧॥

ಶ್ರೀಗಂಧದ ಮತ್ತು ಅಗುರುವಿನ ಗಂಧದಿಂದ ತಮ್ಮ ದೇಹವನ್ನು ಲೇಪಿಸಿಕೊಂಡು, ತಮ್ಮ ಪತ್ನಿಯರೊಡನೆಯೂ, ಪುತ್ರಪೌತ್ರರೊಡನೆಯೂ ನಾನಾವಿಧವಾದ

ಲಿಂಗಂ ತತ್ಪರಿಪೂಜಯಂತು ನಿಯತಾಃ ವೀರ್ಯೈಃ ಕುಮಾರ್ಯೈರ್ಯುತಾಃ॥೩೨॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಕಶ್ಯಪಕದ್ರೂಸ್ಸಂವಾದೇ
ನಾಗಾನಾಂ ಶಿವಪೂಜಾ ಉಪದೇಶವರ್ಣನಂ ನಾಮ
ಚತುರ್ವಿಂಶೋಽಧ್ಯಾಯಃ

---

ಪುಷ್ಪರಾಶಿಗಳಿಂದ ಹಾಟಕೇಶ್ವರಲಿಂಗವನ್ನು ಸದಾ ಪೂಜಿಸುತ್ತಿರಲಿ. ಅದರಿಂದ ನಿಮ್ಮ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ಇದರಲ್ಲಿ ಅನುಮಾನವಿಲ್ಲ ಎಂದು ಕಾಶ್ಯಪಮಹರ್ಷಿಯು ಕದ್ರೂದೇವಿಗೂ ಅವಳ ಮಕ್ಕಳಿಗೂ ಶಿವಪೂಜಾಮಹಿಮೆಯನ್ನು ವಿಸ್ತಾರವಾಗಿ ಉಪದೇಶಮಾಡಿದನು. ॥೩೨॥

ಇಲ್ಲಿಗೆ ಕಶ್ಯಪಕದ್ರೂದೇವಿಯರ ಸಂಭಾಷಣೆಯಲ್ಲಿ ನಾಗಗಳಿಗೆ ಶಿವಪೂಜಾ
ಮಹಿಮೆಯು ಉಪದೇಶವಾದ ಇಪ್ಪತ್ತುನಾಲ್ಕನೆಯ ಅಧ್ಯಾಯವು
ಸಮಾಪ್ತವಾದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಪಂಚವಿಂಶೋಽಧ್ಯಾಯಃ

॥ ಕಶ್ಯಪ ಉವಾಚ ॥

ಉಪಾಯಮೇಕಂ ವಕ್ಷ್ಯಾಮಿ ಪುತ್ರ್ಯೈಸ್ಸಾಕಂ ಶೃಣುಷ್ವ ಮೇ ।
ಯಸ್ಯಾರಾಧನಮಾತ್ರೇಣ ಸರ್ಪಾಸ್ತೇ ಸುಖಿನಃ ಸುತಾಃ ॥೧॥

ಜರಾಮರಣ ನಿರ್ಮುಕ್ತಾ ಗರುಡೋದ್ಭವಭೀತಿತಃ ।
ಮುಕ್ತಾಸ್ತೇ ಪನ್ನಗಶ್ರೇಷ್ಠೇ ಪನ್ನಗಾ ನಿವಸಂತು ತೇ ॥೨॥

ಮೌಲೌ ಹಿಮವತಸ್ಸುಭ್ರು ನಾನಾಮುನಿವೃತಸ್ಯ ವೈ ।
ನಿವಸಂತು ಸದಾ ಹೃಷ್ಟಾಃ ಶಿವವಿಷ್ಣ್ವರ್ಚನೇ ರತಾಃ ॥೩॥

---

## ಇಪ್ಪತ್ತೈದನೆಯ ಅಧ್ಯಾಯ

ಕಶ್ಯಪಮಹರ್ಷಿಯು ಮತ್ತೆ ಕದ್ರೂದೇವಿಗೂ ಆಕೆಯ ಪುತ್ರರಾದ ನಾಗಗಳಿಗೂ ಈರೀತಿ ಉಪದೇಶಮಾಡತೊಡಗಿದನು:— ಎಲೌ ನಾಗಮಾತೆಯೇ, ಮತ್ತು ಸರ್ಪಶ್ರೇಷ್ಠರೇ, ನೀವು ಪರಶಿವನನ್ನು ಆರಾಧಿಸುವುದರಿಂದ ಹೆಚ್ಚು ಸುಖಿಗಳಾಗುವಿರಿ. ಗರುಡನಿಂದ ಒದಗುವ ಭೀತಿಯನ್ನು ಕಳೆದುಕೊಳ್ಳುವಿರಿ. ಮತ್ತು ಆ ಲೋಕದಲ್ಲಿ ನೀವು ಸುಖದಿಂದ ಜೀವಿಸುವಿರಿ. ॥೧-೨॥

ಅಲ್ಲದೆ ಹಿಮಾಲಯದ ಶಿಖರಭಾಗದಲ್ಲಿ ಕೇದಾರೇಶದೇವಾಲಯವಿರುವುದು. ಅಲ್ಲಿ ಅನೇಕ ಮುನಿಗಳು ಪತ್ನೀಪುತ್ರರೊಡಗೂಡಿ ಸದಾ ಶಿವಾರ್ಚನೆಯಲ್ಲಿಯೇ

ವರಕಾಕೋದರಾಃ ಸರ್ವೇ ಕೇದಾರೇಶಸಮರ್ಚಕಾಃ ।
ಕುಮಾರದಾರಸಹಿತಾ ಮಾರಮಾರಾರ್ಚನೇ ರತಾಃ ॥೪॥

ಅಸಾರಸಂಸಾರಮಿದಂ ತರಂತು ಚ ಸುನಿರ್ಭಯಾಃ ।
ಸಾಪತ್ನ್ಯದುಃಖಸಂತಪ್ತೋ ಗರುಡೋ ಬಲವತ್ತರಃ ॥೫॥

ವೃಥಂ ಮೃಡಾರ್ಚನರತೋ ಸ್ವಮೌಢ್ಯಪರಿವರ್ಜಿತಃ ।
ಅಮೃತಂ ಯೋಽಹರತ್ಪೂರ್ವಂ ಸುರಾನ್ ವಿದ್ರಾವ್ಯ ನಿರ್ಭಯಃ ॥೬॥

ಹರಿಣಾ ಪ್ರಾರ್ಥಿತೋ ದೇವೈರ್ವಾಹನತ್ವೇಂಡಜೇಶ್ವರಃ ।
ಪ್ರಾದಾದ್ವರಂ ಸ ಹರಯೇ ವಹಾಮೀತಿ ಸುತೋ ಮಮ ॥೭॥

ಅಶಾಂಕರಂ ಹರಿಂ ದೃಷ್ಟ್ವಾ ಪಾತಯತ್ಯಂಬುಧೌ ಹರಿಂ ।
ಸ್ವಸ್ಕಂಧತೋಽದ್ಯ ಗರುಡೋ ಮೃಡಪಾದಾರ್ಚನೇ ರತಃ ॥೮॥

ಹನಿಷ್ಯತ್ಯೇವ ತೇ ಪುತ್ರಾನ್ಸೋಽಪಿ ಪುತ್ರೋ ಮಮಾಧುನಾ ।
ಪತತ್ರಿನಾಥೋ ಬಲವಾಂಸ್ತ್ರಿನೇತ್ರಪದಪೂಜಯಾ ॥೯॥

---

ಮಗ್ನರಾಗಿರುವರು. ಅಲ್ಲಿ ಶ್ರೇಷ್ಠನಾದ ಕಾಕೋದರನೇ ಮೊದಲಾದವರಿಂದ ಕೂಡಿ ಸುಖವಾಗಿ ಶಿವಾರಾಧನೆಮಾಡುತ್ತಿರುವರು. ॥೩-೪॥

ಎಲೌ ಕದ್ರುವೇ, ನಿನ್ನ ಮಕ್ಕಳು ಹೀಗೆ ಸರ್ವದಾ ಶಿವಾರಾಧನೆಮಾಡುತ್ತಾ ಈ ಅಸಾರಸಂಸಾರವನ್ನು ದಾಟಲಿ. ಗರುಡನಾದರೋ, ಸವತಿಮಾತ್ಸರ್ಯದಿಂದ ದುಃಖಪಟ್ಟ ತಾಯಿಯನ್ನು ನೋಡಿ ನಿಮ್ಮ ಮೇಲೆ ಬಹಳ ಕೋಪಗೊಂಡಿರುವನು. ಅದೂ ಅಲ್ಲದೆ ಪರಶಿವನನ್ನು ಬಹಳವಾಗಿ ಪೂಜಿಸಿ, ವಿವೇಕಿಯಾಗಿ ಬಹಳವಾದ ತೇಜಸ್ಸನ್ನು ಹೊಂದಿರುವನು. ಪರಾಕ್ರಮದಿಂದ ದೇವತೆಗಳನ್ನು ಸೋಲಿಸಿ, ಅಮೃತವನ್ನು ತಂದು ಕೊನೆಗೆ ವಿಷ್ಣುವಿನಿಂದ ಪ್ರಾರ್ಥಿತನಾಗಿ ಮತ್ತೆ ಅವನಿಗೆ ಅಮೃತವನ್ನಿತ್ತು ವಿಷ್ಣುವಿನ ಪ್ರಾರ್ಥನೆಯಂತೆ ತಾನು ಅವನಿಗೆ ವಾಹನವಾಗಿರಲು ಒಪ್ಪಿಕೊಂಡನು. ॥೫-೬-೭॥

ಒಂದುವೇಳೆ ವಿಷ್ಣುವು ಈಶ್ವರಭಕ್ತನಾಗದಿದ್ದರೆ ಆಗ ಗರುಡನು ಅವನನ್ನು ಸಮುದ್ರಕ್ಕೆ ಹಾಕಿಬಿಡುವನು. ಹೆಗಲಿನಮೇಲೆ ಕೂರಿಸಿಕೊಂಡಿದ್ದಂತೆಯೇ ಗರುಡನು ವಿಷ್ಣುವನ್ನು ಕೆಳಕ್ಕೆ ಬೀಳಿಸಿಬಿಡಬಲ್ಲನು. ಶಿವಾರ್ಚನೆಯಿಂದ ಅಷ್ಟು ಬಲಿಷ್ಠ

ಉಭಯೋಸ್ಸಂಧಿಕರಣಂ ಜಾತಿವೈರಾನ್ನ ವೈ ಭವೇತ್ ।
ತಸ್ಮಾತ್ಸರ್ಪಾ ಮಹಾದೇವಂ ಕಂದರ್ಪೋದ್ದರ್ಪಗರ್ವಹಂ ॥೧೦॥

ವ್ರಜಂತು ಶರಣಂ ಸಾಂಬಂ ಶರಣ್ಯಮಭಯಪ್ರದಂ ।
ಆರಾಧ್ಯ ದೇವದೇವೇಶಂ ಕೇದಾರೇ ಸಂವಸಾಧುನಾ ॥೧೧॥

ಶಿವಚಿಹ್ನಾಂಕಿತಾ ತ್ವಂ ಚ ಭವ ಸುಭ್ರು ಸುತೈಸ್ಸಹ ।
ಭಸ್ಮರುದ್ರಾಕ್ಷಸಂಪನ್ನಾ ಶಿವಲಿಂಗಾರ್ಚನೇ ರತಾ ॥೧೨॥

ತ್ರಿಪುಂಡ್ರಧಾರಿಣಸ್ಸರ್ವೇ ಸರ್ಪಾಃ ಪಂಚಾಕ್ಷರಾದರಾಃ ।
ರುದ್ರಾಧ್ಯಾಯಾನುವೃತ್ತ್ಯೈವ ಕಾದ್ರವೇಯಾ ವಸಂತ್ವಪಿ ॥೧೩॥

ಕೇದಾರೇಶಾರ್ಚನೇ ನೈವ ಸಿಧ್ಯಂತ್ಯೇವ ಮನೋರಥಾಃ ।
ಸುರಾಸುರಾಶ್ಚ ಮುನಯಃ ಪೂರ್ವಂ ಕೇದಾರ ಪೂಜಯಾ ॥೧೪॥

---

ನಾಗಿರುವ ಗರುಡನು ನಿನ್ನ ಮಕ್ಕಳನ್ನು ನಾಶಗೊಳಿಸಲು ಹಿಂದೆಗೆಯಲಾರನು. ನಾನು ಈ ನನ್ನ ಪುತ್ರರಿಬ್ಬರಿಗೂ ಜಾತಿಕೃತವಾದ ವೈರವಿರುವುದರಿಂದ ಅವರಿಗೆ ಸ್ನೇಹಮಾಡಿಸಲು ಸಮರ್ಥನಾಗಲಾರೆ. ॥೮-೯-೧೦॥

ಆದ್ದರಿಂದ ನಿನ್ನ ಪುತ್ರರೆಲ್ಲರೂ ಸರ್ವದಾ ಭಕ್ತರಿಗೆ ಅಭಯಪ್ರದನಾಗಿರುವ ಪಾರ್ವತೀಪತಿಯನ್ನು ಈಗಲೇ ಮೊರೆಹೊಂದಲಿ. ಕೇದಾರೇಶ್ವರಸ್ವಾಮಿಯನ್ನು ಸರ್ವದಾ ಆರಾಧಿಸುತ್ತಾ ನೀನು ಹಿಮಾಲಯ ಶಿಖರದಲ್ಲಿಯೇ ನೆಲಸು. ನೀನು ಸದಾ ಭಸ್ಮರುದ್ರಾಕ್ಷಿಗಳೆಂಬ ಶಿವಚಿಹ್ನೆಗಳನ್ನು ಧರಿಸಿ ಶಿವಲಿಂಗವನ್ನು ಆರಾಧಿಸುತ್ತ ಕಾಲಕಳೆ. ॥೧೧-೧೨॥

ನಿನ್ನ ಮಕ್ಕಳೂ ಸಹ ಸರ್ವದಾ ಭಸ್ಮತ್ರಿಪುಂಡ್ರವನ್ನು ಧರಿಸಿ, ಶಿವಪಂಚಾಕ್ಷರೀ ಮಂತ್ರವನ್ನೇ ಪಠಿಸುತ್ತಾ, ರುದ್ರಾಧ್ಯಾಯವನ್ನು ಪಾರಾಯಣಮಾಡುತ್ತಾ ಜೀವಿಸಲಿ. ಕೇದಾರೇಶ್ವರ ಪೂಜೆಯಿಂದ ಭಕ್ತರ ಸಕಲ ಇಷ್ಟಾರ್ಥಗಳೂ ನೆರವೇರುವುವು. ಹಿಂದೆ ಅನೇಕ ದೇವರಾಕ್ಷಸರೂ ಮುನಿಗಣಗಳೂ ಕೇದಾರೇಶ್ವರಾರ್ಚನೆಯಿಂದ ತಮ್ಮ ಇಷ್ಟಾರ್ಥಗಳನ್ನು ಪಡೆದಿರುವರು; ॥೧೩-೧೪॥

ಮತ್ತು ಬಲಿಷ್ಠರೂ ಆಗಿರುವರು. ಆದ್ದರಿಂದ ನೀನೂ ನಿನ್ನ ಮಕ್ಕಳೊಡನೆ ಕೇದಾರೇಶನನ್ನು ಅರ್ಚಿಸು. ಶೈವಚಿಹ್ನೆಗಳಿಂದ ಕೂಡಿದ ನಿಮ್ಮನ್ನು ಗರುಡನು

ಬಭೂವುರ್ಬಲಿನಃ ಸರ್ವೇ ತಸ್ಮಾತ್ತ್ವಂ ಶರಣಂ ವ್ರಜ ।
ಪುತ್ರೈಸ್ಸಾಕಂ ವ್ರಜ ಸುಖಂ ಶಿವಾರ್ಚನರತಾ ಭವ ॥೧೫॥

ಶಾಂಭವಂ ಲಾಂಛನಂ ದೃಷ್ಟ್ವಾ ಗರುಡೋ ನ ಹನಿಷ್ಯತಿ ।
ಯೇ ಶಾಂಭವದ್ರೋಹಕೃತಸ್ತೇ ವೈ ನಿರಯಗಾಮಿನಃ ॥೧೬॥

ತಸ್ಮಾತ್ಪತಗರಾಟ್ ಸರ್ಪಾನ್ ನ ವೈ ಹಿಂಸಾತ್ಸುಖಂ ವ್ರಜ ।
ಶಿವೋಽಪಿ ತೇ ಪ್ರಸನ್ನಸ್ಸ್ಯಾತ್ಕೇದಾರೇಶಸ್ಯ ಪೂಜಯಾ ॥೧೭॥

ಪುತ್ರಾಣಾಂ ತವ ದೇವೋಽಪಿ ತ್ರಾಣಂ ಭಕ್ತ್ಯಾ ಕರಿಷ್ಯತಿ ।
ತ್ರಿಪುಂಡ್ರಮೌಲಯಸ್ಸರ್ವೇ ಕುಂಡಲೀಶಾ ಭವಂತ್ವಪಿ ॥೧೮॥

ರುದ್ರಾಕ್ಷಭೂಷಣಾಸ್ಸರ್ವೇ ತೇ ಚಕ್ಷುಶ್ಶ್ರವಸಾಂ ವರಾಃ ।
ಭವಂತು ಭವಪಾದಾರ್ಚಾಂ ಭಾವೈಃ ಕುರ್ವಂತು ನಾನ್ಯಥಾ ॥೧೯॥

ಪಾಪಕಂಚುಕನಿರ್ಮುಕ್ತಾಃ ತ್ಯಕ್ತಾಃ ಸ್ವೈಃ ಕಂಚುಕೈಃ ಸಹ ।
ಕುಲುಂಚಪತಿಪೂಜಾತೋ ವಂಚನಾವರ್ಜಿತಾಸ್ಸದಾ ॥೨೦॥

---

ಎಂದೂ ಕೊಲ್ಲಲಾರನು. ಏಕೆಂದರೆ ಶಿವನನ್ನೇ ನಂಬಿರುವ ಶಾಂಭವರಿಗೆ ಯಾರು ದ್ರೋಹವೆಸಗುವರೋ ಅವರು ನರಕವನ್ನು ಹೊಂದುವರು. ॥೧೫-೧೬॥

ಅದರಿಂದ ಗರುಡನು ಎಂದೂ ನಿನ್ನ ಪುತ್ರರನ್ನು ಹಿಂಸಿಸಲಾರನು. ಕೇದಾರೇಶ್ವರ ಲಿಂಗವನ್ನು ನೀವು ಭಕ್ತಿಯಿಂದ ಪೂಜಿಸಿದರೆ, ಅದರಿಂದ ಶಿವನು ಪ್ರಸನ್ನನಾಗಿ ನಿನ್ನ ಪುತ್ರರನ್ನು ಕಾಪಾಡುವನು. ಆದ್ದರಿಂದ ಈಗಲೇ ನಿನ್ನ ಪುತ್ರರೆಲ್ಲಾ ತ್ರಿಪುಂಡ್ರಧಾರಿಗಳಾಗಿ ಶಿವಾರ್ಚಕರಾಗಲಿ. ॥೧೭-೧೮॥

ರುದ್ರಾಕ್ಷಿಗಳಿಂದಲಂಕೃತರಾಗಿ ನಿನ್ನ ಪುತ್ರರು ಈಗಲೇ ಶಿವಪಾದಾರ್ಚನೆಯಲ್ಲಿ ತೊಡಗಲಿ. ಭಕ್ತಿಭಾವದಿಂದ ಪರಶಿವನನ್ನು ತೃಪ್ತಿಪಡಿಸಲಿ. ಆಗ ಅವರು ಪಾಪದ ಆವರಣದಿಂದ ಬಿಡಲ್ಪಟ್ಟು ಸ್ವಕೀಯವಾದ ಒಂದು ಆವರಣದಿಂದ ಕೂಡಿ ಬಲಿಷ್ಠರಾಗುವರು. ಗೃಹಕ್ಷೇತ್ರಾದಿಗಳನ್ನು ಅಪಹರಿಸುವಂತಹವರನ್ನು ಸಹ ರಕ್ಷಿಸುವ ಪರಶಿವನನ್ನು ಪೂಜಿಸಿರುವುದರಿಂದಲೂ, ವಂಚನಾಮಾರ್ಗವನ್ನು ಬಿಡುವುದರಿಂದಲೂ ನಿನ್ನ ಮಕ್ಕಳು ಬಲಿಷ್ಠರಾಗುವರು. ॥೧೯-೨೦॥

ರುದ್ರಾಕ್ಷಧಾರಣಾಚ್ಚಾಪಿ ತಥಾ ಪಂಚಾಕ್ಷರೀಜಪಾತ್ ।
ಭಸ್ಮತ್ರಿಪುಂಡ್ರಕರಣಾದ್ಧ್ರುವಃ ಪ್ರೀತೋ ಭವಿಷ್ಯತಿ ॥೨೧॥

ರುದ್ರಾಧ್ಯಾಯಜಪೇನೇಶಸ್ತಥಾ ಬಿಲ್ವಾರ್ಚನೇನ ಚ ।
ಕೇದಾರವಾಸಾಚ್ಚ ಸದಾ ಕಾಕೋದರಸುಖಪ್ರದಃ ॥೨೨॥

ಪ್ರದಿಶತ್ಯೇವ ದೇವೇಶಃ ಸರ್ಪಾಣಾಂ ಸ್ಥಾನಮುತ್ತಮಂ ।
ಸರ್ಪಾಣಾಂ ಪ್ರೀತಿತಶ್ಶಂಭುಃ ಸ್ವಾಂಗಭೂಷಾಂ ಕರೋತಿ ಚ ॥೨೩॥

ನ ಕೇದಾರಸಮಂ ಲಿಂಗಂ ಭವ್ಯಂ ಹಿ ಜಗತಾಂ ತ್ರಯೇ ।
ಪ್ರಸಾದಜನಕಂ ಸಾಕ್ಷಾತ್ಪೂಜಿತಂ ಭುಕ್ತಿಮುಕ್ತಿದಂ ॥೨೪॥

ಮಯಾ ಪದ್ಮಾಸನಾಜ್ಜ್ಞಾತ್ವಾ ಪೂಜಿತಂ ಸರ್ವಕಾಮದಂ ।
ತತ್ಪೂಜಿತಾ ಸೃಷ್ಟಿರೇಷಾ ಮತ್ತೋ ಜಾತಾ ಸುರಾಸುರೈಃ ॥೨೫॥

ತಸ್ಮಾತ್ಪೂಜಯ ಯತ್ನೇನ ಕದ್ರು ತ್ವಂ ಸ್ವಸುತೈಸ್ಸಹ ॥೨೬॥

---

ರುದ್ರಾಕ್ಷಿಧಾರಣೆ, ಪಂಚಾಕ್ಷರೀಜಪ, ಭಸ್ಮತ್ರಿಪುಂಡ್ರಧಾರಣೆ ಇವುಗಳಿಂದ ಪರಶಿವನು ತೃಪ್ತನಾಗುವನು. ರುದ್ರಾಧ್ಯಾಯಜಪ, ಬಿಲ್ವಾರ್ಚನೆ, ಕೇದಾರಕ್ಷೇತ್ರದ ವಾಸ ಇವುಗಳಿಂದ ಕಾಕೋದರರೆನಿಸಿದ ನಿನ್ನ ಮಕ್ಕಳಿಗೆ ಸೌಖ್ಯವು ಲಭಿಸುವುದು. ॥೨೧-೨೨॥

ದೇವದೇವನಾದ ಪರಶಿವನು ಸರ್ಪಗಳಿಗೆ ದಿವ್ಯಸ್ಥಾನವನ್ನು ಅನುಗ್ರಹಿಸುವನು. ಅಲ್ಲದೆ ಈ ಸರ್ಪಗಳಿಂದಲೇ ತನ್ನ ಅಂಗವನ್ನು ಅಲಂಕರಿಸಿಕೊಳ್ಳುವನು. ಪ್ರಸಾದವನ್ನು ಅನುಗ್ರಹಿಸುವುದರಲ್ಲಿ, ಮುಕ್ತಿಯನ್ನು ಕರುಣಿಸುವುದರಲ್ಲಿ ಕೇದಾರೇಶ್ವರಲಿಂಗಕ್ಕೆ ಸರಿಸಮವಾದ ಶಿವಲಿಂಗವು ಲೋಕತ್ರಯದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ॥೨೩-೨೪॥

ಈ ವಿಷಯವನ್ನು ನಾನು ಬ್ರಹ್ಮನಿಂದ ತಿಳಿದುಕೊಂಡು ಪರಶಿವನನ್ನು ಆರಾಧಿಸಿ, ಸರ್ವಕಾಮಪ್ರದವಾದ ಆ ಆರಾಧನೆಯ ಬಲದಿಂದಲೇ ಈ ದೇವರಾಕ್ಷಸರ ಸೃಷ್ಟಿಕ್ರಮವನ್ನು ಸಹ ತಿಳಿದೆನು. ಕದ್ರೂದೇವಿಯೇ, ಆದರಿಂದ ನೀನೂ ಸಹ ನಿನ್ನ ಮಕ್ಕಳೊಡನೆ ಜಾಗ್ರತೆ ಪರಶಿವನನ್ನು ಪೂಜಿಸು. ॥೨೫-೨೬॥

॥ ಕಶ್ಯಪ ಉವಾಚ ॥

ಅಂಭೋಜಸಂಭವಭವಾ ಮನವಃ ಸುರಾಶ್ಚ
ಕುಂಭೋದ್ಭವಾದಿಮುನಯೋ ದಿತಿನಂದನಾ ಯೇ ।
ಅಂಭೋಧಿತಲ್ಪಕಗತೋ ಹರಿರೇತದೇವ
ಲಿಂಗಂ ಸದಂಬುಜವರೈಃ ಪರಿಪೂಜ್ಯ ಬಿಲ್ವೈಃ ॥೨೭॥

ತುಷ್ಟೋಽಪ್ಯಶೇಷಸುವಿಶೇಷಮಹಾಹಿಶೇಷ
ಭೂಷಾವಿಶೇಷ ಭಸಿತೋತ್ತಮ ಪೂಷಕೋಟಿ
ಸಂಕಾಶಲಿಂಗಮಧುನಾ ಪರಿಪೂಜಯಸ್ವ ॥೨೮॥

॥ ಸೂತ ಉವಾಚ ॥

ಇತ್ಯುಕ್ತಂ ಮುನಿವಚನಂ ನಿಶಮ್ಯ ಕದ್ರೂಃ
ಕದ್ರುದ್ರಾರ್ಚನಸಾಧನಾಯ ಪುತ್ರಯುಕ್ತಾ ।
ಕೇದಾರಂ ಮುದಿತಮನಾ ಯಯೌ ತದಾನೀಂ
ನತ್ವಾ ತಂ ಮುನಿವರಮೀಶಪಾದಭಕ್ತಂ ॥೨೯॥

---

ಬ್ರಹ್ಮಮಾನಸಪುತ್ರರೂ, ಚತುರ್ದಶಮನುಗಳೂ, ದೇವತೆಗಳೂ, ಅಗಸ್ತ್ಯರೇ ಮೊದಲಾದ ಮಹರ್ಷಿಗಳೂ, ಅದಿತಿಪುತ್ರರಾದ ಸುರರೂ, ಕ್ಷೀರಸಮುದ್ರ ಮಧ್ಯಶಾಯಿಯಾಗಿರುವ ವಿಷ್ಣುವೂ ಸಹ ಕಮಲಬಿಲ್ವಾದಿಗಳಿಂದ ಈ ಲಿಂಗವನ್ನು ಪೂಜಿಸಿರುವರು. ॥೨೭॥

ಮಹಾದೇವನು ಸದಾ ತೃಪ್ತನು. ಸಮಸ್ತ ಆಭರಣಗಳಿಂದಲೂ, ಆದಿಶೇಷನ ಫಣಾಮಣಿಜಾಲದಿಂದಲೂ, ಉತ್ತಮ ಭಸ್ಮದಿಂದಲೂ ಕೂಡಿ ಕೋಟಿಸೂರ್ಯರಂತೆ ಪ್ರಜ್ವಲಿಸುವ ಈ ಮಹಾಲಿಂಗವನ್ನು ಮನಃಪೂರ್ವಕವಾಗಿ ಪೂಜಿಸು. ॥೨೮॥

ಹೀಗೆ ಹೇಳಿದ ಕಶ್ಯಪರ ಮಾತನ್ನು ಕೇಳಿ ಕದ್ರೂದೇವಿಯು, ಪರಶಿವನ ಅರ್ಚನೆಗಾಗಿ ಪುತ್ರರೊಡಗೂಡಿ ಮೊದಲು ಪರಶಿವಭಕ್ತಶ್ರೇಷ್ಠನಾದ ಕಶ್ಯಪ ಮಹರ್ಷಿಗೆ ವಂದಿಸಿ, ಅನಂತರ ಕೇದಾರಕ್ಷೇತ್ರವನ್ನು ಕುರಿತು ಪ್ರಯಾಣ ಬೆಳೆಸಿದಳು. ॥೨೯॥

ಸರ್ಪಾಸ್ತೇ ಪಿತೃತೋ ನಿಶಮ್ಯ ವಾಕ್ಯಂ
ಭಸ್ಮಾಕ್ಷಾದಿವಿಭೂಷಿತಾಃ ಸಹೈವ ಮಾತ್ರಾ।
ನಿರ್ಜಗ್ಮುರ್ಹಿಮಶಿಖರಾಶ್ರಯಂ ತದಾನೀಂ
ಕ್ಷೇತ್ರಂ ತತ್ತ್ರಿದಶಪತೇರ್ಮಹೇಶಿತುಃ ಪ್ರಿಯಂ ವೈ ॥೩೦॥

ಕುಮುದಾಂಬುಜಮಿತ್ರವಹ್ನಿನೇತ್ರ
ಪ್ರಿಯಲಿಂಗಾರ್ಚನತೋರಗಾಃ ಕೃತಾರ್ಥಾಃ।
ಶ್ರುತಿಶೇಷವಿಶೇಷದರ್ಶನೇ ಮತಿಃ
ಪರಮೇಶಾನಪದಾರ್ಚನಾತ್ ಭವೇತ್ ॥೩೧॥

ಉರಗಾ ಅಪ್ಯುರಗಾಯ ಭಕ್ತಿನಿಷ್ಠಾಃ
ತುರಗಾರಾತಿವಹಾಂತಕಾಬ್ಜಪಾದೇ।
ಮುರಮಾರಹರಾಮರೇಂದ್ರವಂದ್ಯೇ
ಕರಿವೀರೇಂದ್ರಕಟಿತ್ವಚೋರುವಾಸೇ ॥೩೨॥

---

ಸರ್ಪಗಳೂ ಸಹ ತಂದೆಯ ಮಾತನ್ನು ಕೇಳಿ ಸಂತೋಷದಿಂದ ಭಸ್ಮ ರುದ್ರಾಕ್ಷಾದಿಗಳನ್ನು ಅಲಂಕರಿಸಿಕೊಂಡವರಾಗಿ, ತಾಯಿಯೊಡನೆ ಪರಶಿವನ ಪ್ರಿಯ ಕ್ಷೇತ್ರವೆನಿಸಿದ ಹಿಮಾಲಯದಲ್ಲಿರುವ ಕೇದಾರಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ॥೩೦॥

ಅಲ್ಲಿ ಆ ಸರ್ಪಗಳು, ಸೂರ್ಯಚಂದ್ರಾಗ್ನಿಗಳನ್ನೇ ನೇತ್ರಗಳನ್ನಾಗಿ ಹೊಂದಿರುವ ಪರಶಿವನನ್ನು ವಿಶೇಷವಾಗಿ ಅರ್ಚಿಸಿ, ಹಾಗೆಯೇ ಶಿವಾರಾಧನೆಯ ಮಹಿಮೆಯನ್ನು ವಿಶೇಷವಾಗಿ ಪ್ರತಿಪಾದಿಸುವ ಶ್ರುತ್ಯರ್ಥವನ್ನು ಆಲಿಸುವುದರಲ್ಲಿ ತೊಡಗಿದವು. ॥೩೧॥

ಮತ್ತು ಆ ನಾಗಗಳು, ಮಹಿಷವಾಹನನಾದ ಯಮನನ್ನು ಮೆಟ್ಟಿದ ಪಾದವುಳ್ಳ, ಮತ್ತು ವಿಷ್ಣು, ದೇವೇಂದ್ರ ಇವರಿಂದ ಪೂಜಿತನಾದ, ಗಜಚರ್ಮಾಂಬರಧಾರಿಯಾದ ಮಹಾದೇವನಲ್ಲಿ ದೃಢಭಕ್ತಿಯನ್ನಿಟ್ಟು ಪೂಜಿಸಲಾರಂಭಿಸಿದುವು. ॥೩೨॥

ಅರುಣಾನುಜಭೀತಿತೋ ವಿಹೀನಾಃ
ವರತಕ್ಷಕವಾಸುಕಿದ್ವಿಜಿಹ್ವಾಃ ।
ಶರಣಾರುಣಪಾದಪದ್ಮಯುಗ್ಮಂ
ಭಜತಾಂ ನಾಸ್ತಿ ಭಯಂ ಕದಾಚಿದೇವ ॥೩೩॥

ವರುಣಾಲಯಪಾರಣಾಜ್ಞಯಾ ಶಂಭುಂ
ಕರುಣಾಸಾಗರಮೀಶ್ವರಾರ್ಚನೇನ ।
ಮರಣಾದಪಹಾಯ ಭೀತಿಜಾತಂ
ಸ್ಮರಣೇನೇಶಿತುರೇವ ಕಾರಣೇನ ಹಾರಾಃ ॥೩೪॥

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ
ಕದ್ರೂಸರ್ಪಕೇದಾರೇಶಸಾನ್ನಿಧ್ಯಗಮನಂನಾಮ ಪಂಚವಿಂಶೋಧ್ಯಾಯಃ

---

ಹೀಗೆ ತಕ್ಷಕ, ವಾಸುಕಿ ಮೊದಲಾದ ನಾಗಶ್ರೇಷ್ಠಗಳೆಲ್ಲಾ ಗರುಡನ ಭಯವನ್ನು ತಪ್ಪಿಸಿಕೊಳ್ಳಲು ಶರಣಾಗತರಕ್ಷಕನಾದ ಪರಶಿವನ ಪಾದಪದ್ಮಗಳನ್ನು ಸೇವಿಸಿದರು. ಅಂತಹ ದಯಾನಿಧಿಯಾದ ಪರಶಿವನ ಪಾದಸ್ಮರಣೆಮಾಡುವವರಿಗೆ ಎಂದಿಗೂ ಯಾವ ಭಯವೂ ಉಂಟಾಗಲಾರದು. ॥೩೩॥

ನಿಜವಾದ ಈಶ್ವರಭಕ್ತರು, ಸಮುದ್ರವನ್ನೇ ಆಪೋಶನವನ್ನಾಗಿ ಮಾಡಿಕೊಂಡ ಅಗಸ್ತ್ಯರೇ ಮೊದಲಾದ ಮಹರ್ಷಿಗಳ ಉಪದೇಶಬಲದಿಂದ ಕರುಣಾಸಾಗರನೂ, ಸುಖಪ್ರದನೂ ಆದ ಮಹೇಶ್ವರನನ್ನು ಅನನ್ಯಪ್ರವಣತೆಯಿಂದ ಭಜಿಸಿ, ಮರಣಭಯವನ್ನೂ ಸಹ ಕಳೆದುಕೊಂಡು, ಪರಶಿವನ ಸ್ಮರಣೆಯಿಂದಲೇ ಸದಾಕಾಲಕಳೆದು ಸುಖದಿಂದಿರುವರು. ಎಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ಹೇಳಿದರೆಂಬಲ್ಲಿಗೆ, ॥೩೪॥

ಇಲ್ಲಿಗೆ ಶ್ರೀಶಿವರಹಸ್ಯದ ಭೀಮನಾಮಕವಾದ ಅಷ್ಟಮಾಂಶದಲ್ಲಿ
ಕಾಶ್ಯಪಮಹರ್ಷಿಗಳು ಕದ್ರೂ ಮತ್ತು ಅವಳ ಮಕ್ಕಳಾದ ನಾಗಗಳಿಗೆ ಶಿವಮಹಿಮೆ
ಯನ್ನುಪದೇಶಿಸಿ ಕೇದಾರೇಶ್ವರಲಿಂಗಾರ್ಚನೆಗೆ ಕಳುಹಿಸಿದ ಕಥೆಯನ್ನು ತಿಳಿಸುವ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಷಡ್ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಕೇದಾರೇಶಂ ಸಮಾರಾಧ್ಯ ಕಾಕೋದರವರಾಸ್ತದಾ ।
ಭಸ್ಮರುದ್ರಾಕ್ಷಸಂಪನ್ನಾಃ ಪಂಚಾಕ್ಷರಪರಾಯಣಾಃ ॥೧॥

ರುದ್ರಾಧ್ಯಾಯೇನಾಭಿಷಿಚ್ಯ ಬಿಲ್ವೈಃ ಸಂಪೂಜ್ಯ ಭಕ್ತಿತಃ ।
ಸ್ವಫಣಾಮಣಿಮಾಣಿಕ್ಯೈಃ ಸಂಪೂಜ್ಯ ಪರಮೇಶ್ವರಂ ॥೨॥

ನೈವೇದ್ಯೈರ್ಧೂಪದೀಪೈಶ್ಚ ತಥಾ ನೀರಾಜನೈರಪಿ ।
ತುಷ್ಟುವುಸ್ತೇಽಪಿ ಭುಜಗಾಃ ಭುಜಂಗಾಭರಣಂ ಶಿವಂ ॥೩॥

ಪಾಹ್ಯಬ್ಜಮಿತ್ರನಯನಾಮಲಭೂತಿಗಾತ್ರ
ರುದ್ರ ತ್ರಿನೇತ್ರ ಗಿರಿರಾಜಸುತಾಕಳತ್ರ ।

---

## ಇಪ್ಪತ್ತಾರನೆಯ ಅಧ್ಯಾಯ

ಕದ್ರೂಪುತ್ರರಾದ ಕಾಕೋದರಾದಿಗಳು, ಭಸ್ಮರುದ್ರಾಕ್ಷಿಗಳಿಂದಲಂಕೃತರಾಗಿ ಪಂಚಾಕ್ಷರೀಮಂತ್ರವನ್ನೇ ಜಪಿಸುತ್ತಾ, ಕೇದಾರೇಶ್ವರಲಿಂಗವನ್ನು ಬಿಲ್ವಾದಿಗಳಿಂದ ಪೂಜಿಸಿ, ತಮ್ಮ ಹೆಡೆಯಲ್ಲಿರುವ ಮಾಣಿಕ್ಯಗಳಿಂದ ಪರಶಿವನನ್ನು ಅಲಂಕರಿಸಿ, ಧೂಪ, ದೀಪ, ನೈವೇದ್ಯ, ನೀರಾಜನ ಮುಂತಾದುವುಗಳಿಂದ ನಾಗಾಭರಣವೆನಿಸಿದ ಪರಶಿವನನ್ನು ತೃಪ್ತಿಗೊಳಿಸಿ, ಈ ರೀತಿ ಸ್ತೋತ್ರಮಾಡಿದರು. ॥೧-೨-೩॥

ಸಾಕ್ಷಾತ್ಸೂರ್ಯನನ್ನೇ ನೇತ್ರವನ್ನಾಗಿ ಮಾಡಿಕೊಂಡು, ವಿಭೂತಿಯಿಂದ

ಪಾತ್ರಂ ವಿಚಿತ್ರತರಮೇತದಹೋ ಪವಿತ್ರಂ
ಸತ್ರಾತಿರಾತ್ರಮುಖತರ್ಪಿತಲೋಕಯಾತ್ರ ॥೪॥

ಶ್ರೀ ವ್ಯೋಮಕೇಶ ಸಕಲೇಶ ಮಹೇಶ ಶಂಭೋ
ಕೋಶಾವಕಾಶ ಶಶಿಶೇಖರ ಶಂಕರೇಶ ।
ದೇವೇಶ ಖಂಡಪರಶೋ ಪಶುಪಾಶನಾಶ
ಪಾಹೀಶ ಮಾಮುಕಧಿಯಾ ತವ ಪಾದಭಕ್ತಾನ್ ॥೫॥

ತ್ವಂ ಭರ್ಗಸರ್ಗ ಕರುಣಾವ್ಯಯ ದೀನವರ್ಗ
ಸಂಶಾರಕಾರ್ಗಲಪದಾತ್ಪರಿಮೋಚಯಾಶು ।
ದೂರ್ವಾದಳಾರ್ಚಿತಪದ ತ್ರಿದಶೋರುಗರ್ವ
ನಿರ್ವಾಪಣಾರ್ಣವ ವಸಾಂಬುಜಮಿತ್ರನೇತ್ರ ॥೬॥

---

ಅಲಂಕೃತನಾದ ಶರೀರವುಳ್ಳವನೇ, ಮೂರು ಕಣ್ಣುಗಳಿಂದಲೂ, ಎಡಭಾಗದಲ್ಲಿ ಪಾರ್ವತಿಯಿಂದಲೂ ವಿರಾಜಿಸುವ ಮಹಾದೇವನೇ, ಅತಿರಾತ್ರವೇ ಮೊದಲಾದ ಅನೇಕ ಯಾಗಗಳಿಂದ ತೃಪ್ತನಾದ ಪರಮೇಶ್ವರನೇ, ರಕ್ಷಣೆಗೆ ಪಾತ್ರನೂ ನಿನ್ನ ಆರಾಧನೆಯಿಂದ ಪವಿತ್ರನೂ ಆದ ನನ್ನನ್ನು ಕಾಪಾಡು. ॥೪॥

ವ್ಯೋಮಕೇಶನೇ, ಸಕಲಜಗತ್ತಿಗೂ ಒಡೆಯನೆನಿಸಿದವನೇ, ಶಂಕರನೇ, ಭಕ್ತರ ಹೃದಯಕೋಶದಲ್ಲಿ ಅಡಗಿರುವವನೇ, ಚಂದ್ರಶೇಖರನೇ, ದೇವದೇವನೇ, ಖಂಡವಾದ ಪರಶುವನ್ನೇ ಆಯುಧವನ್ನಾಗಿಯುಳ್ಳವನೇ, ಪಶುಗಳ ಪಾಶವನ್ನು ನಾಶಗೊಳಿಸಿದವನೇ, ನೀನು ನಿನ್ನ ಪಾದಸೇವಕರಾದ ನಮ್ಮನ್ನು ನಿನ್ನವರೆಂಬ ಭಾವನೆಯಿಂದ ಕಾಪಾಡು. ॥೫॥

ಮಹಾದೇವನೇ, ನೀನು ಸಕಲ ಲೋಕಸೃಷ್ಟಿಕರ್ತನು, ನಾಶರಹಿತನು, ಶರಣಾಗತರನ್ನು ಉದ್ಧರಿಸಿ, ಅವರ ಬಂಧನಗಳನ್ನು ಬಿಡಿಸುವುದರಲ್ಲಿ ಅತ್ಯಂತ ಸಮರ್ಥನು, ಎಳೆಗರಿಕೆಯಿಂದ ಪೂಜಿತವಾದ ಪಾದಪದ್ಮವುಳ್ಳವನೇ, ದೇವತೆಗಳಿಗಿರುವ ಗರ್ವವನ್ನೆಲ್ಲಾ ನಾಶಗೊಳಿಸುವ ಪರಮೇಶ್ವರನೇ, ಸದಾ ನನ್ನ ಹೃದಯದಲ್ಲಿ ನೆಲಸಿ ರಕ್ಷಿಸು. ॥೬॥

ಶ್ರೀಮನ್ಮೇರುಶರಾಸನ ತ್ರಿಭುವನಾಧ್ಯಕ್ಷಾಧ್ವರಾಧ್ಯಕ್ಷಕ
ವೀಕ್ಷತ್ತ್ವತ್ಕರುಣಾಕಟಾಕ್ಷಲಹರೀಸಂಹಾರಿತಾಘೌಘಕಾನ್ ।
ಉಕ್ಷಾಧೀಶ್ವರಕೇತನೇಶ್ವರ ದಯಾಪಾತ್ರಾಂಸ್ತ್ರಿನೇತ್ರಾಧುನಾ
ಕಕ್ಷಾಣಾಂ ಚ ಪತೇ ಸುದಕ್ಷಮಖಹೃತ್ತೂರ್ಣಂ ಪ್ರಸಾದಂ ಕುರು ॥೭॥

ಭೂಭೃದ್ರಾಜಕುಮಾರಿಕಾಕುಚತಟೇ ಪಾಟೀರಪಂಕಾಂಕಿತಂ
ರುದ್ರಾಕ್ಷಪ್ರಿಯಭಸ್ಮ ಪುಂಡ್ರನಿಟಲಜ್ವಾಲೋರುಗಂಗಾಧರಂ ।
ವೈಯ್ಯಾಘ್ರತ್ವಗಲಂಕೃತಾಂಗಮಲಸತ್ಕೃತ್ಪಶ್ಯೇಮಚಿತ್ತೇ ಸದಾ
ವಿತ್ತೇಶಾದಿಪದಪ್ರದಂ ಹರಿಶರಂ ಸಂಭಾವಯಾಮೋ ಹರಂ ॥೮॥

ವಿಶ್ವೇಶಸ್ಯ ಪದಾಂಬುಜಾಶ್ರಯಣತೋ ನಿಶ್ಶ್ರೇಯಸೌಖ್ಯೈಕ ಭಾಕ್
ಭೋಗಾನಪ್ಯಮಿತಾನವಾಪ್ಯ ಭುವನೇ ಕೈಲಾಸಮೌಲೌ ಗಣಃ ।

---

ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡು, ಮೂರು ಲೋಕಕ್ಕೂ ಒಡೆಯನಾದ ಪರಶಿವನೇ, ನಿನ್ನ ಕರುಣಾಕಟಾಕ್ಷಲಹರಿಯಿಂದ ನಮ್ಮ ಪಾಪರಾಶಿಯನ್ನೆಲ್ಲಾ ನಾಶಗೊಳಿಸಿ, ನಮ್ಮನ್ನುದ್ಧರಿಸು. ವೃಷಭವಾಹನನೇ, ವೃಷಭಕೇತನನೇ, ತ್ರಿನಯನನೇ, ಸಮಸ್ತ ಕಕ್ಷೆಗಳಿಗೂ ಒಡೆಯನಾದ ಮಹಾದೇವನೇ, ದಕ್ಷಯಜ್ಞವನ್ನು ಸಂಪೂರ್ಣವಾಗಿ ನಾಶಗೊಳಿಸಿದ ಮಹಾದೇವನೇ, ನಮ್ಮನ್ನು ಅನುಗ್ರಹಿಸು. ॥೭॥

ಪರಶಿವನು ಹಿಮಗಿರಿಯ ಪುತ್ರಿಯಾದ ಪಾರ್ವತಿಯ ಕುಚತಟಗಳಲ್ಲಿರುವ ಶ್ರೀಗಂಧದ ಕೆಸರಿನಿಂದ ಎದೆಯಲ್ಲಿ ಗುರುತುಹೊಂದಿರುವವನು, ರುದ್ರಾಕ್ಷಿ. ಭಸ್ಮ, ಭಸ್ಮತ್ರಿಪುಂಡ್ರ, ಅಗ್ನಿನೇತ್ರ, ದೇವಗಂಗೆ ಮುಂತಾದ ವಸ್ತುಗಳನ್ನು ಧರಿಸಿರುವವನು, ವ್ಯಾಘ್ರಚರ್ಮಾಂಬರಧಾರಿಯು, ತನ್ನ ಭಕ್ತರಿಗೆ ಕುಬೇರನ ಪದವಿಯನ್ನು ಸಹ ಕೊಡುವವನು, ಹರಿಯನ್ನೇ ಬಾಣವನ್ನಾಗಿ ಮಾಡಿಕೊಂಡವನು, ಈ ರೀತಿಯಾಗಿ ಪರಶಿವನ ಸ್ವರೂಪವನ್ನು ಸದಾ ಮನದಲ್ಲಿ ಧ್ಯಾನಿಸಬೇಕು. ॥೮॥

ಪರಶಿವನ ಪಾದಕಮಲಗಳನ್ನು ಆಶ್ರಯಿಸಿದವರಿಗೆ ಮೋಕ್ಷಪದವಿಯು ದೊರೆಯುವುದು ನಿಶ್ಚಯ. ಅಲ್ಲದೆ ಅವರು ಸಕಲ ಸುಖಗಳನ್ನೂ ಅನುಭವಿಸಿ,

ಭೂಯಾದಬ್ಜ ಜಕಲ್ಪಕೋಟಿಷು ಚಿರಂ ಭೋಗಿಪ್ರಿಯಾ ಭೋಗಧೃಕ್
ಚಂದ್ರೋತ್ತಂಸಕಿರೀಟಕೋಟಿವಿಲಸತ್ಕಂದರ್ಪದರ್ಪಾಪಹಃ ॥೯॥

ನಾಗಾನಾಂ ಚ ಸ್ತವಂ ಶ್ರುತ್ವಾ ಕೇದಾರೇಶೋ ಮಹೇಶ್ವರಃ ।
ತಲ್ಲಿಂಗಮಧ್ಯಾಚ್ಚ ತದಾ ಆವಿರಾಸೀತ್ಸ್ವಯಂ ಹರಃ ॥೧೦॥

ನಾಗಾಜಿನೋತ್ತರಾಸಂಗೋ ಶಶಾಂಕಕೃತಶೇಖರಃ ।
ಉಮಯಾ ಸಹಿತೋ ದೇವೋ ನೀಲಕಂಠಸ್ತ್ರಿಲೋಚನಃ ॥೧೧॥

ಗಂಗಾಧರಃ ಕಪಾಲಾಂಕಃ ಶೂಲಜ್ವಲನಸತ್ಕರಃ ।
ತಂ ದೃಷ್ಟ್ವಾ ದೇವದೇವೇಶಂ ಸರ್ಪಾಃ ಕದ್ರುಸಮನ್ವಿತಾಃ ॥೧೨॥

ಪ್ರಣಮ್ಯ ಚ ಮಹಾದೇವಂ ಸಂಸ್ತುವನ್ನೀಲಲೋಹಿತಂ ॥೧೩॥

॥ ನಾಗಾ ಊಚುಃ ॥

ವೇದಾರ್ಚ್ಯ ಶರ್ವ ಯಮಗರ್ವಹರಾದ್ಯಸರ್ವ
ಕಂದರ್ಪದರ್ಪಹರಸರ್ವಮಹೋರುಹಾರ ।

---

ಕೈಲಾಸಾಚಲದಲ್ಲಿ ಗಾಣಾಪತ್ಯಪದವಿಯನ್ನು ಹೊಂದುವನು. ಅದೂ ಅಲ್ಲದೆ, ಚಂದ್ರಕಲೆಯೇ ಮುಂತಾದ ಶೈವಚಿಹ್ನೆಗಳನ್ನು ಪಡೆದು ಮನ್ಮಥನ ದರ್ಪವನ್ನು ಹೋಗಲಾಡಿಸುತ್ತಾ ಕೋಟಿಬ್ರಹ್ಮಕಲ್ಪಪರ್ಯಂತವಾಗಿ ಅಪ್ಸರಸ್ತ್ರೀಯರಿಂದ ನಾನಾವಿಧವಾದ ಭೋಗಗಳನ್ನು ಪಡೆದು ಶಿವಸಾಯುಜ್ಯವನ್ನು ಸೇರುವನು. ॥೯॥

ನಾಗಗಳು ಭಯಭಕ್ತಿಯಿಂದ ಕೇದಾರೇಶನನ್ನು ಆರಾಧಿಸಿ, ಸ್ತುತಿಸಿದೊಡನೆಯೇ, ಪರಶಿವನು ಅವರಿಗೆ ಪ್ರಸನ್ನನಾಗಿ, ಕೇದಾರೇಶಲಿಂಗದಿಂದ ಪ್ರತ್ಯಕ್ಷನಾದನು. ಆಗ ಶಂಕರನು ಗಜಚರ್ಮವನ್ನುಟ್ಟು, ಚಂದ್ರಕಲೆಯನ್ನು ಶಿರದಲ್ಲಿ ಧರಿಸಿ, ಪಾರ್ವತಿಯೊಡನೆ ಪ್ರಕಾಶಿಸುತ್ತಿದ್ದನು. ಪರಶಿವನ ಕಂಠವು ವಿಷದಿಂದ ಕಪ್ಪಾಗಿದ್ದಿತು. ಕೈಯ್ಯು ತ್ರಿಶೂಲದಿಂದಲೂ, ಅಗ್ನಿಜ್ವಾಲೆಯಿಂದಲೂ, ಮುಖವು ನೇತ್ರತ್ರಯಗಳಿಂದಲೂ ಪ್ರಕಾಶಿಸುತ್ತಿದ್ದಿತು. ಗಂಗೆಯನ್ನು ಶಿರದಲ್ಲಿ ಧರಿಸಿದ್ದನು. ಇಂತಹ ಶಿವಸ್ವರೂಪವನ್ನು ನೋಡಿ ಸರ್ಪಗಳು ನೀಲಲೋಹಿತನೆನಿಸಿದ ಮಹಾದೇವನನ್ನು ಈ ರೀತಿ ಸ್ತೋತ್ರಮಾಡಿದರು. ॥೧೦-೧೧-೧೨-೧೩॥

ವೇದಪ್ರತಿಪಾದ್ಯನೇ, ಸುಖಪ್ರದನೇ, ಯಮನಗರ್ವವನ್ನು ಅಪಹರಿಸಿದವನೇ

ಆಗ್ರ್ಯೋಗ್ರ ಭೀಮಭವಭರ್ಗಸುಸರ್ಗವರ್ಗ
ಸ್ವರ್ಗಾಪವರ್ಗದ ವಿಭೋ ತವ ಭಕ್ತಿಮಾರ್ಗಂ ॥೧೪॥

ದೂರ್ವಾದಳಾರ್ಚನಕೃತಂ ಭವದೀಯಲಿಂಗೇ
ಸಂಗೇಪಿ ಶಾಂಗನಿವಹಾಃ ಕಿಮು ತಾಪಮಾರ್ಗೈಃ ।
ಬಿಲ್ವೈಶ್ಚ ಪಂಕಜವರೈಃ ಆನಕೈಃ ಕದಂಬೈಃ
ಪೂಜ್ಯೇಂದುಚೂಡ ಕುಲಭೂಧರವಾಸ ಶಂಭೋ ॥೧೫॥

ವಿಶ್ವಾಮರೇಶ್ವರ ಹರಾಮರಧೀರವೀರ
ಗೌರೀಮನೋಹರ ಹರಾವ್ಯಯ ಮಾರಮಾರ ।
ಸಂಸಾರಭಾರಪರಿಹಾರಕರಪ್ರಸೀದ
ಶ್ರೀ ಶಂಕರಾವ ಗರಧುರ್ಯಧರ ಪ್ರಸೀದ ॥೧೬॥

---

ಮನ್ಮಥನ ದರ್ಪವನ್ನು ನಾಶಗೊಳಿಸಿದವನೇ, ದೊಡ್ಡದಾದ ಆದಿಶೇಷನನ್ನೇ ಹಾರವನ್ನಾಗಿ ಉಳ್ಳವನೇ, ಸರ್ವವಸ್ತುಗಳಿಗೂ ಆದಿಭೂತನಾದವನೇ, ಭಯಂಕರಸ್ವರೂಪಿಯೇ, ಸ್ವರ್ಗಮೋಕ್ಷಗಳನ್ನು ಸುಲಭವಾಗಿ ಅನುಗ್ರಹಿಸುವ ಸರ್ವವ್ಯಾಪಿಯೇ, ನಮಗೆ ಸರ್ವದಾ ನಿನ್ನಲ್ಲಿ ಭಕ್ತಿಯಿರುವಂತೆ ಅನುಗ್ರಹಿಸು. ॥೧೪॥

ದೂರ್ವಾದಳಗಳಿಂದಲೂ, ಬಿಲ್ವ, ಕಮಲ, ಸಂಪಿಗೆ, ಕದಂಬ ಮುಂತಾದ ನಾನಾಜಾತಿಯ ಪತ್ರಪುಷ್ಪಗಳಿಂದಲೂ ಅರ್ಚಿತರಾದ ನಿನ್ನ ಭಕ್ತರು ಎಂದೂ ದುರ್ಮಾರ್ಗಿಗಳಾಗಲಾರರು. ನಿನ್ನ ಪೂಜೆಯಿಂದ ಅವರು ಸರ್ವಸುಖಗಳನ್ನೂ ಹೊಂದುವರು. ॥೧೪-೧೫॥

ಪ್ರಪಂಚಕ್ಕೂ ದೇವತೆಗಳಿಗೂ ಒಡೆಯನೆನಿಸಿದವನೇ, ಸರ್ವಪಾಪಹರನೇ, ದೇವವೀರನೇ, ಗೌರೀಮನಸ್ಸಿಗೆ ಆಹ್ಲಾದವನ್ನುಂಟುಮಾಡುವವನೇ, ನಾಶರಹಿತನೇ, ನೀನು ಮನ್ಮಥನನ್ನು ಸಂಪೂರ್ಣವಾಗಿ ನಾಶಗೊಳಿಸಿದವನಲ್ಲವೆ? ಮತ್ತು ಭಕ್ತರ ಸಂಸಾರವೆಂಬ ಪಾಪಭಾರವನ್ನು ನಾಶಗೊಳಿಸುವ ಶಂಕರನೇ, ವಿಷಭಾರವನ್ನು ಹೊತ್ತವನೇ, ನಮ್ಮನ್ನು ಕಾಪಾಡು" ॥೧೬॥

॥ ಸೂತ ಉವಾಚ ॥

ತತ್ಸ್ತುತ್ಯಾ ತೋಷಿತಃ ಶಂಭುಸ್ತಾನುವಾಚೋರಗೇಶ್ವರಾನ್ ।
ಪ್ರಣತಾನ್ವಿನತಾಂತ್ಸರ್ಪಾನ್ ಶರ್ವೋ ರುದ್ರ ಉಮಾಪತಿಃ ॥೧೭॥

॥ ಶ್ರೀ ಮಹಾದೇವ ಉವಾಚ ॥

ಚಕ್ಷುಃಶ್ರವೋತ್ತಮಾ ಯೂಯಂ ಮದ್ಭಕ್ತಾ ಮತ್ಪರಾಯಣಾಃ ।
ಭವತ್ಸ್ತುತ್ಯಾತಿಸಂತುಷ್ಟೋ ಭವತಾಂ ಕಷ್ಟಕಾರಕಃ ॥೧೮॥

ಶಿಪಿವಿಷ್ಟೋಽಹಮಧುನಾ ತುಷ್ಟೋಽಹಂ ಭವತಾಂ ಮುದೇ ।
ವೃಣುಧ್ವಂ ಕಾದ್ರವೇಯಾ ವೈ ವರಂ ಮತ್ತೋಽಭಿಕಾಂಕ್ಷಿತಂ ॥೧೯॥

ಇಚ್ಛಾಪ್ರಪೂರಕೋ ನಿತ್ಯಂ ಸ್ವಚ್ಛನಾಮಾಸ್ಮಿ ಸಾಂಪ್ರತಂ ।
ನಿರಿಚ್ಛಾನಾಂ ಹೃದಿಚ್ಛಾಂ ಚ ವಾಂಛಾಮಚ್ಛಾಂ ದದಾಮ್ಯಹಂ ॥೨೦॥

ಮಚ್ಛಾಸನೇ ನಿವಿಷ್ಟಾನಾಂ ಭಸ್ಮರುದ್ರಾಕ್ಷಧಾರಿಣಾಂ ॥೨೧॥

॥ ಸೂತ ಉವಾಚ ॥

ಸದಾಶಿವವಚಃಶ್ರುತ್ವಾ ನತ್ವಾ ತೇ ಭುಜಗೋತ್ತಮಾಃ ।
ಸಹ ಕದ್ರ್ವಾ ಪ್ರಣಮ್ಯೇಶಂ ವವ್ರುರ್ವರಮನುತ್ತಮಂ ॥೨೨॥

---

ಹೀಗೆ ಪ್ರಾರ್ಥಿಸಲು ಮಹಾದೇವನು ತೃಪ್ತನಾಗಿ, ಅತ್ಯಂತ ಭಯಭಕ್ತಿಯಿಂದ ಎದುರಿನಲ್ಲಿ ನಿಂತಿದ್ದ ಸರ್ಪಗಳನ್ನು ನೋಡಿ ಹೀಗೆಂದನು "ಸರ್ಪಶ್ರೇಷ್ಠಗಳೇ, ನಿಮ್ಮ ಭಕ್ತಿಗೆ ಮೆಚ್ಚಿದೆನು. ಸದಾ ನನ್ನಲ್ಲಿಯೇ ಭಕ್ತಿಯಿಟ್ಟು ಮನಃಪೂರ್ವಕವಾಗಿ ಮಾಡಿದ ಪ್ರಾರ್ಥನೆಯಿಂದ ಸರ್ವವ್ಯಾಪಕನಾದ ನಾನು ಪ್ರಸನ್ನನಾಗಿರುವೆನು. ಕದ್ರೂಪುತ್ರರಾದ ನೀವು ಈಗ ನನ್ನಿಂದ ಅಪೇಕ್ಷಿಸುವ ವರವನ್ನು ಕೇಳಿರಿ. ವಿಶ್ವಾಸದಿಂದ ಕೊಡುವೆನು. ॥೧೭-೧೮-೧೯॥

ಸರ್ವದಾ ನನ್ನ ಭಕ್ತರ ಇಚ್ಛಾಪೂರಣಮಾಡಿ ಭಕ್ತರಕ್ಷಕನೆಂಬ ಬಿರುದನ್ನು ಗಳಿಸಿರುವೆನು. ಜಿತೇಂದ್ರಿಯರಾದವರು ಅಪೇಕ್ಷಿಸುವಂತಹ ಸಾಯುಜ್ಯಪದವಿಯನ್ನೂ ಸಹ ಅವರಿಗೆ ಅನುಗ್ರಹಿಸುವೆನು. ನನ್ನ ನಿಯಮದಂತೆ ನಡೆದು, ಭಸ್ಮರುದ್ರಾಕ್ಷ ಧಾರಿಗಳಾದವರಿಗೆ ಸಕಲ ಇಷ್ಟಾರ್ಥಗಳನ್ನೂ ನಾನು ಸಲ್ಲಿಸುವೆನು. ಹೀಗೆಂದು

ಸಾ ಚ ಕದ್ರೂರ್ಮಹಾದೇವಂ ಪ್ರಣಮ್ಯ ಪರಮೇಶ್ವರಂ ।
ತುಷ್ಟಾವಾಷ್ಟಾಕೃತಿಂ ಶಂಭುಂ ಶಿಪಿವಿಷ್ಟಂ ಕೃಪಾಕರಂ ॥೨೩॥

॥ ಕದ್ರೂರುವಾಚ ॥

ಶಂಭೋ ವಿಶ್ವೇಶ ಸಾಂಬ ಶಶಿಗರತಟಿನೀಜೂಟಕೋಟೀಜ್ಜ್ವಲಾಂಗ
ಜ್ವಾಲಾನೇತ್ರಾಬ್ಜಜಾತೋತ್ತಮವರಶಿರಸಾಂ ಮಾಲಿಕಾಲಂಕೃತಾಂಗ ।
ಉಕ್ಷಾಂಗಾಪಾಂಗಸಂಗ ಸ್ಫುರದುರುಪದಭೃದ್ದಿವ್ಯಮಾತಂಗಭಂಗಾ
ಸಂಗಾಂಗಾಭಂಗಗಂಗಾಜಲಲವಕುಟಿಲಾಲೋಲದಿವ್ಯೋತ್ತಮಾಂಗ ॥೨೪॥

ಪಾಹೀಶ ಪ್ರಮಥೇಶ ಚಾರುಕರುಣಾಮೂರ್ತೇಽರುಣಾದ್ರಿಸ್ಥಿತಾ
ಪಾರಾವಾರಮಹಾಘಸಾಗರಗತಂ ಶ್ರೀಕರ್ಣಧಾರಪ್ರಭೋ ।
ಪುತ್ರಾನ್ಮೇ ಶರಣಾಗತಾಂಸ್ತರಣಿಜಜ್ವಾಲೋರುನೇತ್ರಪ್ರಭೋ
ಪಾಹೀಶಾನ ದಯಾನಿಧಾನ ಅರುಣಭ್ರಾತುರ್ಭಯಾತ್ಪೀಡಿತಾನ್ ॥೨೫॥

---

ಪರಶಿವನು ಅಭಯಪ್ರದಾನಮಾಡಲು ಆಗ ನಾಗಗಳು ಮತ್ತು ನಾಗಮಾತೆಯಾದ ಕದ್ರೂದೇವಿಯು ಪರಶಿವನನ್ನು ಪದೇ ಪದೇ ವಂದಿಸುತ್ತಾ ತಮಗೆ ಬೇಕಾದ ವರವನ್ನು ಕೇಳಲಾರಂಭಿಸಿದರು. ಅದಕ್ಕೆ ಮುಂಚೆ ಕದ್ರೂದೇವಿಯು ಅಷ್ಟ ಮೂರ್ತಿಯೂ, ಕಿರಣರೂಪಿಯೂ, ದಯಾಸಮುದ್ರನೂ ಆದ ಮಹೇಶ್ವರನನ್ನು ನಾನಾವಿಧವಾಗಿ ಸ್ತುತಿಸಿ ಈ ರೀತಿ ಪ್ರಾರ್ಥಿಸತೊಡಗಿದಳು. ॥೨೦-೨೧-೨೨-೨೩॥

"ಶಂಭುವೇ, ಜಗತ್ಪತಿಯೇ, ಪಾರ್ವತೀಸಹಿತನೇ, ನೀನು ನಿನ್ನ ಶಿರಸ್ಸಿನಲ್ಲಿ ಚಂದ್ರ, ವಿಷ, ದೇವಗಂಗೆ, ಜಟಾಜೂಟ ಇವೇ ಮೊದಲಾದ ವಸ್ತುಗಳನ್ನು ಹೊಂದಿರುವೆಯಲ್ಲವೆ? ಜ್ವಾಲಾನೇತ್ರದಿಂದಲೂ, ಬ್ರಹ್ಮಕಪಾಲವೇ ಮೊದಲಾದ ಶಿರೋಮಾಲೆಗಳಿಂದಲೂ ಅಲಂಕೃತನಾಗಿರುವೆ. ಪ್ರಸಿದ್ಧವಾದ ವೃಷಭದ ಮೇಲೆ ಕುಳಿತು, ದಿವ್ಯವಾದ ಕಟಾಕ್ಷದಿಂದಲೂ, ಶ್ರೇಷ್ಠವಾದ ಪಾದಕಮಲದಿಂದಲೂ ಸುಂದರನಾಗಿ ಕಾಣುತ್ತಿರುವೆ. ಮದ್ದಾನೆಯಂತಿರುವ ಮನ್ಮಥನನ್ನು ಧ್ವಂಸಮಾಡಿ ಗಂಗಾನದಿಯ ಅಲೆಗಳಿಂದ ಕೂಡಿ, ಗುಂಗುರುಗುಂಗುರಾಗಿ ಶೋಭಿಸುವ ಜಟಾಕಲಾಪದಿಂದ ನಿನ್ನ ಶಿರೋಭಾಗವು ಅತ್ಯಂತ ಮನೋಹರವಾಗಿದೆಯಲ್ಲವೆ ? ॥೨೪॥

ಪರಶಿವನೇ, ಪ್ರಮಥಗಣಗಳಿಗೊಡೆಯನೇ, ದಯಾಸಮುದ್ರನೇ, ಅರುಣಾಚಲನಿವಾಸಿಯೇ, ನೀನು ಪಾಪಭೂಯಿಷ್ಠವಾದ ಮಹಾಸಂಸಾರಕ್ಕೆ ದೋಣಿ

ಚಂದ್ರಾಪೀಡ ಮಹೇಶ ತೇ ಚರಣಯೋರ್ಭಕ್ತಿಪ್ರಭಾಭಾವಿತಾನ್
ನಾಸ್ತ್ಯನ್ಯತ್ತ್ರವ ಪಾದಯೋಃ ಶಶಿಕಲಾಮೌಲೇ ಶರಣ್ಯಂ ಪರಂ ।
ತ್ವಂ ಮಾತಾಸಿ ಪಿತಾಸಿ ಸರ್ವಜಗತಾಂ ನೇತಾ ತ್ವಮೇವೇಶ್ವರ
ಸ್ತ್ವತ್ತೋ ಮೇ ಸುತವೃಂದಮೇತದಧುನಾ ಪ್ರಾಪ್ನೋತು ಸೌಖ್ಯಂ ವಿಭೋ ॥೨೬॥

ಬಿಭ್ಯದ್ಗಾರುಡಭೀತಿತೋ ಗತಿಪರಂ ತ್ವಾಮೇವ ಯಾಚೇ ಶಿವ ।
ತತ್ತ್ರಾಣಾಯ ಭವಾಧುನಾ ಶರಣದ ತ್ವತ್ತೋಽಭಿಕಾಂಕ್ಷೇ ವರಂ ॥೨೭॥

॥ ಸೂತ ಉವಾಚ ॥

ತಸ್ಯಾಃ ಸ್ತವ್ಯವಚೋ ನಿಶಮ್ಯ ಭಗವಾನುಗ್ರೋಽಪ್ಯನುಗ್ರಸ್ತದಾ
ನಾಗಾನಾಹ ನವೋ ಭಯಂ ಗರುಡತೋ ಭೂಷಾಂಗಜಾತಾ ಹಿ ಮೇ ।
ಕೇಚಿತ್ಕಂಕಣತಾಂ ಭಜಂತು ಭುಜಗಾ ಜೂಟೋರುಬಂಧಾಸ್ತದಾ
ಪಾದಾದ್ಯಾಂಘ್ರಿಜನೂಪುರಾವರ ಮಹಾಮಾಲಾಯಿತಾಃ ಕೇಪಿ ಮೇ ॥೨೮॥

---

ಯಂತೆಯೂ, ನಾವಿಕನಂತೆಯೂ ಇರುವೆ. ಮಹಾದೇವನೇ, ಅರುಣನ ಅಣ್ಣನಾದ ಗರುಡನಿಂದ ಹೆದರಿ ನಿನ್ನನ್ನು ಮೊರೆಹೊಕ್ಕಿರುವ ಈ ನನ್ನ ಪುತ್ರರನ್ನು ದಯೆಯಿಂದ ಕಾಪಾಡು. ನೀನು ಮಹಾಮಹಿಮನು. ಸೂರ್ಯಚಂದ್ರಾಗ್ನಿಗಳನ್ನೇ ನೇತ್ರವನ್ನಾಗಿ ಉಳ್ಳವನು. ॥೨೫॥

"ಫಾಲಚಂದ್ರನೇ, ಇಂದುವೇ ನಿನಗೆ ಅಲಂಕಾರವಸ್ತುವು. ನಿನ್ನ ಪಾದ ಕಮಲಗಳನ್ನೇ ಸರ್ವದಾ ನಂಬಿರುವ ನಮಗೆ ಅದನ್ನು ಬಿಟ್ಟರೆ ಬೇರೆ ರಕ್ಷಕವಸ್ತುವೇ ದೊರೆಯಲಾರದು. ಸಮಸ್ತಲೋಕಕ್ಕೂ ಮಾತಾಪಿತೃವೂ, ರಕ್ಷಕನೂ, ಮುಂದಾಳೂ ಆದ ನಿನ್ನಿಂದ ನನ್ನ ಮಕ್ಕಳು ಸರ್ವದಾ ಸೌಖ್ಯವನ್ನು ಪಡೆಯಲಿ. ಇದೇ ನನ್ನ ಪ್ರಾರ್ಥನೆ. ಮಹೇಶ್ವರನೇ, ಶರಣಪ್ರದನೇ, ಗರುಡನಿಂದ ವಿಶೇಷವಾಗಿ ಹೆದರಿರುವ ಈ ನನ್ನ ಮಕ್ಕಳನ್ನು ಕಾಪಾಡು ಎಂಬುದೇ ನಾನು ಕೇಳಿಕೊಳ್ಳುವ ಮುಖ್ಯವಾದ ವರ." ॥೨೬-೨೭॥

ಎಂದು ಕದ್ರೂದೇವಿಯು ಪ್ರಾರ್ಥಿಸಲಾಗಿ, ಉಗ್ರನೂ, ಶಾಂತನೂ ಆದ ಪರಶಿವನು, ಆವಳ ಸ್ತುತಿಗೆ ಮೆಚ್ಚಿ ನಾಗಗಳಿಗೆ ಈ ರೀತಿ ಅಭಯವಿತ್ತನು. "ಸರ್ಪಗಳೇ, ಇನ್ನು ನೀವು ಗರುಡನಿಂದ ಭಯವನ್ನು ಬಿಡಿ. ಇಂದಿನಿಂದ ನೀವು

ಮತ್ಕಂಠಾಭರಣಾಶ್ಚ ಕುಂಡಲವರಾಃ ಯೂಯಂ ಭವಂತ್ವದ್ಯ ಮೇ ॥೨೯॥

॥ ಈಶ್ವರ ಉವಾಚ ॥

ಪಾತಾಳೇ ನಿವಸಂತು ಸಂತತಮುಮಾಕಾಂತಾಶ್ರಯಾಃ ಶಾಂಕರಾ
ವೀರೋದಾರ ಕುಮಾರದಾರಸಹಿತಾಃ ಕಾಕೋದರಾ ಮತ್ಪರಾಃ ।
ದಿವ್ಯಂ ಮೇ ವರಲಿಂಗಮದ್ಭುತತಮಂ ಶ್ರೀ ಹಾಟಕೇಶಾಭಿಧಂ
ತ್ವಭ್ಯರ್ಚ್ಯಾನುದಿನಂ ಸದೈವ ನಿಯತಂ ಭಸ್ಮಾಂಗರಾಗಾದರಾಃ ॥೩೦॥

ನ ವಿಷ್ಣು ಚಕ್ರಾನ್ನ ಯಮಸ್ಯ ದಂಡಾನ್ನ
ಪಾಶಿಪಾಶಾನ್ನ ಚ ಶಕ್ರವಜ್ರಾತ್ ।
ನ ವೋ ಭಯಂ ವೈ ಭುಜಗಾ ಭವೇತ್ಕ್ವಚಿ
ನ್ಮತ್ಪಾದಸಂಸೇವನತೋ ಗರುತ್ಮತಃ ॥೩೧॥

---

ನನ್ನ ಭೂಷಣ ಸಾಮಗ್ರಿಗಳಾಗಿರಿ. ನಿಮ್ಮಲ್ಲಿ ಕೆಲವರು ನನಗೆ ಕೈಬಳೆಗಳಾಗಿಯೂ, ಜಟಾಜೂಟಗಳ ಸುತ್ತಲೂ ವ್ಯಾಪಿಸಿದವರಾಗಿಯೂ, ಕೆಲವರು ಕಾಲು, ಸೊಂಟ, ಮೊಳಕಾಲು ಮುಂತಾದ ಕಡೆಗಳಲ್ಲಿ ಬಳೆಗಳ ಆಕಾರದಲ್ಲಿಯೂ, ಹಲವರು ನನಗೆ ಮಾಲಾರೂಪದಲ್ಲಿಯೂ ಅನೇಕರು ಕರ್ಣಕುಂಡಲಾಕಾರದಲ್ಲಿ ಇದ್ದು ನನ್ನನ್ನು ಸೇವಿಸಿರಿ. ನಿಮಗೆ ಗರುಡಭಯವು ತಪ್ಪುವುದು. ॥೨೮-೨೯॥

ಎಲೈ ನಾಗದೇವತೆಗಳೇ, ನೀವು ಇನ್ನು ಸದಾ ಪಾತಾಳದಲ್ಲಿಯೇ ವಾಸವಾಗಿರಿ. ನಿಮ್ಮ ಮಕ್ಕಳು ಮರಿಗಳು ಸಮೇತ ನಿಮ್ಮ ವಂಶಪರಂಪರೆಯೆಲ್ಲವೂ ನನ್ನ ಭಕ್ತರಾಗಿದ್ದು ವೀರಶಾಂಕರರೆನಿಸಲಿ. ಅಲ್ಲದೆ ಪಾತಾಳಲೋಕದಲ್ಲಿರುವ ಅದ್ಭುತವಾದ ಹಾಟಕೇಶ್ವರಲಿಂಗವನ್ನು ಸದಾ ಆರಾಧಿಸುತ್ತಾ, ಭಸ್ಮರುದ್ರಾಕ್ಷಭೂಷಿತರಾಗಿ ಸರ್ವದಾ ನನ್ನ ಸ್ಮರಣೆಯಿಂದಲೇ ಜೀವಿಸಿರಿ. ॥೩೦॥

ಇನ್ನು ಮುಂದೆ ನಿಮಗೆ ವಿಷ್ಣುವಿನ ಚಕ್ರದಿಂದಾಗಲಿ, ಯಮದಂಡದಿಂದಾಗಲಿ, ವರುಣನ ಪಾಶದಿಂದಾಗಲಿ, ಇಂದ್ರಾಯುಧವಾದ ವಜ್ರದಿಂದಾಗಲಿ ಭಯ ವುಂಟಾಗಲಾರದು. ನನ್ನ ಪಾದಪೂಜಾಬಲದಿಂದ ಗರುಡನಿಂದಲೂ ನಿಮಗೆ ಯಾವ ವಿಪತ್ತೂ ಒದಗಲಾರದು. ಇದು ನಿಜ. ॥೩೧॥

॥ ಸೂತ ಉವಾಚ ॥

ಇತ್ಯುಕ್ತಂ ನಗಜಾಪತೇರ್ವರವಚಃ ಶ್ರುತ್ವೈವ ನಾಗಾ ಹಿ ತೇ
ಮಾತ್ರಾ ತುಷ್ಟಹೃದಬ್ಜಸದ್ಮವಸತಿಂ ನತ್ವೋಚುರಿತ್ಥಂ ವಚಃ ।
ತಾನ್ನಾಗಾನನುಗೃಹ್ಯ ದೇವಸಹಿತಃ ಸ್ಥಾನಂ ಯಯೌ ತಂ ನಗಂ
ಕೈಲಾಸೇ ಸಮವಾಪ್ಯಸೌ ಗಿರಿಜಯಾ ಹರ್ಷೋರುಧಾರಾವೃತಃ ॥೩೨॥

॥ ನಾಗಾ ಊಚುಃ ॥

ಶಂಭೋ ತ್ವದಂಗವರಭೂಷಣತೋ ವಯಂ ಹಿ
ಧನ್ಯಾಶ್ಚ ಮಾನ್ಯಪದವೀಂ ಪ್ರಥಿತಾಃ ಸುರಾದ್ಯೈಃ ।
ವಿಷ್ಣ್ವಾದಿವಂದಿತಪದಾಬ್ಜವರಂ ತವಾಂಘ್ರಿ
ದ್ವಂದ್ವೇಕ್ಷಣೇನ ವಯಮದ್ಯ ತಿಧನ್ಯಧನ್ಯಾಃ ॥೩೩॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಸಂಸ್ತುತ್ಯ ಶಂಭುಂ ವರವಿವರಮಹೋಭೂಮಿಪಾತಾಳಮೂಲ
ಮೀಶಾಜ್ಞಾತೋ ಭುಜಂಗಾ ವಿವಿಶುರವಶಾಃ ಭಕ್ತಿತಃ ಪಾವಿತಾಶಾಃ ।

---

ಈರೀತಿ ಪರಮೇಶ್ವರನಿಂದ ಆಶ್ವಾಸಿತರಾದ ನಾಗದೇವತೆಗಳೂ, ಮತ್ತೂ ಕದ್ರೂದೇವಿಯೂ, ಪದೇ ಪದೇ ಪರಶಿವನಿಗೆ ನಮಸ್ಕರಿಸುತ್ತಾ, ಪರಶಿವನು ವರ ವಿತ್ತುದಕ್ಕೆ ಆನಂದಿಸುತ್ತಾ ನಿಂತಿದ್ದರು. ಕೂಡಲೇ ಮಹಾದೇವನು ಆ ಹಿಮಾಲಯ ದಿಂದ ಹೊರಟು ಪಾರ್ವತಿಯೊಡನೆ ಆನಂದಬಾಷ್ಪಸಹಿತನಾಗಿ ತನ್ನ ನಿವಾಸಸ್ಥಾನ ವಾದ ಕೈಲಾಸಪರ್ವತಕ್ಕೆ ಹಿಂದಿರುಗಿದನು. ಆಗ ಮತ್ತೆ ಸರ್ಪಗಳು ಹೀಗೆಂದವು. ॥೩೨॥

ಪರಶಂಭುವೇ, ನಿನ್ನ ಅಂಗಭೂಷಣಗಳಾಗಿ ನಾವು ನಿಂತುದಕ್ಕೆ ಬಹಳ ಕೃತ ಕೃತ್ಯರಾಗಿರುವೆವು. ಮತ್ತು ದೇವತೆಗಳಿಗೂ ನಾವು ಇಂದು ಪೂಜ್ಯರಾಗಿರುವೆವು. ವಿಷ್ಣ್ವಾದಿ ದೇವತೆಗಳಿಂದ ವಂದಿತನಾದ ನಿನ್ನನ್ನೂ, ಸಕಲರಿಂದಲೂ ಪೂಜಿತವಾದ ನಿನ್ನ ಪಾದದ್ವಂದ್ವವನ್ನೂ, ದರ್ಶನಮಾಡಿ ನಾವು ಅತ್ಯಂತ ಧನ್ಯರಾಗಿರುವೆವು. ॥೩೩॥

ಈರೀತಿ ನಾಗಗಳು ಪರಶಿವನನ್ನು ಸ್ತುತಿಸಿ, ಅವನ ಆಜ್ಞೆಯಂತೆ, ಪಾತಾಳ ಲೋಕವನ್ನು ಪ್ರವೇಶಿಸಿದುವು. ಹಾಗೆಯೇ, ಅಲ್ಲಿ ಅನೇಕ ಮಣಿಗಳಿಂದ ರಂಜಿಸು

ದಿವ್ಯಂ ತದ್ಧಾಟಕೇಶಂ ಪ್ರಭಿತಮಣಿಗಣೋತ್ತುಂಗಲಿಂಗಂ ಭಜಂತಃ
ಕಾಂಕ್ಷಂತೋ ಮುಕ್ತಿಸಿದ್ಧಿಂ ಕಿಲ ಬಿಲಶಯಕಾಃ ಶಾಂಭವಾಃ ಶಂಭುಭಕ್ತಾಃ
॥೩೪॥

ಇತಿ ಶ್ರೀ ಶಿವರಹಸ್ಯೇ ಅಷ್ಟಮಾಂಶೇ ನಾಗವರಪ್ರದಾನಂ
ನಾಮ ಷಡ್ವಿಂಶೋಽಧ್ಯಾಯಃ

---

ತ್ತಿದ್ದ ಹಾಟಕೇಶ್ವರಲಿಂಗವನ್ನು ಭಜಿಸುತ್ತಾ, ಮೋಕ್ಷವನ್ನು ಅಪೇಕ್ಷಿಸುತ್ತಾ, ಸರ್ವದಾ ಶಿವಸೇವೆಯಿಂದ ಶಾಂಭವರೆನಿಸಿಕೊಂಡು ಸುಖದಿಂದ ಜೀವಿಸುತ್ತಿದ್ದುವು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೩೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಸಪ್ತವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಶೇಷೋಽಪಿ ಹಾಟಕೇಶಾಖ್ಯಂ ಲಿಂಗಂ ಶಂಭೋಃ ಸದೈವ ಹಿ ।
ಸರ್ಪೈಃ ಪಾತಾಳವಿವರೇ ಪೂಜಯಾಮಾಸ ಭಕ್ತಿತಃ ॥೧॥

ಭಸ್ಮರುದ್ರಾಕ್ಷಸಂಪನ್ನಃ ಪಂಚಾಕ್ಷರಪರಾಯಣಃ ।
ರುದ್ರಾಕ್ಷಮಾಲಾಭರಣೋ ಮಹೇಶಚರಣಾಶ್ರಯಃ ॥೨॥

ಕದ್ರೂಸುತವರಸ್ತತ್ರ ಸದಾ ರುದ್ರಜಪಾದರಃ ।
ಸ್ವಫಣಾಮಣಿಭಿಸ್ತತ್ರ ಕೃತ್ವಾ ಶರ್ವಾಲಯಂ ಮಹತ್ ॥೩॥

ಪ್ರಾಕಾರಗೋಪುರೋಪೇತಂ ಮಣಿಸೌಧಶತೋತ್ತರಂ ।
ಸರ್ಪಾಣಾಮಾಲಯಾನ್ಯೇವ ಕ್ರಮೇಣ ಪರಿತಸ್ತದಾ ॥೪॥

---

## ಇಪ್ಪತ್ತೇಳನೆಯ ಅಧ್ಯಾಯ

ಆದಿಶೇಷನು ಪಾತಾಳಲೋಕದಲ್ಲಿ ಇತರ ಸರ್ಪಗಳೊಡಗೂಡಿ, ಅತ್ಯಂತ ಭಕ್ತಿಯಿಂದ, ಭಸ್ಮರುದ್ರಾಕ್ಷಿಗಳಿಂದ ಅಲಂಕೃತನಾಗಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ, ಹಾಟಕೇಶ್ವರಲಿಂಗವನ್ನು ತಪ್ಪದೆ ನಿತ್ಯವೂ ಪೂಜಿಸುತ್ತಿದ್ದನು. ॥೧-೨॥

ಮತ್ತು ಸದಾ ಮಹೇಶ್ವರನ ಪಾದವನ್ನೇ ಆಶ್ರಯಿಸಿ, ರುದ್ರಾಧ್ಯಾಯ ಪಾರಾಯಣಮಾಡುತ್ತಾ, ತನ್ನ ಫಣಾಮಣಿಗಳಿಂದ ಶಿವಲಿಂಗವನ್ನು ಅಲಂಕರಿಸಿ, ಅಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿದನು. ಆ ದೇವಾಲಯವು ಪ್ರಾಕಾರ,

ಮಹಾಸೌಧಗಣಾಕೀರ್ಣಂ ಸಪ್ತತೋಲಿಕಮುತ್ತಮಂ ।
ನಾಗೈಶ್ಚ ನಾಗನಾರೀಭಿರಾವೃತಂ ತಚ್ಚಕಾರ ವೈ ॥೫॥

ಮಹೇಶ್ವರಪ್ರಸಾದೇನ ಶೇಷೋ ವೈ ವಿಶ್ವಕರ್ಮಣಾ ।
ಅಶೇಷಭುಜಗಾನಾಂ ಚ ಕದ್ರ್ವಾಶ್ಚೈವ ವರಾಲಯಂ ॥೬॥

ಲಿಂಗಾಲಯಾನ್ಯಪಿ ಸದಾ ಪರಿತಸ್ಸ ಚಕಾರ ವೈ ।
ತಕ್ಷಕೇಶಮನಂತೇಶಂ ಕಂಬಲಾಶ್ವತರೇಶ್ವರೌ ॥೭॥

ಏಲಾಪುತ್ರೇಶ್ವರಂ ಚೈವ ತಥಾ ಕಾರ್ಕೋಟಕೇಶ್ವರಂ ।
ಧೃತರಾಷ್ಟ್ರೇಶ್ವರಂ ಚೈವ ಗುಲಿಕೇಶಂ ಭೃತೀಶ್ವರಂ ॥೮॥

ಶಂಖೇಶ್ವರಂ ಪಿಚಂಡೀಶಂ ವಾರಣೇಶಂ ದ್ರುತೀಶ್ವರಂ ।
ಸರ್ಪೇಶಂ ವಾಮನೇಶಂ ಚ ಖರ್ವಟೇಶಂ ಚ ವಾಸುಕಿಂ ॥೯॥

ಏತಾನಿ ದಿವ್ಯಲಿಂಗಾನಿ ಸ್ಥಾಪ್ಯ ತತ್ರ ಭುಜಂಗಮಾಃ ।
ಮಣಿಧಾಮಗತಾನ್ಯೇವ ಕೃತ್ವಾ ತಾನಿ ಮಹೇಶಿತುಃ ॥೧೦॥

---

ಗೋಪುರ, ಉಪ್ಪರಿಗೆ ಇವುಗಳಿಂದ ಅಲಂಕೃತವಾಗಿದ್ದಿತು. ಅದರ ಸುತ್ತಲೂ ಸುಂದರವಾಗಿ ಸರ್ಪಗಳಿಗೆ ನಿಲಯವನ್ನು ಕಟ್ಟಿಸಿದ್ದನು. ॥೩-೪॥

ನಾಗನಿಲಯಗಳೆಲ್ಲಾ ಉಪ್ಪರಿಗೆಗಳಿಂದಲೂ ಜಲಧಾರೆಗಳಿಂದಲೂ, ರಂಜಿತವಾಗಿದ್ದುವು. ನಾಗಕನ್ನಿಕೆಯರು, ನಾಗಗಳು ಅದರಲ್ಲಿ ಸುಖದಿಂದ ವಿಹರಿಸುತ್ತಿದ್ದರು. ಈಶ್ವರಾನುಗ್ರಹದಿಂದ, ಆದಿಶೇಷನಿಗೂ, ಅಖಿಲ ಸರ್ಪಗಳಿಗೂ, ನಾಗಮಾತೆಯಾದ ಕದ್ರೂದೇವಿಗೂ ವಿಶ್ವಕರ್ಮನೇ ಸುಂದರವಾದ ನಿಲಯಗಳನ್ನು ನಿರ್ಮಿಸಿ ಕೊಟ್ಟನು. ॥೫-೬॥

ಮನೆಗಳ ಸುತ್ತಲೂ ನಾನಾ ಹೆಸರಿನ ಶಿವಲಿಂಗಗಳನ್ನು ನಿರ್ಮಿಸಿದನು. ತಕ್ಷಕೇಶ್ವರ, ಅನಂತೇಶ್ವರ, ಕಂಬಲೇಶ್ವರ, ಅಶ್ವತಲೇಶ್ವರ, ಏಲಾಪುತ್ರೇಶ್ವರ, ಕಾರ್ಕೋಟಕೇಶ್ವರ, ಧೃತರಾಷ್ಟ್ರೇಶ್ವರ, ಗುಲಿಕೇಶ್ವರ, ಭೃತೀಶ್ವರ, ಶಂಖೇಶ್ವರ, ಪಿಚಂಡೀಶ್ವರ, ವಾರಣೇಶ್ವರ, ದ್ರುತೀಶ್ವರ, ಸರ್ವೇಶ್ವರ, ವಾಮನೇಶ್ವರ, ಖರ್ವಟೇಶ್ವರ, ವಾಸುಕೇಶ್ವರ, ಇವೇ ಮೊದಲಾದ ಹೆಸರಿನ ಅನೇಕ ಶಿವಲಿಂಗಗಳನ್ನು

ಪಾತಾಳೇ ಹಾಟಕೇಶಸ್ಯ ಪರಿತೋ ನಾಗಸತ್ತಮಾಃ ।
ದಿವ್ಯಪೂಜಾಭರೈರ್ನಿತ್ಯಂ ಪೂಜಯಾಮಾಸುರೀಶ್ವರಂ ॥೧೧॥

ತತ್ಪೂಜಾವಿಸ್ತರಂ ವಕ್ಷ್ಯೇ ತತ್ಸ್ತುತಿಂ ಚ ಶೃಣುಷ್ವ ಮೇ ॥೧೨॥

॥ ಶ್ರೀಸ್ಕಂದ ಉವಾಚ ॥

ಫಣಾಮಣಿಗಣವ್ರಜ ಪ್ರಭವಗರ್ಭಧಾಮಪ್ರಭಾ
ವಿರಾಜಿತ ಸುಹಾಟಕೋಜ್ಜ್ವಲ ಮಹೋರುಲಿಂಗೋತ್ತಮಂ ।
ಸುಬಿಲ್ವದಳಪಂಕಜೈಃ ಕನಕಚಂಪಕೈರ್ಮಲ್ಲಿಕಾ
ಕದಂಬಕುಸುಮಸ್ರಜಾಭರವರೈಃ ಪ್ರಪೂಜ್ಯೋರಗಾಃ ॥೧೩॥

ಲಿಂಗಂ ಹಾಟಕಗರ್ಭಮಂಡಿತ ಮಹಾಗರ್ಭೋರುಧಾಮಸ್ಥಿತಂ
ದಿವ್ಯೋತ್ತುಂಗ ವೃಷಾಢ್ಯರತ್ನ ಶಿಖರದ್ವಾರಾಂಕಿತಂ ಸುಂದರಂ ।
ಪ್ರಾಕಾರಪ್ರಕರೈರಪಾರ ಗಣನಾ ಹೀನಸ್ವಮೌಲೀ ಲಸತ್
ರತ್ನಾಚ್ಛಫಣಿಭಿಃ ಪ್ರದೀಪಿತಮುಮಾಕಾಂತಾಲಯೇಷೂದ್ಯತಾಃ ॥೧೪॥

---

ಸ್ಥಾಪನೆಮಾಡಿ, ಅವುಗಳ ನಿಲಯುಗಳನ್ನೆಲ್ಲಾ ರತ್ನಮಯವನ್ನಾಗಿ ನಿರ್ಮಾಣ ಮಾಡಿಸಿದನು. ॥೭-೮-೯-೧೦॥

ನಿತ್ಯವೂ ನಾಗಶ್ರೇಷ್ಠರೆಲ್ಲರೂ ಹಾಟಕೇಶ್ವರಲಿಂಗದ ಸುತ್ತಲೂ ಕುಳಿತು ಭಕ್ತಿಯಿಂದ ಪೂಜಿಸುತ್ತಿದ್ದರು. ಆ ಪೂಜಾಕ್ರಮವನ್ನೂ ಅವರು ಸ್ತುತಿಸಿದ ಸ್ತೋತ್ರಗಳನ್ನೂ ಈಗ ಹೇಳುವೆನು ಕೇಳು ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ವಿವರಿಸಿ ಹೇಳಿದನು. ॥೧೧-೧೨॥

ನಾಗಗಳು, ತಮ್ಮ ಹೆಡೆಯ ನಾಗರತ್ನಗಳ ಕಾಂತಿಯಿಂದ ಪ್ರಕಾಶಮಾನವಾದ ಗರ್ಭಾಂಕಣದಲ್ಲಿ ಸುವರ್ಣಮಯವಾಗಿ ವಿರಾಜಿಸುತ್ತಿರುವ ಹಾಟಕೇಶ್ವರ ಲಿಂಗವನ್ನು ಬಿಲ್ವದಳಗಳಿಂದಲೂ, ಸಂಪಿಗೆ, ಕದಂಬ, ಮಲ್ಲಿಗೆ ಮುಂತಾದ ಪುಷ್ಪಗಳ ಮಾಲಿಕೆಯಿಂದಲೂ ಅಲಂಕರಿಸಿ ಪೂಜಿಸುತ್ತಿದ್ದರು. ॥೧೩॥

ಆ ಶಿವಾಲಯಗಳು ಸುವರ್ಣಮಯವಾದ ಗರ್ಭಾಂಕಣದಿಂದ ಹೊಳೆಯುತ್ತಿದ್ದುವು. ಶಿವಾಲಯದ ಬಾಗಿಲಿನಲ್ಲಿಯೇ ದಿವ್ಯವಾದ ಮತ್ತು ಉನ್ನತವಾದ ವೃಷಭವೂ, ಬಾಗಿಲಿನ ಮೇಲೆ ರತ್ನಮಯವಾದ ಶಿಖರವೂ ಪ್ರಕಾಶಿಸುತ್ತಿದ್ದಿತು.

ಪಾತಾಳಗಂಗಾಂಬುಘಟೀಸಹಸ್ರ
ಧಾರಾದಿಭಿಃ ಕ್ಷೀರದಧಿಪ್ರಭಾಜ್ಯೈಃ ।
ಪ್ರಾಜ್ಯೈರ್ಮಧುಪ್ರಭವಸಾರಘಟೀಸಹಸ್ರೈಃ
ಸಚ್ಛರ್ಕರಾಪೂರಭರೈರಹೀನಾಃ ॥೧೫॥

ಸನ್ನಾರಿಕೇಲೋದಕ ಜಂಬುನೀರ
ರಂಭಾಫಲಾಮ್ರಪ್ರಭವೈಶ್ಚ ಪಾನಸೈಃ ।
ಗಂಧೋದಕೈಶ್ಚಂದ್ರ ಉಶೀರ ಪಾಟಲಾ
ತಕ್ಕೋಲ ಕಂಕೋಲ ಸುವಾಸಿತೈರ್ಜಲೈಃ ॥೧೬॥

ಆಸಿಚ್ಯ ಗನ್ಧೈರ್ವರಚಂಪಕಾದ್ಯೈ
ರಾಲಿಪ್ಯ ಲಿಂಗಂ ಸ್ವಗೃಹಂ ಸುವಸ್ತ್ರೈಃ ।
ಸದ್ರತ್ನಭೂಷಾ ಫಣಿಗೋಲಕಾಂಕಿತೈ
ರತ್ನೈಶ್ಚ ನಿಷ್ಟಪ್ತಸುವರ್ಣಯುಕ್ತೈಃ ॥೧೭॥

---

ಅಲ್ಲದೆ ಆ ಶಿವಾಲಯಗಳಿಗೆ ನಾಗರತ್ನಗಳಿಂದ ಹೊಳೆಯುವ ಅಸಂಖ್ಯಾಕವಾದ ಪ್ರಾಕಾರಗಳೂ ಶೋಭಿಸುತ್ತಿದ್ದುವು. ಇಂತಹ ಸುಂದರಮಯವಾದ ಶಿವಾಲಯಗಳಲ್ಲಿ ನಾಗದೇವತೆಗಳು ಶಿವಲಿಂಗಗಳನ್ನು ಪೂಜಿಸುತ್ತಿದ್ದರು. ॥೧೪॥

ಶಿವಲಿಂಗಾಭಿಷೇಕಕ್ಕೆ ಪಾತಾಳಗಂಗೋದಕ, ಶುದ್ಧವಾದ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ ಇವೇ ಮೊದಲಾದ ಪಂಚಾಮೃತದ್ರವ್ಯಗಳನ್ನು ಸಾವಿರಾರು ಕೊಡಗಳಿಂದ ತರಿಸಿ ಧಾರಾಪೂರ್ವಕವಾಗಿ ಅಭಿಷೇಕಮಾಡುತ್ತಿದ್ದರು. ॥೧೫॥

ಎಳನೀರು, ನೇರಳೆ, ಬಾಳೆ, ಮಾವು, ಹಲಸು ಈ ಹಣ್ಣುಗಳ ರಸದಿಂದಲೂ, ಗಂಧ, ಸಿಂಧೂರ, ಲಾಮಂಚ, ಪಾದರಿ, ತಕ್ಕೋಲ, ಅಂಕೋಲ ಮುಂತಾದ ಸುಗಂಧದ್ರವ್ಯಗಳ ಶೀತಲೋದಕದಿಂದಲೂ ಪರಶಿವಲಿಂಗಕ್ಕೆ ಅಭಿಷೇಕಮಾಡುತ್ತಿದ್ದರು. ॥೧೬॥

ಹೀಗೆ ಹಸುವಿನ ಹಾಲು ಮೊದಲಾದುವುಗಳಿಂದ ಅಭಿಷೇಕ ಮಾಡಿ, ಅನಂತರ ಶಿವಲಿಂಗಕ್ಕೆ ಶುದ್ಧವಾದ ವಸ್ತ್ರಗಳನ್ನು ಹೊದಿಸಿ, ಅಲಂಕರಿಸುತ್ತಾ,

ತಗರಾಗುರುಧೂಪಸಂಭವೈ
ರ್ವರಗಂಧೈರ್ಮಣಿದೀಪಕೋಟಿಭಿಃ ।
ಪರಿಫುಲ್ಲಸುಪಂಕಜಾರ್ಕಬಿಲ್ವೈ
ರ್ವರ ಮಲ್ಲಿಕಾಕರವೀರ ಜಾಜಿಪುಷ್ಪೈಃ ॥೧೮॥

ಮರುವ ದಮನ ಸ್ರಜಾದಿ ಭಾರೈಃ
ಪರಿಪೂಜ್ಯ ಪ್ರಮಥಾಧಿಪೋರುಲಿಂಗಂ ।
ಭುಜಗಾ ಜಗತಾಂ ಮಹೇಶಮೇವಂ
ವರ ನೈವೇದ್ಯಭರೈಶ್ಚ ಭಕ್ಷ್ಯಭೋಜ್ಯೈಃ ॥೧೯॥

ಸ್ರಕ್ತಾಂಬೂಲದುಕೂಲಕೂಲವಿಹಿತಾಲಂಕಾರಸಚ್ಚಂದನಾ
ಲಿಪ್ತಂ ಲಿಂಗಮುಮಾಪತೇಃ ಪ್ರಿಯತಮಂ ನೀರಾಜಯಂತಿ ದ್ವಿಜ ।
ದೀಪಾನಾಂ ಚ ಸಹಸ್ರಕೈರ್ವರಮಹಾಕರ್ಪೂರ ಖಂಡೋತ್ಥಿತ
ಜ್ವಾಲಾಜಾಲ ನಿರಸ್ತ ದಿಕ್ತಮತತಿಂ ತೇ ಪನ್ನಗಾಃ ಶಂಕರಂ ॥೨೦॥

---

ರತ್ನಮಯವಾದ ಮುಖವಾಡಗಳಿಂದಲೂ, ನಾಗಾಭರಣಗಳಿಂದಲೂ, ಅಪರಂಜಿ ಚಿನ್ನದಿಂದ ನಿರ್ಮಿತವಾದ ರತ್ನದ ಆಭರಣಗಳಿಂದಲೂ ಅಲಂಕರಿಸುತ್ತಿದ್ದರು. ॥೧೭॥

ತಗರ, ಅಗುರು ಮೊದಲಾದುವುಗಳ ಧೂಪಗಳಿಂದಲೂ, ರತ್ನಮಯವಾದ ದೀಪಗಳಿಂದಲೂ, ಅರಳಿದ ಕಮಲ, ಎಕ್ಕ, ಬಿಲ್ವ, ಮಲ್ಲಿಗೆ, ಕಣಿಗಲು, ಜಾಜಿ, ಮರುಗ, ದವನ ಮೊದಲಾದುವುಗಳಿಂದ ಕೂಡಿದ ಪುಷ್ಪಮಾಲೆಗಳಿಂದಲೂ ಹಾಟಕೇಶ್ವರ ಲಿಂಗವನ್ನು ಮನಸಾರೆ ಪೂಜಿಸುತ್ತಿದ್ದರು. ಆ ಪೂಜಾನಂತರದಲ್ಲಿ ನಾನಾವಿಧವಾದ ಭಕ್ಷ್ಯಭೋಜ್ಯಗಳನ್ನು ಪರಶಿವನಿಗೆ ಸಮರ್ಪಿಸಿ ತೃಪ್ತಿಪಡಿಸುತ್ತಿದ್ದರು. ॥೧೮-೧೯॥

ಹೀಗೆ ಪುಷ್ಪಮಾಲೆ, ತಾಂಬೂಲ, ಪಟ್ಟೆವಸ್ತ್ರ, ರತ್ನಾಭರಣ, ದಿವ್ಯಚಂದನ ಇವುಗಳಿಂದ ಅಲಂಕೃತವಾದ ಶಿವಲಿಂಗಕ್ಕೆ ಪ್ರಕಾಶಮಾನವಾದ ಸಹಸ್ರದೀಪಗಳ ನೀರಾಜನವನ್ನೂ, ಕರ್ಪೂರಾರತಿಯನ್ನೂ ಪರಶಿವನಿಗೆ ಅರ್ಪಿಸುತ್ತಿದ್ದರು. ಆ ನೀರಾಜನಗಳ ಜ್ವಾಲೆಯಿಂದ ಸಮಸ್ತದಿಕ್ಕುಗಳೂ ತೊಳಗಿ ಬೆಳಗುತ್ತಿದ್ದವು. ಈರೀತಿ ನಾಗಗಳು ಶಂಕರನನ್ನು ತೃಪ್ತಿಪಡಿಸುತ್ತಿದ್ದವು. ॥೨೦॥

ಹಾಟಕಕಟಕೋಪಮಂ ಮಹೇಶಲಿಂಗಂ
ಪರಿಸಂವೇಷ್ಟ್ಯ ಮುದಾನನೋತ್ಥರತ್ನೈಃ ।
ಸ್ವಫಣಾದಿಸುಂದರೇಶ ಮೂರ್ಧ್ನಿ
ವರಿವಸ್ಯಾಭಿರಹೋ ಸಮರ್ಚಯಂತಿ ॥೨೧॥

ಸ್ವಚ್ಛೇಂದುಧಾಮಪರಿಮಂಡಲಸನ್ನಿಭೋರು
ನಿಷ್ಟಪ್ತರುಕ್ಮನರದಂಡಸುಮಂಡಿತೈಶ್ಚ ।
ಸಚ್ಛತ್ರಪಂಕ್ತಿವರಚಾಮರಕೋಟಿಲೇಡಿ
ಭ್ರಾಜತ್ಪತಾಕನಿಕರೈರ್ವ್ಯಜನೈರಪಾರೈಃ - ॥೨೨॥

ಆದರ್ಶದರ್ಶವರನಾಟ್ಯಮಹೋತ್ಸವೈಶ್ಚ
ವಾದ್ಯಧ್ವಾನೈರ್ಜಿತಾಂಬುಧಿರವೈರ್ವರದುಂದುಭೀನಾಂ ।
ಸತ್ಕಾಹಲೈರ್ವರಮೃದಂಗ ಸುಶಂಖನಾದೈಃ
ಸಂಘೋಷ್ಯ ಸಂಕರಮಹಾಲಯಮಧ್ಯಮೇವಂ ॥೨೩॥

---

ಸಮಸ್ತನಾಗಗಳೂ ಸುವರ್ಣಮಯವಾದ ಬಳೆಯಂತೆ ಸುಂದರತಮವಾದ ಶಿವಲಿಂಗದ ಸುತ್ತಲೂ ಕುಳಿತು, ತಮ್ಮ ಹಣೆಯ ಮೇಲಿರುವ ನಾಗರತ್ನಗಳ ಕಾಂತಿ ಯಿಂದ, ಅದನ್ನು ಹೊಳೆಯುತ್ತಿರುವ ಸುಂದರೇಶ್ವರಲಿಂಗವನ್ನಾಗಿ ಮಾಡಿಕೊಂಡು ನಾನಾವಿಧವಾದ ಪೂಜೆಗಳಿಂದ ಅರ್ಚಿಸುತ್ತಿದ್ದರು. ॥೨೧॥

ಶುಭ್ರವಾದ ಚಂದ್ರಮಂಡಲದಂತೆ ದುಂಡಾಗಿ, ನಿರ್ದುಷ್ಟವಾದ, ಅಪರಂಜಿಯ ದಂಡದಿಂದ ಪ್ರಕಾಶಿಸುವ ಶ್ವೇತಚ್ಛತ್ರಿಗಳಿಂದಲೂ, ಹಾಗೆಯೇ ಛತ್ರಿಗಳ ತುದಿಯನ್ನು ಮುಟ್ಟುವಂತೆ ತೂಗಾಡುತ್ತಿರುವ ಪ್ರಸಿದ್ಧವಾದ ಪತಾಕೆಗಳಿಂದಲೂ, ಚಾಮರ ಗಳಿಂದಲೂ, ಬೀಸಣಿಗೆಗಳಿಂದಲೂ ಸ್ವಾಮಿಯನ್ನು ಉಪಚರಿಸಿದರು. ॥೨೨॥

ಹಾಗೆಯೇ ರತ್ನಗನ್ನಡಿಯನ್ನು ಸ್ವಾಮಿಗೆ ತೋರಿಸುತ್ತಾ, ಪೂಜಾಂತ್ಯದಲ್ಲಿ ನಾಟ್ಯವಾಡುತ್ತಾ ದುಂದುಭಿಗಳೇ ಮೊದಲಾದ ವಾದ್ಯಧ್ವನಿಗಳಿಂದ ಸಮುದ್ರಘೋಷ ವನ್ನು ಸಹ ಧಿಕ್ಕರಿಸುತ್ತಾ ತುತ್ತೂರಿ, ಮೃದಂಗ, ಶಂಖ ಮುಂತಾದುವುಗಳ ದಿವ್ಯ ಘೋಷದಿಂದ ಶಿವಾಲಯವನ್ನೇ ಪ್ರತಿಧ್ವನಿಗೊಳಿಸುತ್ತಾ ನಾಗದೇವತೆಗಳು ಭಗವಂತನನ್ನು ಉಪಚರಿಸಿದರು. ॥೨೩॥

ತಾರ್ಕ್ಶ್ಯತ್ರಿಕೈರ್ಹರಹರೇತಿರವೈರ್ಭುಜಂಗಾ
ನೃತ್ಯಂತಿ ಲಿಂಗಸವಿಧೌ ಮುದಿತಾಃ ಕೃತಾರ್ಥಾಃ ॥೨೪॥

ಶ್ರೀರುದ್ರ ವೀಣಾಯುತವಾಣಿಪಾಣಿ
ಪದ್ಮಪ್ರಭೋತ್ಥೈರ್ನಖರೈರ್ನಖಾಗ್ರೈಃ ।
ತದ್ರಕ್ತಿರಾಗೋತ್ತಮಗಾನಧಾರಾ
ನಾಮ್ನಾಂ ಚ ಶಂಭೋಶ್ಚ ನಯಂತಿ ಕಾಲಂ ॥೨೫॥

ತದಂಭಣ(?)ಸುನೀಲಿಮಾವಿಧುತ ಕಾಲಿಮಾನಂ ಕಚಃ
ಪ್ರಕರ್ಷಭುಜಗಾಂಗನಾಃ ಪರಿಲಸತ್ಕಪೋಲಶ್ರಿಯಃ ।
ಚಲದ್ವಲಯಮಂಡನೈಃ ಪ್ರಥಿತಕುಂತಲಾಂದೋಳನೈ
ರ್ನಯಂತಿ ಕಿಲ ವೀಣಯಾ ಶಿವಮಹೇಶಗಾನಾದರಾಃ ॥೨೬॥

ತಾ ನಾಗಾಭರಣೋರುಲಿಂಗ ಸದನೇ ನೃತ್ಯಂತಿ ನಾಗಾತ್ಮಜಾಃ
ನಾಗಾಸ್ಯಪ್ರಸಭೋರುಕಾಂಡ ಸಮುಹಾಪಾದೇ ಝ್ಝಣನ್ನೂಪುರೈಃ ।

---

ಶ್ರೀ ರುದ್ರವೀಣೆಯನ್ನು ಕೈಯ್ಯಲ್ಲಿ ಹಿಡಿದು ದಿವ್ಯಸ್ತುತಿಗಳನ್ನು ಬಾರಿಸುತ್ತಾ ತಮ್ಮ ಪ್ರಕಾಶಮಾನವಾದ ಉಗುರುಗಳಿಂದ ಆ ನಾಗದೇವತೆಗಳು ಶೋಭಿಸುತ್ತಿದ್ದರು. ಮತ್ತು ಆ ರಾಗ ತಾಳವನ್ನನುಸರಿಸಿ ಅನೇಕರು ನರ್ತನಮಾಡುತ್ತಿದ್ದರು. ನರ್ತನಕಾಲದಲ್ಲಿ ಕೆಲವರು ತುತ್ತೂರಿಯ ವಾದ್ಯಧ್ವನಿಯೊಡನೆ ಹರಹರ ಶಬ್ದ ಮಾಡುತ್ತಾ ಶಂಕರನ ಇನ್ನೂ ಇತರ ನಾಮಗಳನ್ನು ಪಠಿಸುತ್ತಾ ಕಾಲ ಕಳೆಯುತ್ತಿದ್ದರು. ॥೨೪-೨೫॥

ಅತ್ಯಂತ ಕಪ್ಪಾದ ತಲೆಗೂದಲುಗಳನ್ನು ಅಲುಗಾಡಿಸುತ್ತಾ, ಪ್ರಕಾಶಮಾನವಾದ ಕಪೋಲಗಳ ಕಾಂತಿಯಿಂದ ವಿರಾಜಿಸುವ ನಾಗಕನ್ನಿಕೆಯರು ಕೈಯ್ಯಲ್ಲಿ ವೀಣೆಯನ್ನು ಹಿಡಿದು, ಶಿವನಾಮಘಟಿತವಾದ ಹಾಡುಗಳನ್ನು ಬಾರಿಸುತ್ತಿರುವಾಗ ಅವರ ಕರ್ಣಕುಂಡಲಗಳು ತೂಗಾಡುತ್ತಲೂ, ಕೈಬಳೆಗಳು ಧ್ವನಿಗೈಯ್ಯುತ್ತಲೂ ಇರುತ್ತಿದ್ದುವು. ಈರೀತಿ ನಾಗಕನ್ನಿಕೆಯರು ವೀಣಾಗಾನದಿಂದ ಮಹಾದೇವನನ್ನು ಸ್ತುತಿಸುತ್ತಿದ್ದರು. ॥೨೬॥

ನಾಗಾಭರಣಗಳಿಂದ ಅಲಂಕೃತನಾದ ಪರಶಿವನ ಮುಂದೆ ನಾಗಕನ್ನಿಕೆಯರು ಬಾಯಿಯಲ್ಲಿ ಶಿವನಾಮಗಳನ್ನುಚ್ಚರಿಸುತ್ತಾ, ಕಾಲಿನಲ್ಲಿ ಗೆಜ್ಜೆಕಟ್ಟಿಕೊಂಡು ಧ್ವನಿ

ಪಶ್ಯೇಶೇತಿ ಹರೇತಿ ಶಂಕರಮಹಾದೇವೇತಿ ನಿತ್ಯಂ ಸದಾ
ವೀಣಾವೇಣು ಮೃದಂಗ ನಿಸ್ವನಲಯೈಃ ಸೋವೋರುಧಾಮಾನನಾಃ
॥೨೭॥

ಶೇಷೋಪ್ಯಶೇಷವದನೈರ್ಭುಜಗೋರುಭೂಷಂ
ಭೂಷೋಜ್ವಲಾಕ್ಷ ಭಸಿತೋತ್ತಮಭೂಷಿತಾಂಗಂ ।
ಯೋಷಾರ್ಧಕಾಯ ಸವಮಾಷ ನಿಕಾಶಕಂಠಂ
ತೋಷಾಯ ಶಂಕರಮಹೋ ಸ್ತುವತಿ ಪ್ರದೋಷೇ ॥೨೮॥

॥ ಶೇಷ ಉವಾಚ ॥

ದ್ವಿಜಿಹ್ವಫಣಿಭೂಷಣಂ ಭಸಿತಲಿಪ್ತಫಾಲೇಕ್ಷಣಂ
ಸುಪಂಕಜದಳೇಕ್ಷಣಂ ಪ್ರಥಿತಪೂಜಯಾ ತೋಷಣಂ ।
ಗರೋಲ್ಬಣವಿಶೇಷಣಂ ಮದನಕಾಲಸಂಹಾರಿಣಂ
ಕುರಂಗ ಶಿಶುಧಾರಿಣಂ ಸುರವರಾದ್ಯ ಸತ್ಕಾರಣಂ ॥೨೯॥

---

ಗೈಸಿ ನರ್ತನಮಾಡುತ್ತಿದ್ದರು. ಆಗ ವೀಣೆ, ಕೊಳಲು, ಮೃದಂಗ ಮೊದಲಾದುವು ಗಳು ಧ್ವನಿಗೈಯುತ್ತಿದ್ದುವು. ಆರೀತಿ ಪೂರ್ಣಚಂದ್ರನಂತೆ ಪ್ರಕಾಶಮಾನವಾದ ಮುಖಗಳಿಂದ ಅವರು ಭಕ್ತಿಯಿಂದ ನರ್ತನಮಾಡುತ್ತಿದ್ದರು. ॥೨೭॥

ಆದಿಶೇಷನೂ ಸಹ ಪ್ರತಿಪ್ರದೋಷಕಾಲದಲ್ಲಿಯೂ ತಪ್ಪದೆ, ನಾಗಾಭರಣ ವಿಶಿಷ್ಟನೂ, ಫಾಲಾಕ್ಷ, ಶುಭ್ರವಾದ ಭಸ್ಮ ಇವುಗಳಿಂದ ಅಲಂಕೃತವಾದ ದೇಹ ವುಳ್ಳವನೂ, ಅರ್ಧನಾರೀಶ್ವರನೂ, ಉದ್ದಿನ ರಾಶಿಯಂತೆ ಕಪ್ಪಾದ ಕಂಠವುಳ್ಳವನೂ ಆದ ಶಂಕರನನ್ನು ತಪ್ಪದೆ ಈರೀತಿ ಸ್ತುತಿಸುವನು. ॥೨೮॥

"ಮಹಾದೇವನೇ, ನೀನು ಎರಡು ನಾಲಿಗೆಗಳುಳ್ಳ ಸರ್ಪಗಳನ್ನೇ ಒಡವೆಯನ್ನಾಗಿ ಹೊಂದಿರುವೆ. ಶುಭ್ರವಾದ ಭಸ್ಮದಿಂದಲೂ, ಅಗ್ನಿನೇತ್ರದಿಂದಲೂ ಪ್ರಕಾಶಮಾನನಾಗಿರುವೆ. ಕಮಲದಂತೆ ನೇತ್ರವುಳ್ಳ ಮಹಾವಿಷ್ಣುವನ್ನು ಬಹಳವಾಗಿ ಸಂತೋಷಪಡಿಸಿರುವೆ. ಹಾಲಾಹಲವೆಂಬ ವಿಷವನ್ನೂ, ಮನ್ಮಥ, ಯಮ ಮುಂತಾದವರನ್ನೂ ಮೆಟ್ಟಿ ತುಳಿದಿರುವೆ. ಕೈಯಲ್ಲಿ ಬಾಲಜಿಂಕೆಯನ್ನು ಧರಿಸಿ, ಸಮಸ್ತ ದೇವತೆಗಳಿಗೂ ಮೂಲಕಾರಣನಾಗಿ ಶೋಭಿಸುತ್ತಿರುವೆ. ಇಂತಹ ನಿನ್ನನ್ನು ಸದಾ ಧ್ಯಾನಿಸುವೆನು ॥೨೯॥

ಮಾತಂಗಾನಂಗಭಂಗಾಂಧಕಪುರಭಗಯಮುಹನ್ ಪಾಹಿ ಮಾಮೀಶ
ದೃಷ್ಟ್ಯಾ
ವೃಷ್ಟ್ಯೈವೋತ್ಫುಲ್ಲಸಸ್ಯಂ ಪ್ರಭವತಿ ಹಿ ಯಥಾ ತದ್ವದೀಶಾನಶಂಭೋ ।
ದುಃಖೈ ರೋಗಾದಿರಾಗೈರಸುತನುವ್ಯಸನೈರಾತ್ತಪಾಪಂ ಮಹೇಶ ।
ತ್ವತ್ಪಾದಾಬ್ಜಾವಲೋಕಾನ್ನಹಿ ಮಮ ಸುಕೃತೈರ್ಲೋಕಸಂಘೈಃ ಫಲಂ
ಮೇ ॥೩೦॥

॥ ಶ್ರೀ ಸ್ಕಂದ ಉವಾಚ ॥

ಶ್ರೀ ಹಾಟಕೇಶಸಮಧಿಷ್ಠಿತನಾಗಲೋಕೇ
ಪಾಪಾದ್ಭಯಂ ನ ಗರುಡಾದಪಿ ಪನ್ನಗಾನಾಂ ।
ನಾಗಾ ನಗಾರಿಕರವಜ್ರಮಹೋರುಧಾರಾ
ಸಂಪಾತನಾಚ್ಚ ಸುಖಿನಃ ಶಿವಪೂಜಯಾ ತೇ ॥೩೧॥

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಪಾತಾಳೇ
ನಾಗ ಸಮೂಹಕೃತ ಶಿವಾರಾಧನವರ್ಣನಂ ನಾಮ
ಸಪ್ತವಿಂಶೋಽಧ್ಯಾಯಃ

---

ಗಜಾಸುರ, ಮನ್ಮಥ, ಅಂಧಕಾಸುರ, ತ್ರಿಪುರಾಸುರರು, ಭಗನೆಂಬ ದೇವತೆ, ಯಮ ಇವರ ದರ್ಪವನ್ನೆಲ್ಲಾ ನಾಶಗೊಳಿಸಿದ ಮಹೇಶ್ವರನೇ, ನನ್ನನ್ನು ಕಾಪಾಡು. ಮಳೆಯಿಂದ ಹೇಗೆ ಸಸ್ಯಗಳು ಬೆಳೆದು ಫಲಕೊಡುವುವೋ, ಅದರಂತೆ ನಿನ್ನ ಕೃಪಾ ಬಲದಿಂದ ನನ್ನ ರೋಗದುಃಖಾದಿಗಳು ಕಣ್ಮರೆಯಾಗಿ, ಶಾರೀರಕವಾದ ಮತ್ತು ಮಾನಸಿಕವಾದ ಸಕಲ ಪಾಪಗಳೂ ನಿವಾರಣೆಯಾಗುವುವು. ನಿನ್ನ ಪಾದಪದ್ಮಗಳ ದರ್ಶನವನ್ನು ಬಿಟ್ಟರೆ ಮತ್ತಾವುದೂ ನನ್ನನ್ನು ಕಾಪಾಡಲಾರದು. ಇತರ ಪುಣ್ಯ ಕಾರ್ಯಗಳು, ಜನಸಮೂಹಗಳು ನನಗೆ ಯಾವ ಫಲವನ್ನೂ ಕೊಡಲಾರವು. ಮಹಾದೇವನೇ, ನೀನೊಬ್ಬನೇ ನನ್ನನ್ನು ರಕ್ಷಿಸುವವನು." ॥೩೦॥

ಈರೀತಿ ಪ್ರಾರ್ಥಿಸುತ್ತಾ ಆದಿಶೇಷನೊಡನೆ ಸಕಲ ನಾಗಗಳೂ ಹಾಟಕೇಶ್ವರ ಲಿಂಗವನ್ನು ಪೂಜಿಸುತ್ತಿರಲು, ಹಾಟಕೇಶ್ವರನ ದಯೆಯಿಂದ ಆ ನಾಗಗಳಿಗೆ ಪಾಪ ರಾಶಿಯಿಂದಾಗಲಿ, ಗರುಡನಿಂದಾಗಲಿ, ಇಂದ್ರನ ವಜ್ರಾಯುಧದಿಂದಾಗಲಿ, ಭಯ

ತೋರಲಾರದು. ಸರ್ವದಾ ಸೌಖ್ಯವನ್ನನುಭವಿಸುತ್ತಾ ಪರಶಿವನ ಭಕ್ತರಾಗಿ ಸದಾ ಕಾಲಕಳೆಯುತ್ತಿರುವರು ಎಂದು ಸ್ಕಂದದೇವನು ಜೈಗೀಷವ್ಯಾದಿಗಳಿಗೆ ಹೇಳಿದ ಮಾತನ್ನು ಸೂತಮಹರ್ಷಿಗಳು ಶೌನಕಾದಿಗಳಿಗೆ ವಿವರಿಸಿ ಹೇಳಿದರು. ||೩೧||

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ನಾಗಗಳು ಶಿವಲಿಂಗವನ್ನು ಆರಾಧಿಸಿದ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಅಷ್ಟಾವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಹಾಟಕೇಶಂ ಸಮಭ್ಯರ್ಚ್ಯ ಶೇಷೋಶೇಷಮುಖೈಃ ಸ್ತುವನ್
ರುದ್ರಸೂಕ್ತೈರ್ಮಹಾದೇವಂ ಸಂಪೂಜ್ಯ ಪರಮೇಶ್ವರಂ ॥೧॥

ಬಿಲ್ವಪತ್ರಾಂಬುಜೈಶ್ಚೈವ ಉತ್ಪಲೈಃ ಕುಮುದೈಸ್ತಥಾ ।
ಗಂಧೈಶ್ಚ ಧೂಪದೀಪೈಶ್ಚ ನೈವೇದ್ಯೈರ್ವಿವಿಧೈರಪಿ ॥೨॥

ಸ್ವಫಣಾಮಣಿಭಿರ್ನಿತ್ಯಂ ಪೂಜಯಾಮಾಸ ಶಂಕರಂ ।
ಪಂಚಾಮೃತಪ್ರವಾಹೈಶ್ಚ ಫಲಸಾರೈರ್ಮಹೇಶ್ವರಂ ॥೩॥

ಸ್ವಫಣಾಚ್ಛಾದಿಭಿ ರ್ನಿತ್ಯಂ ಛಾದಯಲ್ಲಿಂಗಮಸ್ತಕಂ ।
ತ್ರಿಪುಂಡ್ರಫಾಲವಿಲಸತ್ಸಹಸ್ರಾಸ್ಯೈಸ್ತದಾ ಮುದಾ ॥೪॥

---

## ಇಪ್ಪತ್ತೆಂಟನೆಯ ಅಧ್ಯಾಯ

ಆದಿಶೇಷನು ಈರೀತಿ ನಾನಾಮುಖಗಳಿಂದ ಹಾಟಕೇಶ್ವರಲಿಂಗವನ್ನು ಪೂಜಿಸಿ, ರುದ್ರಸೂಕ್ತಾದಿಗಳಿಂದ ಶಿವಲಿಂಗಕ್ಕೆ ಅಭಿಷೇಕಮಾಡಿ, ಬಿಲ್ವಪತ್ರೆ, ಕಮಲ, ನೈದಿಲೆ, ಗಂಧ, ಧೂಪ, ದೀಪ, ನೈವೇದ್ಯ ಮುಂತಾದ ಪೂಜಾಸಾಮಗ್ರಿಗಳಿಂದಲೂ, ಪಂಚಾಮೃತವೇ ಮೊದಲಾದ ಫಲಸಾರಗಳಿಂದಲೂ ಮಹಾದೇವನನ್ನು ತೃಪ್ತಿಪಡಿಸಿ, ಸ್ವಫಣಾಮಣಿಗಳಿಂದ ಶಿವಲಿಂಗವನ್ನು ಅಲಂಕರಿಸಿದನು. ॥೧-೨-೩॥

ಇದೇ ರೀತಿ ನಾಗರತ್ನಗಳಿಂದ ಶಿವಲಿಂಗವನ್ನು ಬೆಳಗಿಸುತ್ತಾ, ತನ್ನ ಸಾವಿರ ಮುಖಗಳಲ್ಲಿಯೂ ಭಸ್ಮತ್ರಿಪುಂಡ್ರವನ್ನಿಟ್ಟು, ಸಹಸ್ರ ಮೌಳಿಯಲ್ಲಿಯೂ ಮಾಣಿಕ್ಯ

ಸಹಸ್ರಮೌಲಿಮಾಣಿಕ್ಯೈಃ ಶಂಭೋರ್ಗರ್ಭಗೃಹಂ ತದಾ ।
ದೀಪಯಾಮಾಸ ಶೇಷೋಽಸಾವಶೇಷಭುಜಗೇಶ್ವರಃ ॥೫॥

ಛತ್ರೈಶ್ಚ ಚಾಮರೈರ್ದಿವ್ಯೈಃಪತಾಕಾದರ್ಶವಾದ್ಯಕೈಃ ।
ನಾಗಕನ್ಯಾನರ್ತನೈಶ್ಚ ವೀಣಾದಿಧ್ವನಿಭಿಸ್ತಥಾ ॥೬॥

ಸ್ತುವಂತಿ ಗಾನಧಾರಾಭಿರ್ನಾಗಕನ್ಯಾ ಮಹೇಶ್ವರಂ ।
ಅಸ್ತದೋಷೇ ಪ್ರದೋಷೇಽಸೌ ನಿತ್ಯಂ ಸಂಪೂಜಯದ್ಧರಂ ॥೭॥

ಏವಂ ಸ್ತುವನ್ನುವಾಸಾಸೌ ಶೇಷೋ ಭುಜಂಗಮುಸ್ಸುಖಂ ।
ಸಹ ಮಾತ್ರಾ ಮುದಾ ತತ್ರ ಹಾಟಕೇಶಂ ಪ್ರಪೂಜಯನ್ ॥೮॥

ಚಕ್ಷುಶ್ಶ್ರವಾಸ್ತೇ ಶೃಣ್ವಂತಿ ಶಿವನಾಮಸುಧಾರಸಂ ।
ಚಕ್ಷುಷೈವ ಹಿ ಪಶ್ಯಂತಿ ಪೂಜಿತಂ ಲಿಂಗಮೈಶ್ವರಂ ॥೯॥

ಸಹಸ್ರಾಸ್ಯೋಽಪ್ಯಯಂ ಶೇಷೋ ಧನ್ಯೈಃ ಸ್ವೈರ್ನೇತ್ರಮಂಡಲೈಃ ।
ವೀಕ್ಷ್ಯೈವ ಹಾಟಕೇಶಾಖ್ಯಂ ಸರ್ವಾಂಗೋತ್ಫುಲ್ಲಕಂಟಕಃ ॥೧೦॥

---

ವನ್ನು ಧರಿಸಿ, ಆದರ ಕಾಂತಿಯಿಂದ ಗರ್ಭಗೃಹವನ್ನೆಲ್ಲಾ ಹೊಳಪುಗೂಡಿಸುತ್ತಾ ಆದಿಶೇಷನು ಶೋಭಿಸುತ್ತಿದ್ದನು. ॥೪-೫॥

ಛತ್ರಿ, ಚಾಮರ, ಧ್ವಜ, ಪತಾಕೆ, ಕನ್ನಡಿ, ವಾದ್ಯಗಳು ಮುಂತಾದುವುಗಳಿಂದಲೂ, ನಾಗಕನ್ಯೆಯರ ನರ್ತನಗಳಿಂದಲೂ ಪರಶಿವನನ್ನು ಉಪಚರಿಸಿದನು. ಹಾಗೆಯೇ ನಾಗಕನ್ಯೆಯರು ನಿತ್ಯವೂ ಪ್ರದೋಷಕಾಲನಲ್ಲಿ ತಮ್ಮ ಗಾನಧಾರೆಗಳಿಂದ ನರ್ತನಮಾಡುತ್ತಾ ಪರಮೇಶ್ವರನನ್ನು ಸ್ತುತಿಸುತ್ತಿದ್ದರು. ॥೬-೭॥

ಹೀಗೆ ಸರ್ಪಗಳು ಆದಿಶೇಷನೊಡನೆಯೂ, ತಾಯಿಯಾದ ಕದ್ರೂದೇವಿಯೊಡನೆಯೂ ಹಾಟಕೇಶ್ವರಲಿಂಗವನ್ನು ಅರ್ಚಿಸುತ್ತಾ ಕಾಲಕಳೆದರು. ಸರ್ಪಗಳು ನಿತ್ಯವೂ ಶಿವಕಥೆಯನ್ನೇ ಆಲಿಸುತ್ತಾ, ಪೂಜಿತವಾದ ಶಿವಲಿಂಗವನ್ನು ದರ್ಶನ ಮಾಡುತ್ತಾ ಸಂತೋಷದಿಂದಿದ್ದವು. ಸಾವಿರ ಮುಖಗಳುಳ್ಳ ಆದಿಶೇಷನು ತನ್ನ ಕಣ್ಣುಗಳಿಗೆ ಹಾಟಕೇಶಲಿಂಗದ ದರ್ಶನದಿಂದ ಸಾರ್ಥಕತೆಯನ್ನು ಕಲ್ಪಿಸಿಕೊಂಡು ಆನಂದದಿಂದ ರೋಮಾಂಚ ಹೊಂದುತ್ತಾ ಸುಖದಲ್ಲಿದ್ದನು. ॥೮-೯-೧೦॥

ಏಕೈಕಾಸ್ಯೇನ ನಾಮ್ನೈಕಂ ಬಿಲ್ವೈಃ ಸಂಪೂಜಯದ್ಧರಂ ।
ನಾಮ್ನಾಂ ಸಹಸ್ರೈರೀಶಾನಾಂ ವಿಶ್ವೇಶಂ ಕರುಣಾಕರಂ ॥೧೧॥

ಸಂಸ್ತೌತಿ ವಿಪಶ್ಶೋ ನಿತ್ಯಂ ಪನ್ನಗಸ್ಸನ್ನಗೋತ್ತಮಃ ।
ಸ ಚಕ್ಷುಃಶ್ರವಸಾಂ ರಾಜಾ ಸಹಸ್ರಪರಿವತ್ಸರಂ ॥೧೨॥

ವಾಯ್ವಾಹಾರಃ ಸದಾ ಶೇಷೋ ಅಶೇಷವದನೈಃಸ್ತುವನ್ ।
ಭಕ್ತ್ಯೈವ ದೇವದೇವೇಶಂ ಸ ಸಮೀರಣಪಾರಣಃ ॥೧೩॥

ಸಮಾಕರ್ಣಯ ವಿಪ್ರೇಂದ್ರ ತತ್ಸ್ತುತಿಂ ಸಾವಧಾನತಃ ॥೧೪॥

॥ ಶೇಷ ಉವಾಚ ॥

ಸುರವರತಟನೀ ಜಟೋತ್ತಮಾಂಗಂ
ಸ್ಫುರದುಷ್ಣದ್ರವಿಶಂಬರಾಂಕಚೂಡಂ ।
ಅಕಪಟವಚನಾಂತನುಗ್ಯಪಾದಂ
ಕರಟಿತ್ವಕ್ಪಟಹಾಟಕಂ ಭಜಾಮಿ ॥೧೫॥

---

ಸರ್ಪರಾಜನಾದ ಆದಿಶೇಷನು ಪ್ರತಿದಿನವೂ ಹಾಟಕೇಶ್ವರಲಿಂಗಕ್ಕೆ ತನ್ನ ಪ್ರತಿಯೊಂದು ಮುಖದಿಂದಲೂ ಒಂದೊಂದು ಶಿವನಾಮವನ್ನುಚ್ಚರಿಸುತ್ತಾ, ಒಂದೊಂದು ನಾಮಕ್ಕೂ ಬಿಲ್ವಪತ್ರೆಯೊಂದನ್ನು ಪರಶಿವನಿಗೆ ಅರ್ಪಿಸುತ್ತಾ, ಕೊನೆಯಲ್ಲಿ ಭಕ್ತಿಯಿಂದ ಸ್ತೋತ್ರಮಾಡುತ್ತಿದ್ದನು. ಹೀಗೆ ಆದಿಶೇಷನು ಸಾವಿರವರ್ಷ ಪರ್ಯಂತ ಪರಶಿವಲಿಂಗವನ್ನಾರಾಧಿಸಿದನು. ॥೧೧-೧೨॥

ಅನಿಲಾಹಾರಿಯಾದ ಆದಿಶೇಷನು ನಿತ್ಯವೂ ತನ್ನ ಸಹಸ್ರವದನಗಳಿಂದಲೂ ಭಗವಂತನನ್ನು ಈರೀತಿ ಪ್ರಾರ್ಥಿಸುತ್ತಿದ್ದನು. ಎಲೈ ಜೈಗೀಷವ್ಯಮಹಾಮುನಿಯೇ, ಅವನು ಸ್ತುತಿಸಿದ ಕ್ರಮವನ್ನು ನಿನಗೆ ಈಗ ವಿವರಿಸಿ ಹೇಳುವೆನು, ಕೇಳು. ॥೧೩-೧೪॥

"ದೇವಗಂಗಾನದಿಯನ್ನೇ ಪವಿತ್ರವಾದ ಜಟೆಯಲ್ಲಿಟ್ಟು, ಪ್ರಕಾಶಮಾನವಾದ ಸೂರ್ಯನನ್ನೂ, ಹರಿಣಾಂಕನಾದ ಚಂದ್ರನನ್ನೂ ಶಿರದಲ್ಲಿಟ್ಟು, ಸತ್ಯಮಯವಾದ ವೇದಾಂತವಾಕ್ಯಗಳಿಂದ ಸ್ತುತ್ಯವಾದ ಪಾದಪದ್ಮವುಳ್ಳ, ಗಜಚರ್ಮಾಂಬರಧಾರಿಯಾದ ಹಾಟಕೇಶನನ್ನು ಸದಾ ಸೇವಿಸುವೆನು. ॥೧೫॥

ವರಹಾಟಕಯುಕ್ತ ಗೋಷ್ಠೀ
ನಟಮಾಶಾಸ್ಯಮುಮಾಸಹಾಯಕಂ ।
ನಿಟಿಲಾನಲದಗ್ಧಕಾಮಕಾಲಂ
ಚಟುಲಂ ಹರಹಾಟಕಧೂರ್ಜಟಿಂ ಭಜೇ ॥೧೬॥

ಪಟುವಟುಮುನಿಭಿರ್ನಿಷೇವ್ಯಮಾನಂ
ವಟತಟಕೇ ಕೃತೋಟಜಂ ಮಹೇಶಂ ।
ಅಘಟನಾಘಟನಾ ಪಟೀಯುಮಾಯಾ
ತಮಸಃ ಪಾಟನಹಾಟಕೇಶಮೀಕ್ಷೇ ॥೧೭॥

ತಟಿನ್ನಿಭಜಟಾಕುಟೀವಿಧೃತ ಸಾಮಿಸೋಮಪ್ರಭಾ
ವಿಭಾಸಿತಜಗತ್ತ್ರಯಂ ಸ್ಫುಟಕೃಪೀಟನೇತ್ರೋಜ್ಜ್ವಲಂ ।
ವಟಸ್ಥಮುಗಜಾಪತಿಂ ಕರಟಿಕೃತ್ತಿಭೂಷ್ಯತ್ಕಟಿಂ
ಸುಘೋಟಕಕೃತಾಗಮಂ ಸರಭಸಂ ಭಜೇ ಧೂರ್ಜಟಿಂ ॥೧೮॥

---

ದಿವ್ಯವಾದ ಸುವರ್ಣಸಭೆಯಲ್ಲಿ ಪಾರ್ವತಿಯೊಡಗೂಡಿ, ಸಂಧ್ಯಾತಾಂಡವವನ್ನು ನೆರವೇರಿಸುವ, ಮತ್ತು ತನ್ನ ಹಣೆಗಣ್ಣಿನ ಜ್ವಾಲೆಯಿಂದ ಮನ್ಮಥನನ್ನೂ, ಯಮನನ್ನೂ ನಾಶಗೊಳಿಸಿದ ಮಹಾಮಹಿಮನಾದ ಹಾಟಕೇಶ್ವರನನ್ನು ಸದಾ ಧ್ಯಾನಿಸುವೆನು. ॥೧೬॥

ಅನೇಕ ಋಷಿಪುತ್ರರಿಂದಲೂ, ಮುನಿವರ್ಯರಿಂದಲೂ ಸೇವಿಸಲ್ಪಡುತ್ತಾ, ಆಲದಮರದ ಅಧೋಭಾಗದಲ್ಲಿ ದಕ್ಷಿಣಾಮೂರ್ತಿರೂಪದಿಂದ ಆಶ್ರಮದಲ್ಲಿ ಕುಳಿತು, ದಿವ್ಯಜ್ಞಾನೋಪದೇಶ ಮಾಡಿ, ಅನಾದಿಸಿದ್ಧವಾಗಿ ಬಂದಿದ್ದ ಮುನಿಗಳ ಅಜ್ಞಾನವನ್ನು ನಾಶಗೊಳಿಸುವ ಮಹಾತ್ಮ ಹಾಟಕೇಶ್ವರನಿಗೆ ವಂದಿಸುವೆನು. ॥೧೭॥

ಮಿಂಚಿನಂತೆ ಹೊಳೆಯುವ ಜಟಾಕಲಾಪಗಳ ಮತ್ತು ಶಿರದಲ್ಲಿರುವ ಚಂದ್ರಕಲೆಯ ಹೊಳಪಿನಿಂದ ಜಗತ್ತ್ರಯಗಳನ್ನೂ ಪ್ರಕಾಶಗೊಳಿಸುವ ಶಂಕರನು ಹಣೆಗಣ್ಣಿನ ಉರಿಯಿಂದ ಸರ್ವನಾಶವನ್ನೂ ಮಾಡಬಲ್ಲನು. ಅಲ್ಲದೆ ಋಷಿಜನರ ಅಜ್ಞಾನನಿವಾರಣೆಗಾಗಿ ವಟಮೂಲದಲ್ಲಿ ಕುಳಿತು ಗಜಚರ್ಮಾಂಬರಧಾರಿಯಾಗುವನು. ತ್ರಿಪುರಾಸುರರನ್ನು ನಾಶಗೊಳಿಸುವ ಕಾಲದಲ್ಲಿ ವೇದಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡಿದ್ದನು. ಇಂತಹ ಧೂರ್ಜಟಿಯನ್ನು ಸರ್ವದಾ ಸ್ಮರಿಸುವೆನು. ॥೧೮॥

ಆಸತ್ಯಲೋಕಾವಧಿ ಮೌಲಿಮೇತ
ತ್ಪಾತಾಲಮೂಲಂ ಪರಶಾಂಗಲಿಂಗಂ ।
ಶ್ರೀ ಹಾಟಕೇಶಂ ಭಜ ವೇದಮೌಲಿ
ಜಾಲೈಕವೇದ್ಯಂ ಭುಜಗಾಂಗಭೂಷಂ ॥೧೯॥

॥ ಸೂತ ಉವಾಚ ॥

ಏವಂ ಶೇಷಸ್ತವಂ ಶ್ರುತ್ವಾ ತಲ್ಲಿಂಗೋತ್ತುಂಗಮೌಲಿತಃ ।
ನಿರ್ಗತ್ಯಾರ್ಕಸಹಸ್ರಾಭ ಉಮಯಾ ವೀಕ್ಷ್ಯ ತಂ ಹರಃ ॥೨೦॥

ಕಾಕೋದರಮಹಾಹಾರೋ ಹರಸ್ಸರ್ವಾಮರೇಶ್ವರಃ ।
ಲಲಾಟಪಟಲೋದ್ಭಾಸಿ ತ್ರಿಪುಂಡ್ರಕುಟಿಲಾಲಕಃ ॥೨೧॥

ಸ್ಫಟಿಕಾಚಲಸಂಕಾಶಃ ಕುಟಿಲಾಂತರ ದುಃಖದಃ ।
ಚಟುಲಾಜನಕಂಜಾಕ್ಷಃ ಕರಟಿತ್ವಕ್ಪಟೋ ಹರಃ ॥೨೨॥

ಮಹಾನಟೋತ್ಥನಿಕಟೋಹ್ಯಟ್ಟಹಾಸಗಿರಾವದತ್ ॥೨೩॥

---

ಶ್ರೇಷ್ಠವಾದ ಶಿವಲಿಂಗದ ಶಿರೋಭಾಗವು ಸತ್ಯಲೋಕವನ್ನು ಮೀರಿ ಮೇಲೆ ಹೋಗಿರುವುದು. ಹಾಗೆಯೇ ಅಧೋಭಾಗವು ಪಾತಾಳವನ್ನೂ ಕೊರೆದುಕೊಂಡು ಕೆಳಗೆ ವ್ಯಾಪಿಸಿರುವುದು. ಇಂತಹ ಪರಮಾತ್ಮನನ್ನು ಸಕಲ ವೇದ ವೇದಾಂಗಗಳೂ ಸರ್ವದಾ ಹೊಗಳುತ್ತಿರುವುವು. ಆದ್ದರಿಂದ ನಾಗಾಭರಣನೆನಿಸಿದ ಮಹಾದೇವನನ್ನು ನಾನು ತಪ್ಪದೆ ಪೂಜಿಸುವೆನು.” ॥೧೯॥

ಹೀಗೆ ನುಡಿದ ಆದಿಶೇಷನ ದಿವ್ಯಸ್ತುತಿಗೆ ಮೆಚ್ಚಿ ಸಹಸ್ರಸೂರ್ಯರಂತೆ ಪ್ರಕಾಶಿಸುವ ಶಂಕರನು ಪಾರ್ವತಿಯೊಡನೆ ಪ್ರತ್ಯಕ್ಷನಾದನು. ಆಗ ಮಹಾದೇವನು ದೊಡ್ಡ ಸರ್ಪ ವನ್ನೇ ಹಾರವನ್ನಾಗಿ ಮಾಡಿಕೊಂಡಿದ್ದನು. ಹಣೆಯಲ್ಲಿ ಅಗ್ನಿನೇತ್ರವು ಶೋಭಿಸು ತ್ತಿದ್ದಿತು. ಮುಖದಲ್ಲಿ ತ್ರಿಪುಂಡ್ರವೂ, ಮುಂಗುರುಳೂ ಪ್ರಕಾಶಿಸುತ್ತಿದ್ದಿತು. ಸ್ಫಟಿಕಾ ಚಲದಂತೆ ಶುಭ್ರನಾಗಿದ್ದನು. ಮೋಸಗಾರರಿಗೆ ಹಿಂಸಕನಂತಿದ್ದನು. ಸುಂದರಮುಖ ದಿಂದ ಮತ್ತು ಅರಳಿದ ಕಣ್ಣುಗಳಿಂದ ಕೂಡಿದ್ದನು. ಆನೆಯ ಚರ್ಮವನ್ನು ಹೊಂದಿ ದ್ದನು. ಇಂತಹ ದೇವಾಧಿದೇವನೂ, ನಾಟ್ಯಾಚಾರ್ಯನೂ ಆದ ಶಂಕರನು ಆದಿಶೇಷ ನನ್ನು ಕುರಿತು ಹೀಗೆಂದನು. ॥೨೦-೨೧-೨೨-೨೩॥

॥ ಹರ ಉವಾಚ ॥

ತವ ಸ್ತುತ್ಯಾನಯಾ ಶೇಷ ಸವಿಶೇಷಣಯಾ ಸ್ತುತಃ ।
ಅಶೇಷಭೂಮಿಧರಣೇ ಸಾಮರ್ಥ್ಯಂ ತೇ ದದಾಮ್ಯಹಂ ॥೨೪॥

ವಿಶ್ವಂಭರಾಧರೋಽಸಿ ತ್ವಂ ಸದಾ ವಿಶ್ವಾಧಿಕಾರ್ಚನಾತ್ ।
ಶಾಂಭವೋಽಸ್ಯುರಗಶ್ರೇಷ್ಠ ನ ತೇ ಭಾರೋ ಭವೇದ್ಭುವಃ ॥೨೫॥

ಇತಿ ಶಂಭೋರ್ವಚಶ್ಶ್ರುತ್ವಾ ಫಣಿರಾಜಃ ಪ್ರಣಮ್ಯ ತಂ ।
ಉವಾಚ ವಿನಯೋದಾರಂ ಕಾಕೋದರಧರಂ ಹರಂ ॥೨೬॥

॥ ಶೇಷ ಉವಾಚ ॥

ಕಾಂಕ್ಷೇಕ್ಷತಂ ತವ ವಿಭೋ ಪದಭಕ್ತಿಭಾವಂ
ಕಾಕೋದರೈಶ್ಚ ನ ದುರೋದರವತ್ಸುರಾದೀನ್ ।
ನಷ್ಟಾಂಸ್ತ್ರಿವಿಷ್ಟಪಗತಾನಪಿ ಭಕ್ತಿನಷ್ಟೋ
ನೇಷ್ಟೇಽಧುನಾ ತವ ಪದಂ ಶಿಪಿವಿಷ್ಟಮಿಷ್ಟಂ ॥೨೭॥

---

"ಆದಿಶೇಷನೇ, ಅರ್ಥಗರ್ಭಿತವಾದ ನಿನ್ನ ಈ ಸ್ತುತಿಯಿಂದ ನಾನು ತುಷ್ಟನಾಗಿರುವೆನು. ಈಗ ನಾನು ನಿನಗೆ ನಿಖಿಲ ಭೂಭಾರವನ್ನೂ ಧರಿಸುವ ಶಕ್ತಿಯನ್ನು ಅನುಗ್ರಹಿಸುವೆನು. ಲೋಕಾತೀತನಾದ ನನ್ನನ್ನು ನೀನು ಅರ್ಚಿಸಿದ್ದರಿಂದ, ಈ ಲೋಕಗಳ ಭಾರವನ್ನು ಹೊರುವ ಶಕ್ತಿಯನ್ನು ನಾನು ನಿನಗೆ ಕೊಡುವೆನು. ಸರ್ಪರಾಜನೇ, ನಿಜವಾಗಿಯೂ ನೀನು ಶಾಂಭವನೆನಿಸಿರುವೆ. ನಿನಗೆ ಈ ಭೂಭಾರವು ಭಾರವಾಗಿಯೇ ತೋರದಿರಲಿ" ಎಂದು ಶಂಕರನು ವರವಿತ್ತುದನ್ನು ಕೇಳಿ ಆದಿಶೇಷನು ಕಾಕೋದರಧರನಾದ ಶಂಕರನೊಡನೆ ಮತ್ತೆ ಹೀಗೆಂದನು. ॥೨೪-೨೫-೨೬॥

ಸರ್ವವ್ಯಾಪಿಯಾದ ಪರಮಾತ್ಮನೇ, ಈ ನಮ್ಮ ನಾಗಗಳೊಡನೆ ನನಗೆ ಸರ್ವದಾ ನಿನ್ನಲ್ಲಿ ನಾಶವಿಲ್ಲದ ಭಕ್ತಿಯುದಯಿಸಲಿ. ನಿನ್ನಲ್ಲಿ ಭಕ್ತಿಯುದ್ಭವಿಸದೆ ದೇವತೆಗಳ ಸ್ಥಾನವು ದೊರೆತರೂ ನನಗೆ ಅದು ಬೇಡ. ದೇವತೆಗಳ ಸ್ವರ್ಗವು ಆಗ ನನಗೆ ಕೇವಲ ಜೂಜುಗಾರರ ಕಟ್ಟೆಯಂತೆ ತೋರಿಬರುವುದು. ಆದಕ್ಕಾಗಿ ನಾನು ಯಾವಾಗಲೂ ಸರ್ವಾಂತರ್ಯಾಮಿಯಾದ ನಿನ್ನ ಪರಮಪದವನ್ನೇ ಅಪೇಕ್ಷಿಸುವೆನು. ॥೨೭॥

ಅಸ್ಮಾಭಿರೇತದಮಲಂ ಶಶಿಧಾಮಚೂಡ
ಮೀಡ್ಯಂ ಚ ವೇದಶಿಖರೈರ್ಹರ ಹಾಟಕಾಖ್ಯಂ ।
ಲಿಂಗಂ ಸುಮಂಗಲದಮಂಗಲಯಾ ಸಮೇತ
ಮಾಜೀವ್ಯಮೇತದಮಲಂ ಪಶುಪಾಶಮುಕ್ತ್ಯೈ ॥೨೮॥

ಕಿಂ ವಾ ಲೋಕೇನುಲೋಕೇ ನಿಗಮಶಿಖಶಿಖಾಭಾರಕಾರಾಗೃಹೋದ್ಯ
ನ್ಮಾರಾಪಾರಶರಾತುರಾಃ ಸುರವರಾ ಭಾರಾ ಭುವಃ ಕೇವಲಂ ।
ವೀರೋದಾರಕುಮಾರ ವಾಚಿ ಚತುರಾಃ ಸಂಸಾರವಾರ್ತಾರಸಾಃ
ಸ್ವಾರಾಜ್ಯಂ ಶಿವಪಾದಪಂಕಜವರಂ ನಾರಾಧಯಂತಿ ಕ್ಷಣಂ ॥೨೯॥

ಇತ್ಯುಕ್ತ್ವಾ ಗಿರಿಜಾಮನೋಹರವಚಃ ಶ್ರುತ್ವಾದಿಶೇಷೋ ಹರಂ
ನತ್ವಾಹ ಶ್ರುತಿವೀಕ್ಷಣೋಥ ಭಗವಂಶ್ವಾಜ್ಞಾಂಕರಿಷ್ಯೇ ತವ ।

---

ಸರ್ವಪಾಪಹರನೇ, ನಮಗೆ ಚಂದ್ರಶೇಖರನೆನಿಸಿ, ವೇದವೇದಾಂತಪ್ರಸಿದ್ಧವಾದ ಈ ಹಾಟಕೇಶ್ವರಲಿಂಗವು, ಸರ್ವಮಂಗಳೆಯೆನಿಸಿದ ಪಾರ್ವತಿಯ ಸಾನ್ನಿಧ್ಯದಿಂದ ಕೂಡಿ ಸರ್ವದಾ ಮಂಗಳಪ್ರದವಾಗಿರಲಿ. ಅಲ್ಲದೆ ಅಜ್ಞಾನಿಗಳಾಗಿ ಪಶುಗಳೆನಿಸಿರುವ ನಮ್ಮೆಲ್ಲರಿಗೂ ಮಾಯಾರೂಪವಾದ ಮತ್ತು ಸಂಸಾರರೂಪವಾದ ಪಾಶವು ಈ ಶಿವಲಿಂಗಾರ್ಚನೆಯಿಂದ ನಿವೃತ್ತವಾಗಿ ಕೊನೆಗೆ ನಿನ್ನ ಸಾನ್ನಿಧ್ಯರೂಪವಾದ ಮೋಕ್ಷಸುಖವು ಲಭಿಸಲಿ. ॥೨೮॥

ಲೋಕದಲ್ಲಿ ಅನೇಕ ವೇದವೇದಾಂತಗಳ ಅರ್ಥವನ್ನೆಲ್ಲಾ ತಿಳಿದು ಅದರಲ್ಲಿಯೇ ಮಗ್ನರಾಗಿರುವ ಅನೇಕ ಪಂಡಿತರಿರುವರು. ಆದರೇನು ? ಅವರು ಸಂಸಾರವೆಂಬ ಬಂಧನಕ್ಕೆ ಸಿಕ್ಕಿದವರಾಗಿ, ಕಾಮಬಾಣಗಳಿಗೆ ಸಿಕ್ಕಿ ನರಳುತ್ತಿರುವರು. ಅದರಂತೆಯೇ ಅನೇಕ ದೇವತೆಗಳೂ ಸಂಸಾರಪಾಶದಲ್ಲಿ ಬಂಧಿತರಾಗಿರುವರು. ಮತ್ತೆ ಕೆಲವರು ವೀರವಾಣಿಗಳನ್ನುಚ್ಚರಿಸುತ್ತಾ, ಬಾಲಭಾಷೆಗಳಿಂದ ತಾವೇ ತೃಪ್ತಿಹೊಂದುತ್ತಾ ಸಂಸಾರವನ್ನು ಸಾಗಿಸುತ್ತಿರುವರು. ವಿಚಾರಮಾಡಿದರೆ ಇವರೆಲ್ಲರೂ ಭೂಭಾರವೆಂದೇ ತಿಳಿಯಬೇಕು. ಯಾವ ಅಡ್ಡಿಯೂ ಇಲ್ಲದೆ ಚಕ್ರವರ್ತಿಪದವಿಯನ್ನು ನೀಡುವ ಶಂಕರನೆನಿಸಿದ ನಿನ್ನ ಪಾದಪಂಕಜವನ್ನು ಕ್ಷಣಕಾಲವಾದರೂ ಆರಾಧಿಸುವುದಿಲ್ಲ. ಅವರ ಜೀವನವು ವ್ಯರ್ಥವೇ ಅಲ್ಲವೇ ? ॥೨೯॥

ಹೀಗೆ ಪರಶಿವನನ್ನು ಸ್ತುತಿಸಿ, ವಂದಿಸಿ, ಚಕ್ಷುಶ್ಶ್ರವನೆನಿಸಿದ (ಕಿವಿಯೇ ಕಣ್ಣಾಗಿ ಉಳ್ಳವನು) ಆದಿಶೇಷನು, ಪರಶಿವನ ಆಜ್ಞೆಯಂತೆ ತಾನು ಭೂಭಾರವನ್ನು

ಕೋ ಭಾರೋ ಮಮ ತೇ ಪದಾಬ್ಜಯುಗಲಂ ಚಿತ್ತೇನ ಸಂಬಿಭ್ರತಃ
ಶಂಭೋ ಸರ್ಷಪವದ್ವಹಾಮಿ ಶಿರಸಾ ಕಾಂಕ್ಷೇದ್ಯ ಭಕ್ತಿಂತವ ॥೩೦॥

ನಾಗಾ ನಾಗಾಜಿನಾಂಗ ನಗಶಿಖರಮಹಾಚಾರುಚಾಪಾಂಘ್ರಿರೇಣುಂ
ಮೂರ್ಧನ್ಯಾಧಾಯ ಧನ್ಯಾ ಮದಮುದಿತಧಿಯಸ್ತ್ವಸ್ವರಿಚ್ಛಾವಿಹಾರಾಃ ।
ಹಾರಾಃ ಕಾಕೋದರಾಸ್ತೇ ಹರಪದವರಹೃದ್ಧ್ಯಾನಧಾರಾನುಸಾರಾ ।
ವೀರೋದಾರಕುಮಾರದಾರಸಹಿತಾಃ ಶಂಭುಪ್ರಸಾದಾದರಾಃ ॥೩೧॥

॥ ಶ್ರೀಸ್ಕಂದ ಉವಾಚ ॥

ಏವಂ ಬಲಂ ಬಿಲೇಶಯೇಶವರಸ್ಯ ದತ್ವಾ
ಬಾಲದ್ವಿಜಾವನಕರೋ ಬಲ ಏವ ಶಂಭುಃ ।
ಬಲಪ್ರಮಥನಾರ್ಚಿತೋ ಬಲಿಸುತಾರ್ಚ್ಯಲಿಂಗಾಲಯೋ
ಯಯೌ ದ್ರುತಮುಪೂಥವೋ ವರಭುಜಂಗಹಾರೋಜ್ಜ್ವಲಃ ॥೩೨॥

---

ವಹಿಸುವೆನೆಂದೂ, ಪರಶಿವಾನುಗ್ರಹದಿಂದ ಆ ಭಾರವು ತನಗೆ ಅತಿದುಃಖಜನಕವಾಗ ದೆಂದೂ, ಶಿವಪದಕಮಲಧ್ಯಾನದ ಬಲದಿಂದ ಭೂಭಾರವು ಸಾಸಿವೆಯ ಕಾಳಿನಷ್ಟು ಸೂಕ್ಷ್ಮವಾಗುವುದೆಂದೂ ನುಡಿದು, ಸರ್ವದಾ ಈಶ್ವರಭಕ್ತಿ ತನ್ನಲ್ಲಿರುವಂತೆ ಮತ್ತೆ ಪರಶಿವನನ್ನು ಪ್ರಾರ್ಥಿಸಿಕೊಂಡನು. ॥೩೦॥

ಹಾಗೆಯೇ ನಾಗಲೋಕದ ಸರ್ಪಗಳೆಲ್ಲವೂ ಗಜಚರ್ಮಾಂಬರಧಾರಿಯೂ, ಮೇರುವನ್ನೇ ಬಿಲ್ಲನ್ನಾಗಿ ಮಾಡಿಕೊಂಡವನೂ, ಆದ ಪರಶಿವನ ಪಾದಧೂಳಿಯನ್ನು ತಮ್ಮ ಶಿರದಲ್ಲಿಟ್ಟು, ಧನ್ಯರಾಗಿ ಸ್ವೇಚ್ಛಾವಿಹಾರಿಗಳೆನಿಸಿ, ಸರ್ವದುಃಖನಿರ್ಮುಕ್ತ ರಾಗಿ ಅಲ್ಲಿ ವಾಸಿಸತೊಡಗಿದರು. ಮತ್ತು ಸರ್ವದಾ ಪರಮೇಶ್ವರನನ್ನೇ ಆರಾಧಿಸುತ್ತಾ ಪರಶಿವಧ್ಯಾನ ಮಾಡುತ್ತಾ ಇದ್ದು, ಪತ್ನೀಪುತ್ರಾದಿ ಸಕಲ ಸಂಪತ್ತನ್ನೂ ಹೊಂದಿ ಆನಂದಮಯತೆಯಲ್ಲಿ ಮುಳುಗಿ ನಿಶ್ಚಿಂತರಾಗಿ ಪಾತಾಳದಲ್ಲಿ ನೆಲಸಿದರು. ॥೩೧॥

ಜೈಗೀಷವ್ಯಮಹಾಮುನಿಯೇ, ಈರೀತಿ ಪರಶಿವನು ತನ್ನನ್ನೇ ನಂಬಿ ಆರಾಧಿಸಿದ ಸಕಲ ಸರ್ಪಗಳಿಗೂ ವರವನ್ನೂ, ಬಲವನ್ನೂ ಅನುಗ್ರಹಿಸಿ, ವಿಷ್ಣ್ವಾದಿ ದೇವತೆಗಳಿಂದಲೂ, ಬಲಿಪುತ್ರನಾದ ಬಾಣನೇ ಮೊದಲಾದ ರಾಕ್ಷಸರಿಂದಲೂ ಪೂಜಿತನಾಗಿ, ನಾಗಾಭರಣನೆನಿಸಿಯೇ ತನ್ನ ನಿವಾಸಸ್ಥಾನವಾದ ಕೈಲಾಸಕ್ಕೆ ತೆರಳಿ

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಹಾಟಕೇಶ
ಪೂಜಾವರ್ಣನೇ ಶೇಷ ವರಪ್ರದಾನಂ ನಾಮ
ಅಷ್ಟಾವಿಂಶೋಽಧ್ಯಾಯಃ

---

ದನು ಎಂದು ಕುಮಾರಸ್ವಾಮಿಯು ಆದಿಶೇಷಾದಿ ಸರ್ಪಗಳನ್ನು ಪರಶಿವನು ರಕ್ಷಿಸಿದ ಕಥೆಯನ್ನು ಜೈಗೀಷವ್ಯಾದಿಗಳಿಗೆ ವಿವರವಾಗಿ ತಿಳಿಸಿದನು. ॥೩೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಹಾಟಕೇಶ್ವರಲಿಂಗಪೂಜಾವರ್ಣನೆಯ ಪ್ರಸ್ತಾವದಲ್ಲಿ ಪರಶಿವನು ಆದಿಶೇಷನೇ
ಮೊದಲಾದವರಿಗೆ ವರವಿತ್ತ ಪ್ರಕರಣವನ್ನು ತಿಳಿಸುವ ಇಪ್ಪತ್ತೆಂಟನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ಏಕೋನತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ಪಾತಾಳಮೂಲೇ ದೇವೇಶಂ ಪೂಜಯಂತಿ ಬಿಲೇಶಯಾಃ
ಭಸ್ಮರುದ್ರಾಕ್ಷಸಂಪನ್ನಾಃ ಶಿವಧ್ಯಾನಹತಾಶುಭಾಃ ।

ಗೂಢಪಾದಾ ಮೃಡಧ್ಯಾನಾದ್ದೃಢಭಕ್ತಿರತಾಸ್ಸದಾ
ವಾಸುಕಿಪ್ರಮುಖಾಸ್ಸರ್ವೇ ತಕ್ಷಕಾದ್ಯಾಶ್ಚ ಭೋಗಿನಃ ॥೨॥

ತಕ್ಷಕೇಶಂ ತಕ್ಷಕೋಪಿ ಸಂಪೂಜ್ಯಾಂಬುಜಬಿಲ್ವಜೈಃ ।
ಗಂಧಧೂಪೈಶ್ಚ ದೀಪೈಶ್ಚ ನೈವೇದ್ಯೈರ್ವಿವಿಧೈರಪಿ ॥೩॥

ನೀರಾಜನಾದ್ಯೈರ್ನಾಟ್ಯೈಶ್ಚ ನಾಗಕನ್ಯಾಕೃತೈಸ್ತದಾ ।
ಸಂಪೂಜ್ಯ ಸ್ತೌತಿ ಹೃಷ್ಟಾತ್ಮಾ ತಕ್ಷಕೇಶಂ ಸ ತಕ್ಷಕಃ ॥೪॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಪಾತಾಳಲೋಕದಲ್ಲಿ ದೇವದೇವನಾದ ಪರಶಿವನನ್ನು ಸಕಲ ನಾಗದೇವತೆಗಳೂ ನಿತ್ಯವೂ ತಪ್ಪದೆ ಪೂಜಿಸುತ್ತಿದ್ದರು. ವಾಸುಕಿ, ತಕ್ಷಕನೇ ಮೊದಲಾದ ಸರ್ಪವೀರರು ಭಸ್ಮರುದ್ರಾಕ್ಷಧಾರಿಗಳಾಗಿ ಶಿವಧ್ಯಾನದಿಂದ ಸಕಲ ವಿಪತ್ತುಗಳನ್ನೂ ಕಳೆದುಕೊಂಡವರಾಗಿ ಸಂತೋಷದಿಂದ ಅಲ್ಲಿ ವಾಸಿಸುತ್ತಿದ್ದರು. ॥೧-೨॥

ತಕ್ಷಕನಾದರೋ, ಕಮಲ, ಬಿಲ್ವಪಲ್ಲವ ಮುಂತಾದ ಪತ್ರಪುಷ್ಪಗಳಿಂದಲೂ, ಗಂಧ, ಧೂಪ, ದೀಪ, ನೈವೇದ್ಯ, ಮಂಗಳಾರತಿ, ನಾಗಕನ್ನಿಕೆಯರ ನಾಟ್ಯ ಇವೇ

॥ ತಕ್ಷಕ ಉವಾಚ ॥

ಶಂಭೋ ವಿರಿಂಚಿವರಮೌಲಿ ಕಪಾಲಪಾಣೇ
ಚಂಚತ್ಸುಧಾಂಶುಮುಕುಟೋಜ್ಜ್ವಲಿತೋತ್ತಮಾಂಗ ।
ಮಾಂ ಮೋಚಯಾಶು ದುರಿತಾತ್ಪರಿವಂಚಕೇಶ
ದೇವಸ್ತ್ವಮೇವ ಭಗವಾಂಶ್ಚ ಕುಲುಂಚನಾಥ ॥೫॥

ಮೃಡಂ ದೃಢತರಂ ಹೃದಾ ಸದಯಮಿಂದುಚೂಡಂ ಸದಾ
ಭಜಾಮಿ ಭಸಿತೋಜ್ಜ್ವಲಂ ಹೃದಯಪದ್ಮಸದ್ಮಾಂತರೇ ।
ಭುಜಂಗವರಕಂಕಣಂ ಕ್ವಣನನಿಸ್ವನಾಂಘ್ರಿಪ್ರಭಾ
ವಿಭಾಸಿ ನಟನಾನತಜ್ಜಗದುದಾರಸಂತಾಂಡವಂ ॥೬॥

---

ಮೊದಲಾದುವುಗಳಿಂದ ಪರಶಿವನನ್ನು ತೃಪ್ತಿಪಡಿಸಿ ಸಂತೋಷದಿಂದ ಈ ರೀತಿ ಸ್ತೋತ್ರಮಾಡಿದನು. ॥೩-೪॥

"ಶಂಭುವೇ, ಬ್ರಹ್ಮನ ಶಿರಃಕಪಾಲದಿಂದ ಪ್ರಕಾಶಿತವಾದ ಕರವುಳ್ಳವನೇ, ಪ್ರಕಾಶಮಾನವಾದ ಮತ್ತು ಚಂಚಲವಾದ ಚಂದ್ರಲೇಖೆಯುಳ್ಳ ಕಿರೀಟದಿಂದ ಶೋಭಿತವಾದ ಶಿರಃಪ್ರದೇಶವುಳ್ಳವನೇ, ಸರ್ವವನ್ನೂ ಅಪಹರಿಸತಕ್ಕವರಿಗೂ, ಗೃಹಕ್ಷೇತ್ರಾದಿಗಳನ್ನು ಕದ್ದೊಯ್ಯುವವರಿಗೂ ಯಜಮಾನನಾಗಿರುವವನೇ, ಷಡ್ಗುಣೈಶ್ವರ್ಯಪರಿಪೂರ್ಣನೇ, ನನ್ನನ್ನು ಕಾಪಾಡು. ॥೫॥

ಅತ್ಯಂತ ಶೂರನೂ, ದಯಾಶಾಲಿಯೂ, ಚಂದ್ರಶೇಖರನೂ ಎನಿಸಿದ ಪರಶಿವನಾದ ನಿನ್ನನ್ನೇ ನಾನು ಸದಾ ಸೇವಿಸುವೆನು. ಮಹಾದೇವನು ವಿಭೂತಿಯಿಂದ ಶುಭ್ರದೇಹಿಯಾಗಿರುವನು. ಸದಾ ಭಕ್ತರ ಹೃದಯಕಮಲದಲ್ಲಿ ವಾಸಿಸುವನು. ಸರ್ಪಗಳನ್ನೇ ಕೈಬಳೆಗಳನ್ನಾಗಿ ಮಾಡಿಕೊಂಡು, ಧ್ವನಿಮಾಡುವ ಕಾಲುಬಳೆಗಳನ್ನು ಧರಿಸಿ, ತನ್ನ ನಾಟ್ಯವೇಗದಿಂದ ಜಗತ್ತನ್ನೇ ಮರುಳುಗೊಳಿಸಿ ಬಗ್ಗಿಸುವ ಶಕ್ತಿಯುಳ್ಳವನು. ಇಂತಹ ಮಹಾತ್ಮನನ್ನು ನಾನು ನನ್ನ ಹೃದಯಕುಹರದಲ್ಲಿ ನಿಲ್ಲಿಸಿ ಸೇವೆಮಾಡುವೆನು. ॥೬॥

॥ ಸೂತ ಉವಾಚ ॥

ವೀಕ್ಷಾ ಶಿಕ್ಷಿತಮನ್ಮಥಂ ಸುರಗಣಾಧ್ಯಕ್ಷಂ ಮಹೋಕ್ಷಪ್ರಿಯಂ
ಪಕ್ಷೀಂದ್ರಪ್ರಿಯವಾಹವೀಕ್ಷಣಲಸತ್ಪಾದಾಂಬುಜಂ ಶಂಕರಂ ।
ಭಕ್ಷೀಭೂತವಿಷಂ ಸುದಕ್ಷಮಥನಂ ಭಿಕ್ಷುಪ್ರಿಯಂ ತಂ ಸದಾ
ಚಕ್ಷುಶ್ಶ್ರೋತ್ರವರಾಶ್ಚ ತಕ್ಷಕಮುಖಾಃ ಸಂಪೂಜಯಂತೀಶ್ವರಂ ॥೭॥

ಅನಂತೇಶಮನಂತೋಪಿ ಬಿಲ್ವೈಃ ಸಂಪೂಜ್ಯ ಭಕ್ತಿತಃ ।
ಗಂಧಪುಷ್ಪೈಶ್ಚ ವಿವಿಧೈರ್ನೈವೇದ್ಯೈರಪಿ ಶಂಕರಂ ॥೮॥

ಧೂಪದೀಪಾಂಗನಾನಾಟ್ಯೈಃ ಸ್ವಫಣಾಮಣಿವಿಭೂಷಣೈಃ ।
ಲಿಂಗಮಾಲಿಂಗ್ಯ ಭೋಗೇನ ಭೋಗಿವರ್ಯೋಸ್ತುವದ್ಧರಂ ॥೯॥

॥ ಅನಂತ ಉವಾಚ ॥

ಭಸ್ಮಾಂಗರಾಗಧೃತ ಬಾಲಕುರಂಗ ಸಂಗ
ಫಾಲಸ್ಫುಲಿಂಗ ಹರನೇತ್ರಪತಂಗಲಿಂಗ ।
ಗಂಗಾತರಂಗಮುಹದಿಂದು ಕೃತೋತ್ತಮಾಂಗ
ಮಾತಂಗಕೃತ್ತಿ ಭುಜಗಾಂಗದಹಾರ ಪಾಹಿ ॥೧೦॥

---

ಹೀಗೆ ತಕ್ಷಕನೇ ಮೊದಲಾದ ನಾಗಶ್ರೇಷ್ಠರು, ಕಡೆಗಣ್ಣಿನ ನೋಟದಿಂದಲೇ ನಾಶಮಾಡಿದ ಮನ್ಮಥನುಳ್ಳ, ದೇವದೇವನೂ, ವೃಷಭವಾಹನನೂ, ವಿಷಭಕ್ಷಕನೂ, ದಕ್ಷಾಧ್ವರಧ್ವಂಸಿಯೂ ಆದ ಪರಶಿವನನ್ನು ತಪ್ಪದೆ ಅರ್ಚಿಸುತ್ತಾ ಪೂಜಿಸುತ್ತಿದ್ದರು. ॥೭॥

ಅನಂತನಾಮಕನಾದ ಸರ್ಪಶ್ರೇಷ್ಠನು ಅನಂತೇಶ್ವರನೆಂಬ ಹೆಸರಿನ ಶಿವಲಿಂಗಕ್ಕೆ ಗಂಧ, ಪುಷ್ಪ, ಬಿಲ್ವ, ವಿವಿಧವಾದ ನೈವೇದ್ಯ, ಧೂಪದೀಪನಾಟ್ಯಾದಿಗಳನ್ನು ಸಮರ್ಪಿಸಿ, ಕೊನೆಯಲ್ಲಿ ತಾನೇ ಶಿವಲಿಂಗವನ್ನು ಸುತ್ತಿ ಆಲಿಂಗಿಸಿಕೊಂಡು ಈ ರೀತಿ ಸ್ತುತಿಸಿದನು. ॥೮-೯॥

" ಭಸ್ಮಭೂಷಿತಗಾತ್ರನೇ, ಎಳೆ ಜಿಂಕೆಯನ್ನು ಕರದಲ್ಲಿ ಹೊಂದಿರುವವನೇ, ಅಗ್ನಿನೇತ್ರನೆನಿಸಿದ ಹರನೇ, ಶಿವಲಿಂಗರೂಪಿಯೇ, ನಿನ್ನ ತಲೆಯು ದೇವಗಂಗೆಯ ಅಲೆಗಳಿಂದ ತುಂಬಿ ತುಳುಕಾಡುತ್ತಿರುವುದಲ್ಲವೆ? ಆನೆಯ ಚರ್ಮವನ್ನು ಹೊದ್ದು

ಪಾಪಾನಂಗ ಮತಂಗ ಭಂಗ ಸುಮಹಾಲಿಂಗಸ್ಥ ಶಂಭೋ ಸದಾ
ಶಾಂಗಾಂಗಸ್ಥಮಹೋಕ್ಷಸಂಗ ಭರಿತಾನಂದಾಂಗ ಗಂಗಾಧರ ।
ಮಾಂ ಪಾಹ್ಯದ್ಯ ಪರಾಂಧಕಸ್ಮರಹರಾನೇಯು ಪ್ರಭೋ ಶಂಕರ
ವಿಶ್ವಾಧೀಶ್ವರ ಚಂದ್ರಶೇಖರವಿಭೋ ಕಾರುಣ್ಯದೃಕ್ಸಂಗತಃ ॥೧೧॥

ಕಂಬಲಾಶ್ವತರೇಶಾನಂ ಕಂಬಲಾಶ್ವತರೌ ಸದಾ ।
ಮುದಾ ಪೂಜಯತಶ್ಶಂಭುಂ ಬಿಲ್ವಮಂದಾರಪಂಕಜೈಃ ॥೧೨॥

ತುಷ್ಟುವಾತೇ ಹಿ ಭುಜಗೌ ತಲ್ಲಿಂಗಂ ಭಕ್ತಿಭಾವತಃ ॥೧೩॥

॥ ಕಂಬಲಾಶ್ವತರಾವೂಚತುಃ ॥

ಭವಗದಶಮನಾದ್ಯವೈದ್ಯ ವೇದ
ಪ್ರತಿಪಾದ್ಯೈಶ್ವರ ವಿದ್ಯಯಾಭಿವೇದ್ಯ ।
ತ್ವಂ ಪರ್ಣಶದ್ಯ ಸಹಮಾನ ಮಹೇಶ್ವರಾದ್ಯ
ಆಶಾದ್ಯ ಸರ್ವತನುಗೋಽಪಿ ಅಭೇದ್ಯ ಶಂಭೋ ॥೧೪॥

---

ನಾಗಶರೀರಗಳನ್ನೇ ಹಾರವನ್ನಾಗಿ ಮಾಡಿಕೊಂಡಿರುವ ಮಹೇಶ್ವರನೇ, ನನ್ನನ್ನು ಕಾಪಾಡು. ॥೧೦॥

ಪಾಪಿಷ್ಠನಾದ ಮನ್ಮಥನೆಂಬ ಮದ್ದಾನೆಯನ್ನು ನಾಶಗೊಳಿಸಿದವನೇ, ಸದಾ ಶಿವಲಿಂಗದಲ್ಲಿಯೇ ನೆಲಸಿರುವವನೇ, ಆನಂದಸ್ವರೂಪನಾಗಿ ವೃಷಭವಾಹನನೂ, ಗಂಗಾಧರನೂ ಎನಿಸಿದ ಪರಶಿವನೇ, ಅಂಧಕಾಸುರನೇ ಮೊದಲಾದ ದುಷ್ಟರನ್ನು ಕೊಂದು, ಲೋಕೈಕವೀರನೆನಿಸಿದ ಚಂದ್ರಶೇಖರನೇ, ನಿನ್ನ ಕರುಣಾಪೂರಿತವಾದ ಕಟಾಕ್ಷದಿಂದ ನನ್ನನ್ನು ಉದ್ಧರಿಸು" ॥೧೧॥

ಇದೇ ರೀತಿ ಕಂಬಲ, ಅಶ್ವತರರೆಂಬ ಇಬ್ಬರು ಸರ್ಪಶ್ರೇಷ್ಠರು ಕಂಬಲಾಶ್ವತರೇಶ್ವರಲಿಂಗವನ್ನು ಬಿಲ್ವಾದಿಗಳಿಂದ ಪೂಜಿಸಿ, ಆ ಲಿಂಗವನ್ನು ಈ ರೀತಿ ಧ್ಯಾನ ಮಾಡಿದರು. ॥೧೨-೧೩॥

"ಸಂಸಾರವೆಂಬ ಮಹಾರೋಗವನ್ನು ಶಮನಗೊಳಿಸುವ ದಿವ್ಯವೈದ್ಯ ಸ್ವರೂಪಿಯೇ, ನಿನ್ನ ಸ್ವರೂಪಬೋಧಕವಾದ ವಿದ್ಯೆಯನ್ನು ಸಕಲ ವೇದಗಳೂ ಸಾರುತ್ತಿರುವವು. ನೀನು ಒಣ ಎಲೆಗಳ ರಾಶಿಯಲ್ಲಿಯೂ ಜನಿಸುವವನು. ಸಕಲ

ತಂ ಕಂಬಲಾಶ್ವತರಗೀತ ಸುಸಾಮ ಸೀಮ
ಶ್ರೀ ವಾಮದೇವ ವರಸಾಮರಥಂತರೇಡ್ಯಂ ।
ಶ್ರೀ ವ್ಯೋಮಕೇಶಮುಮಯಾ ಪರಿಪೂಜ್ಯ ಬಿಲ್ವೈ
ಸ್ತೌತ್ರ ತುಷ್ಟುವಾತೇ ಭುಜಗೌ ಮಹೇಶ್ವರಂ ॥೧೫॥

ಏಲಾಪುತ್ರೇಶ್ವರಂ ಲಿಂಗಮೇಲಾಪತ್ರೋರಗೇಶ್ವರಃ ।
ಸಂಪೂಜ್ಯ ಬಿಲ್ವೈಃ ಸ್ವಫಣಾಮಣಿಮಾಲೋಪಹಾರಕೈಃ ॥೧೬॥
ಸ್ತೌತಿ ದೇವಂ ಸದಾ ಭಕ್ತ್ಯಾ ಫಣಾಭೃಲ್ಲಿಂಗಮೈಶ್ವರಂ ॥೧೭॥

॥ ಏಲಾಪತ್ರ ಉವಾಚ ॥

ವಂದೇ ಕುರಂಗಕರಸಂಗಭವೋರುಭಂಗಂ
ಭಸ್ಮಾಂಗರಾಗಿತಮನಂಗಮತಂಗಭಂಗಂ ।
ಗಂಗಾತರಂಗ ವಿಲಸಜ್ಜಟಿಲೋತ್ತಮಾಂಗಂ
ಶ್ರೀ ಲಿಂಗಮೇತದಗಜಾಹೃದಯಾಂತರಂಗಂ ॥೧೮॥

---

ಕಷ್ಟಗಳನ್ನೂ ಸಹಿಸುವವನು. ಸರ್ವ ಶರೀರಾಂತರ್ವರ್ತಿಯಾಗಿದ್ದರೂ ಯಾರಿಂದಲೂ ಸುಲಭವಾಗಿ ತಿಳಿಯದವನಾಗಿರುವೆ. ಸಂಪೂರ್ಣವಾದ ಕರ್ಮಫಲವನ್ನನುಭವಿಸುವ ಜೀವಕ್ಕೆ ಪ್ರೇರಕನು ನೀನು. (ಅಲಂ ಸಂಪೂರ್ಣಂ ಯಥಾಭವತಿ ತಥಾ ಕರ್ಮಫಲ ಮತ್ತೀತಿ ಅಲಾದಃ ಜೀವಃ, "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ" ಇತಿ ಶ್ರುತೇಃ) ಇಂತಹ ನೀನು ನಮ್ಮನ್ನು ಸಲಹು. ॥೧೪॥

ವಾಮದೇವ, ರಥಂತರ ಮುಂತಾದ ದಿವ್ಯಸಾಮಗಳಿಂದ ಸ್ತುತವಾಗಿರುವ, ಕಂಬಲ, ಅಶ್ವತರ ನಾಮಕವಾದ ಶಿವಲಿಂಗಗಳನ್ನು ಕಂಬಲಾಶ್ವತರ ನಾಮಕರಾದ ಈ ನಾಗಶ್ರೇಷ್ಠರು ನಿತ್ಯವೂ ಪೂಜಿಸಿ ಮೇಲೆ ಹೇಳಿದಂತೆ ಸ್ತುತಿಸುತ್ತಿದ್ದರು. ॥೧೫॥

ಏಲಾಪತ್ರನೆಂಬ ಸರ್ಪರಾಜನು ಏಲಾಪತ್ರೇಶ್ವರನನ್ನು ಪೂಜಿಸಿ, ತನ್ನ ಫಣಾಮಣಿಗಳ ಮಾಲೆಯಿಂದ ಅಲಂಕರಿಸಿ, ಮನಃಪೂರ್ವಕವಾಗಿ ಈರೀತಿ ಸ್ತುತಿಸಿದನು. ॥೧೬-೧೭॥

ಕೈಯ್ಯಲ್ಲಿ ಎಳೆಜಿಂಕೆಯನ್ನು ಹಿಡಿದು ಸಂಸಾರದುಃಖವನ್ನೆಲ್ಲಾ ನಾಶಗೊಳಿಸುವವನೂ, ವಿಭೂತಿಯಿಂದ ಶುಭ್ರವಾದ ದೇಹವುಳ್ಳವನೂ, ಮನ್ಮಥನನ್ನು ನಾಶ

ಏಲಾಪತ್ರಸ್ತ್ರಿನೇತ್ರಂ ಸ್ವಕಫಣಿವಿಲಸದ್ಧನ್ಯಗಾತ್ರೋರುವೇಷ್ಟೈ
ಸ್ತಲ್ಲಿಂಗಾಕಂಠಲಗ್ನೋ ವಿಧೃತನವಫಣಾರತ್ನಸಂಸಾದಿತ ಶ್ರೀಃ ।
ಬಿಲ್ವೈಶ್ಚಂದನಲೇಪ ಸುಂದರಮಹಾಕಾವ್ಯೈಶ್ಚ ಶೀತೈಶ್ಶಿವಂ ।
ಸಂತೋಷ್ಯಾನುದಿನಂ ವಸತ್ಯುರಗಪಃ ಪುಣ್ಯೇ ಪ್ರದೋಷೇಪಿ ಚ ॥೧೯॥

ಕಾರ್ಕೋಟಕೇಶ್ವರಂ ಭಕ್ತ್ಯಾ ನಾಗಃ ಕಾರ್ಕೋಟಕೋರ್ಚಯನ್ ।
ಬಿಲ್ವಮಂದಾರಪುನ್ನಾಗ ಚಂಪಕಾಶೋಕಪಂಕಜೈಃ ॥೨೦॥

ಧೂಪದೀಪೋಪಹಾರಾದ್ಯೈಃ ಸ್ತೌತಿ ಶರ್ವಂ ಮಹೇಶ್ವರಂ ॥೨೧॥

॥ ಕಾರ್ಕೋಟಕ ಉವಾಚ ॥

ಶ್ರೀ ನೀಲಕಂಠ ಸಿತಭಸ್ಮವರಾವಕುಂಠ
ವೈಕುಂಠನೇತ್ರಕಮಲಾರ್ಚಿತಪಾದಪದ್ಮ ।
ಉತ್ಕಂಠ ಭಾವುಕ ಹೃದಾ ಪರಿಚಿಂತನೀಯ
ಪಾದಾಂಬುಜೇ ಪರಿಲುಠಾಮಿ ಚ ಸಂನಕಂಠ ॥೨೨॥

---

ಗೊಳಿಸಿದವನೂ, ಗಂಗಾನದಿಯ ಅಲೆಗಳಿಂದ ಪ್ರಕಾಶಿತವಾದ ಜಟಾಜೂಟವುಳ್ಳವನೂ, ಪಾರ್ವತಿಯ ಅಂತರಂಗದಲ್ಲಿ ಸದಾ ನೆಲಸಿರುವವನೂ ಆದ ಶ್ರೀಶಿವಮೂರ್ತಿಯನ್ನು ಸದಾ ಧ್ಯಾನಿಸುವೆನು. ॥೧೮॥

ಹೀಗೆಂದು ಧ್ಯಾನಿಸಿ ಏಲಾಪತ್ರನು ತನ್ನ ಹಣೆಯಲ್ಲಿರುವ ದಿವ್ಯರತ್ನಗಳಿಂದ ಶಿವಲಿಂಗವನ್ನು ತೊಳಗಿಸಿ ಬೆಳಗಿಸಿ, ದಿವ್ಯವಾದ ಗಂಧ, ಬಿಲ್ವ ಮುಂತಾದ ಪೂಜಾ ದ್ರವ್ಯಗಳಿಂದ ಪ್ರತಿನಿತ್ಯದ ಪ್ರದೋಷಕಾಲದಲ್ಲಿಯೂ ತಪ್ಪದೆ ಪೂಜಿಸುತ್ತಿದ್ದನು.॥೧೯॥

ಅದೇ ರೀತಿ ಕಾರ್ಕೋಟಕನೆಂಬ ನಾಗರಾಜನೂ ಸಹ ತನ್ನ ಹೆಸರಿನ ಕಾರ್ಕೋಟಕೇಶ್ವರಲಿಂಗಕ್ಕೆ ಬಿಲ್ವ, ಮಂದಾರ, ಸಂಪಿಗೆ, ಅಶೋಕ, ಕಮಲ ಮುಂತಾಧ ಪುಷ್ಪಗಳನ್ನು ಅರ್ಚಿಸಿ, ಧೂಪದೀಪಾದ್ಯುಪಚಾರಗಳಿಂದ ಸೇವಿಸಿ ಮಹಾದೇವನನ್ನು ಈ ರೀತಿ ಸ್ತುತಿಸಿದನು. ॥೨೦-೨೧॥

ನೀಲಕಂಠನೇ, ಭಸ್ಮವಿಭೂಷಿತಗಾತ್ರನೇ, ನೀನು ಮಹಾವಿಷ್ಣುವಿನ ನೇತ್ರ ಕಮಲದಿಂದ ಪೂಜಿತನಾದೆಯಲ್ಲವೆ! ಮಹೇಶ್ವರನೇ, ಅತಿಶಯವಾದ ಕ್ಷೇಮವನ್ನು ಬಯಸುವ ಮನಸ್ಸಿನಿಂದ ನಾನು ಯಾವಾಗಲೂ ನಿನ್ನ ಪಾದದ್ವಂದ್ವದಲ್ಲಿಯೇ ಬಿದ್ದು ಹೊರಳಾಡುವೆನು. ॥೨೨॥

ಧೃತರಾಷ್ಟ್ರೇಶ್ವರಂ ಲಿಂಗಂ ಧೃತರಾಷ್ಟ್ರೋ ಭುಜಂಗಮಃ ।
ಬಿಲ್ವಪಂಕಜಮಂದಾರಪುಷ್ಪೈರಭ್ಯರ್ಚ್ಯ ಶಂಕರಂ ॥೨೩॥

ನೈವೇದ್ಯೈರ್ಧೂಪದೀಪೈಶ್ಚ ನಿತ್ಯಮಭ್ಯರ್ಚ್ಯ ಶಂಕರಂ ।
ಸ್ತೌತಿ ಪ್ರಾಂಜಲಿರೀಶಾನಂ ಸ್ವಫಣಾಮವನಾಮಯನ್ ॥೨೪॥

॥ ಧೃತರಾಷ್ಟ್ರ ಉವಾಚ ॥

ಹರ ಹರ ಗರಕಂಠ ಪಾಹಿ ಪಾರ್ವತೀಶ
ತ್ರಿದಶಾಮೇಯ ಗುಣಾಕರ ಪ್ರಸೀದ ।
ಹರ ಹರ ಶಿತಿಕಂಠ ಸಾಮಿ ಸೋಮೋ
ಜ್ಜ್ವಲಿತೋತ್ತಂಸ ಯಮೀಂದ್ರ ಚಿತ್ತಹಸ್ತಂ ॥೨೫॥

ಗುಲಿಕೋಪಿ ಸದಾ ಲಿಂಗಮರ್ಚಯನ್ ಗುಲಿಕೇಶ್ವರಂ ।
ಬಿಲ್ವೈಃ ಫಣಾಮಣಿವ್ರಾತೈರ್ಧೂಪದೀಪನಿವೇದನೈಃ ॥೨೬॥

ಅಭ್ಯರ್ಚ್ಯ ಸ್ತೌತಿ ಹೃಷ್ಟಾತ್ಮಾ ಸುಲಿಂಗಂ ಸರ್ಪಪುಂಗವಃ ॥೨೭॥

---

ಧೃತರಾಷ್ಟ್ರನೆಂಬ ಸರ್ಪವು ತನ್ನ ಹೆಸರಿನ ಧೃತರಾಷ್ಟ್ರೇಶ್ವರಲಿಂಗಕ್ಕೆ ಬಿಲ್ವಾದಿ ಸುಗಂಧಮಯವಾದ ಪತ್ರಪುಷ್ಪಗಳನ್ನು ಸಮರ್ಪಿಸಿ, ಧೂಪದೀಪಾದಿಗಳಿಂದ ಪೂಜೆಮಾಡಿ, ಅನಂತರ ಶಿವಲಿಂಗದ ಎದುರಿನಲ್ಲಿ ತಲೆಬಗ್ಗಿ ನಿಂತು ಈರೀತಿ ಸ್ತೋತ್ರಮಾಡಿದನು. ॥೨೩-೨೪॥

ಪರಶಿವನೇ, ವಿಷಕಂಠನೇ, ಪಾರ್ವತೀಪತಿಯೇ, ದೇವತೆಗಳಿಗೆ ಸಂಪೂರ್ಣವಾಗಿ ಸದ್ಗುಣಗಳನ್ನು ಕೊಟ್ಟವನೇ, ಶಿತಿಕಂಠನೇ, ನೀನು ಚಂದ್ರನಿಂದ ಅಲಂಕೃತವಾದ ಜಟಾಜೂಟವುಳ್ಳವನಲ್ಲವೆ? ಜಿತೇಂದ್ರಿಯರಾದ ಮುನಿಗಳ ಮನಸ್ಸಿನಲ್ಲಿ ಹಂಸದಂತೆ ವಿಹರಿಸುವವನೇ, ನಮ್ಮನ್ನು ಕಾಪಾಡು. ॥೨೫॥

ಗುಲಿಕನೆಂಬ ಸರ್ಪವು ಗುಲಿಕೇಶ್ವರಲಿಂಗವನ್ನು ಬಿಲ್ವಾದಿಗಳಿಂದಲೂ, ಫಣಾಮಣಿಗಳಿಂದಲೂ, ಧೂಪದೀಪಾದಿಗಳಿಂದಲೂ ಅರ್ಚಿಸಿ, ಸಂತೋಷದಿಂದ ಈ ರೀತಿ ಪ್ರಾರ್ಥಿಸಿದನು. ॥೨೬-೨೭॥

ಸ ಶಂಖಚೂಡಃ ಶಶಿಚೂಡಮೀಶ
ಮೀಡ್ಯಂ ಸದಾ ವೇದವಚೋಭಿರೇವಂ ।
ಭಸ್ಮಾಂಗರಾಗಚ್ಛವಿಸನ್ನಿಕರ್ಷಾ
ದ್ವಿಕರ್ಷಯತ್ಯೇವ ತತೋಂಧಕಾರಂ ॥೨೮॥

ದೇವದೇವ ಪರಮೇಶ್ವರ ಶಂಭೋ
ವಿಶ್ವನಾಥ ಮಮ ನಾಥ ಸನಾಥಂ ।
ಮಾಂ ಕುರುಷ್ವ ದಯಯಾ ಘನಯಾ ತ್ವಂ
ಮನ್ಮಥಾಂತಕ ವಿಭೋ ಶಶಿಚೂಡ ॥೨೯॥

ಶಂಖಚೂಡೇಶ್ವರಂ ಲಿಂಗಂ ಶಂಖಚೂಡೋರ್ಚಯಂತ್ಸ್ವಯಂ ।
ಬಿಲ್ವಾಂಬುಜೈಃ ಸದಾ ಭಕ್ತ್ಯಾ ಭುಜಂಗೋ ಭಸ್ಮಭೂಷಣಃ ॥೩೦॥
ನೈವೇದ್ಯೈರ್ಧೂಪದೀಪೈಶ್ಚ ನೃತ್ಯನ್ ಸಂಸ್ತೌತಿ ಭಕ್ತಿತಃ ॥೩೧॥

॥ ಶಂಖಚೂಡ ಉವಾಚ ॥

ಶಂಭೋ ಕಂದರ್ಪದರ್ಪ ಜ್ವರಹರ ಪುರಹನ್ ಪಾಹಿ ಮಾಮೀಶದುಃಖಾ
ದ್ದುರ್ವಾರಾಖರ್ವಗರ್ವಂ ಜನಿಮೃತಿನಿವಹಂ ರೋಗಪಾಪಾದಿಯುಕ್ತಂ ।

---

ಶಂಖಚೂಡನೆನಿಸಿದ ಆ ಗುಳಿಕರಾಜನು ಪರಮಪೂಜ್ಯನಾದ ಪರಮೇಶ್ವರನನ್ನು ವೇದವಾಕ್ಯಗಳಿಂದ ಸ್ತುತಿಸಿ, ಭಸ್ಮಧಾರಣೆಯಿಂದ ಮನಸ್ಸನ್ನು ಶುದ್ಧಿಗೊಳಿಸಿಕೊಂಡು, ಹೃದಯಾಂತರ್ಗತವಾದ ಅಜ್ಞಾನವನ್ನೆಲ್ಲಾ ಕಳೆದುಕೊಂಡನು. ॥೨೮॥

" ದೇವದೇವನೇ, ಪರಶಿವನೇ, ಜಗದೊಡೆಯನೆ, ಮನ್ಮಥನಾಶಕನೇ, ಚಂದ್ರಶೇಖರನೇ, ದಯೆಯಿಂದ ನಮ್ಮನ್ನು ಕಾಪಾಡು. ಅನಾಥನಾದ ನನಗೆ ನೀನು ನಾಥನೆನಿಸು. ಅಪಾರವಾದ ದಯೆಯಿಂದ ನಮ್ಮನ್ನು ಸಲಹು." ॥೨೯॥

ಅದೇ ರೀತಿ, ಶಂಖಚೂಡನು ಶಂಖಚೂಡೇಶ್ವರಲಿಂಗವನ್ನು ಬಿಲ್ವಕಮಲಾದಿಗಳಿಂದ ಅರ್ಚಿಸಿ, ಸ್ವಯಂ ಭಸ್ಮಭೂಷಿತನಾಗಿ ಧೂಪದೀಪನೈವೇದ್ಯಾದಿಗಳಿಂದ ತೃಪ್ತಿಗೊಳಿಸಿ, ಶಿವಲಿಂಗದ ಮುಂದೆ ನಿಂತು ನರ್ತನ ಮಾಡುತ್ತಾ ಶ್ರೀಶಿವನನ್ನು ಈ ರೀತಿ ಹೊಗಳಿದನು. ॥೩೦-೩೧॥

ಪರಶಂಭುವೇ, ಮನ್ಮಥನ ಗರ್ವವನ್ನೂ ತ್ರಿಪುರಾಸುರರ ಪ್ರಾಣವನ್ನೂ

ಕಲ್ಪಾನಲ್ಪಜಲೋದ್ಭವೋದ್ಭವಮಹಾಸ್ಯಶ್ಚಾಲುಠಂತಂ ಸದಾ
ತನ್ಮೌಲಿಸ್ರಗಲಂಕೃತಾಂಗಕ ಮಹಾಲಿಂಗೋತ್ತಮಾಂಗ ಪ್ರಭೋ ॥೩೨॥

ಪಿಚಂಡಿಲೇಶ್ವರಾಖ್ಯಂ ಚ ವರಿವಸ್ಯಾಭರೈಸ್ತದಾ ।
ಸ್ತೌತಿ ದೇವಂ ಸಮಭ್ಯರ್ಚ್ಯ ನಾಗೋ ಹ್ಯಾನಂದತುಂದಿಲಃ ॥೩೩॥

ಮತ್ತಾಜಸ್ರಗಲಂಕೃತಾಂಗಕ ಮಹಾಭೂಷಾಹಿಪೂಷೋಜ್ಜ್ವಲ
ನ್ನೇತ್ರೋನ್ಮೇಷ ನಿಮೇಷಶೋಷಿತಜಗತ್ಪೋಷೇಂದುಚೂಡೋಜ್ಜ್ವಲ ।
ಪಾಹೀಶ ತ್ರಿದಶೋತ್ತಮೋತ್ತಮ ಸದಾ ಸೋಮ್ಯೈಕಸೀಮಾಸ್ತುತ
ಕಾಮಾಂಗಪ್ರಹರಾವ ಕಾಮದ ಸದಾ ಮಾಂ ವಾಸುದೇವ ಪ್ರಭೋ ॥೩೪॥

ವಾರಣೋಹ್ಯುರಗೇಂದ್ರೋಽಸೌ ವಾರಣತ್ವಗ್ವಸಾರ್ಚಕಃ ।
ನಿವಾರಣಕರಂ ದೇವಂ ಪಾಪಾನಾಂ ಕಾರಣಂ ಪರಂ ॥೩೫॥
ವಾರಣೇಶಂ ಸಮಭ್ಯರ್ಚ್ಯ ಬಿಲ್ವಾಪಚಿತಿಕಲ್ಪನೈಃ ।
ಮದವಾರಣವಕ್ತ್ರಾರ್ಯ ಪುತ್ರಂ ಸಂಸ್ತೌತಿ ಭಕ್ತಿತಃ ॥೩೬॥

---

ಅಪಹರಿಸಿದ ಮಹಾದೇವನೇ, ಅನೇಕ ದುಃಖಗಳಿಗೆ ಈಡಾಗಿ ಜನನಮರಣಗಳಿಗೆ ಅಧೀನನಾಗಿ ರೋಗಾದಿಗಳಿಗೆ ತುತ್ತಾಗಿ, ಸೃಷ್ಟಿಪ್ರಲಯಗಳ ಸುಳಿಯಲ್ಲಿ ಕಲ್ಪ ಪರ್ಯಂತವಾಗಿ ತೇಲಿ ಮುಳುಗುತ್ತಿರುವ ನನ್ನನ್ನು ಕಾಪಾಡು. ಪುಷ್ಪಮಾಲಾ ವಿಭೂಷಿತವಾದ ಶಿವಲಿಂಗವುಳ್ಳವನೇ, ನನ್ನನ್ನು ಸಲಹು. ॥೩೨॥

ಪಿಚಂಡಿಲವೆಂಬ ಸರ್ಪವು ಪಿಚಂಡಿಲೇಶ್ವರಲಿಂಗವನ್ನು ಪೂಜಿಸುತ್ತಾ ಆನಂದಪರವಶನಾಗಿ ಈ ರೀತಿ ಸ್ತುತಿಸಿತು. "ಬ್ರಹ್ಮನ ಶಿರಃಕಪಾಲವಿಶಿಷ್ಟವಾದ ರುಂಡಮಾಲೆಯುಳ್ಳವನೇ, ನಾಗಗಳು, ಸೂರ್ಯಚಂದ್ರರು, ಇವರುಗಳನ್ನೇ ಆಭರಣಗಳನ್ನಾಗಿ ಮಾಡಿಕೊಂಡಿರುವವನೇ, ಪ್ರಪಂಚವನ್ನೇ ಆನಂದಗೊಳಿಸುವ ಚಂದ್ರನನ್ನು ಕಿರೀಟದಲ್ಲಿ ಧರಿಸಿರುವವನೇ, ದೇವದೇವೋತ್ತಮನೆನಿಸಿ, ಮನ್ಮಥಾದಿಗಳ ಸೊಕ್ಕನ್ನು ಮುರಿದ ಮಹಾದೇವನೇ. ನನ್ನನ್ನು ರಕ್ಷಿಸು" ॥೩೪॥

ವಾರಣನೆಂಬ ಸರ್ಪರಾಜನು ಸರ್ವ ಪಾಪನಿವಾರಕವಾದ ವಾರಣೇಶ್ವರವೆಂಬ ಶಿವಲಿಂಗವನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸಿ, ಗಜಾನನಪಿತನಾದ ಪರಶಿವನನ್ನು ಅತ್ಯಂತ ಭಕ್ತಿಯಿಂದ ಈ ರೀತಿ ಸ್ತುತಿಸಿದನು. ॥೩೫-೩೬॥

॥ ನಾರದ ಉವಾಚ ॥

ಪಾಹೀಂದುದ್ಯುತಿಜೂಡ ದೇವ ತಟನೀಗರ್ವಾದಿನಿರ್ವಾಪಣ
ತ್ವಂ ಕಲ್ಯಾಣನಗಾತ್ತಸತ್ಕರಥನೋ ಜೇತಾ ಜಗತ್ಕಾರಣ ।
ಭಸ್ಮಾಹೀನ ಸುಭೂಷಣೋತ್ತಮ ಸದಾ ಕಾಮಾಂಗಸಂಹಾರಣ ।
ಸರ್ವಪ್ರಾಣಹರಾಂತಕ ಪ್ರಹರಣಾನ್ಮೇಯಾಂಘ್ರಿಪದ್ಮಾರುಣ ॥೩೭॥

ದ್ಯುತೀಶಂ ದ್ಯುತಿಕೋ ನಾಗಃ ಸಂಪೂಜ್ಯ ಪ್ರಮಥಾಧಿಪಂ ।
ಬಿಲ್ವಮಂದಾರ ಕಂಜಾದಿ ಮಾಲಾಜಾಲೋತ್ಪಲೈರಪಿ ॥೩೮॥

ಸ್ತೌತಿ ಪ್ರಸನ್ನಹೃದಯಃ ಫಣಿರಾಟ್ಫಣಿಭೂಷಣಂ ॥೩೯॥

ರಾಮಾಸಂಹನನಾರ್ಧಕಾಯವಿಲಸತ್ಸೋಮೋಜ್ಜ್ವಲನ್ಮೂರ್ಧಕ
ಧೂಮೋದ್ದಾಮ ಶಿರಃಕಪರ್ದಸುಮಹದ್ಧಾಮಾಂಕನೇತ್ರೋಜ್ಜ್ವಲ।
ಭೂಮಾನಂದಘನ ಪ್ರಸೀದ ಭಗವಂಸ್ತ್ವಂ ವ್ಯೋಮಕೇಶಶ್ರುತೇಃ
ಸೀಮಾ ಸಂಸ್ತುತಪಾದಪದ್ಮ ಮಮ ಹೃತ್ಕಾಮಪ್ರದಾವ ಪ್ರಭೋ ॥೪೦॥

---

"ಚಂದ್ರಶೇಖರನೂ, ದೇವಗಂಗೆಯನ್ನು ಜಟೆಯಲ್ಲಿ ಬಂಧಿಸಿ ಮೇರು ಗಿರಿಯನ್ನೇ ಒಂದು ಬಿಲ್ಲನ್ನಾಗಿ ಮಾಡಿಕೊಂಡು, ಜಗತ್ತನ್ನೇ ಜಯಿಸಿ ಭಸ್ಮಾಸುರ, ಮನ್ಮಥ ಮೊದಲಾದವರ ಪ್ರಾಣಗಳನ್ನು ಅಪಹರಿಸಿ ಪ್ರಲಯಕಾಲದಲ್ಲಿ ಸರ್ವ ಪ್ರಾಣಾಪಹಾರಮಾಡುವ ಮಹೇಶ್ವರನೇ, ವಿಶಾಲವಾದ ಪಾದಪದ್ಮವುಳ್ಳವನೇ, ನನ್ನನ್ನು ಸಲಹು" ॥೩೭॥

ಸುಂದರಿಯಾದ ಪಾರ್ವತಿಯನ್ನೇ ಅರ್ಧಶರೀರದಲ್ಲಿಟ್ಟು, ತಲೆಯಲ್ಲಿ ಪ್ರಕಾಶ ಮಾನವಾದ ಚಂದ್ರನನ್ನೂ, ಶಿರಸ್ಸಿನಲ್ಲಿ ಜಟಾಜೂಟವನ್ನೂ, ಹಣೆಯಲ್ಲಿ ಅಗ್ನಿ ಯನ್ನೂ ಧರಿಸಿ ರಂಜಿಸುವ ಆನಂದಸ್ವರೂಪಿಯೇ, ದಿಗಂಬರನೇ, ಸರ್ವವ್ಯಾಪಿಯೇ, ಅತಿಶಯವಾಗಿ ಸರ್ವರಿಂದಲೂ ಸ್ತುತವಾದ ಪಾದಪದ್ಮವುಳ್ಳವನೇ, ಸಕಲೇಷ್ಟಾರ್ಥ ಪ್ರದನಾದ ಮಹೇಶ್ವರನೇ, ನಮ್ಮನ್ನು ಕಾಪಾಡು. ॥೩೮-೩೯-೪೦॥

॥ ಸರ್ಪ ಉವಾಚ ॥

ಸರ್ಪೇಶಂ ವರಸರ್ಪೇಶಃ ಸಂಪೂಜ್ಯ ಶ್ರೀಫಲಚ್ಛದೈಃ ।
ನಿವೇದನೈರ್ಧೂಪದೀಪೈಸ್ಸಂಸ್ತೌತಿ ಪರಮಾದೃತಃ ॥೪೧॥

ಶಿಷ್ಟಾರ್ಚಿತಂ ಸಕಲಕಷ್ಟಹರಂ ಪ್ರಕೃಷ್ಟ
ಮೋಕ್ಷಪ್ರದಂ ಕಿಲ ಸದಾ ಶಿಪಿವಿಷ್ಟಲಿಂಗಂ ।
ಅಷ್ಟಾಕೃತಿಂ ಚ ಭಜತಾಂ ನ ಹಿ ದುಷ್ಟಭಾವೋ
ನಷ್ಟಾಶುಭಾ ಭುವಿ ಭವಂತಿ ಸದೈವ ಸರ್ಪಾಃ ॥೪೨॥

॥ ವಾಮನ ಉವಾಚ ॥

ವಾಮನೇಶಂ ತತ್ರ ಲಿಂಗಂ ವಾಮನೋ ಭುಜಗೋತ್ತಮಃ ।
ಬಿಲ್ವಾಂಬುಜೈಸ್ಸಮಭ್ಯರ್ಚ್ಯ ಸಂಸ್ತೌತಿ ಪರಮೇಶ್ವರಂ ॥೪೩॥

ಉಚ್ಚೈರ್ಘೋಷಾದಿ ಶೇಷಕ್ಷಿತಿಧರವರಧೃಕ್ಪೋಷಿತಾಶೇಷಲೋಕ
ಸೃಷ್ಟಿಸ್ಥಿತ್ಯಂತಕಾರ್ಯೇಷ್ವಪಿ ತರಿಮನಿಶಂ ಜಾಗರೂಕ ಪ್ರಭೋ ಮಾಂ ।
ವೇದಾರ್ಥೋತ್ತಮಹೇಷಘೋಷಿತ ಪದಾಂಭೋಜಪ್ರಭಾಭಾವತೋ
ವೇಷಾಕಾರಮಿದಂ ಸದಾ ತ್ರಿಭುವನಂ ಮನ್ಯೇ ಕಿಮನ್ಯೇನ ಮೇ ॥೪೪॥

---

ಸರ್ಪನಾಮಕನೆಂಬ ನಾಗರಾಜನು ಸರ್ಪೇಶ್ವರಲಿಂಗವನ್ನು ಬಿಲ್ವಪತ್ರೆಯೇ ಮೊದಲಾದ ಪೂಜಾದ್ರವ್ಯಗಳಿಂದ ಪೂಜಿಸಿ ಕೈಮುಗಿದು ನಿಂತು " ಶಿಷ್ಟರಿಂದ ಅರ್ಚಿತನಾಗಿ ಅವರ ಕಷ್ಟಗಳನ್ನೆಲ್ಲಾ ಪರಿಹರಿಸುವ ಸ್ವಾಮಿಯೇ, ನಿನ್ನ ಪೂಜ್ಯಲಿಂಗಾರಾಧನೆಯು ಭಕ್ತರಿಗೆ ಮುಕ್ತಿಯನ್ನು ನೀಡಬಲ್ಲುದಲ್ಲವೆ! ನಿನ್ನ ಅಷ್ಟಸ್ವರೂಪಗಳನ್ನು ಸದಾ ಭಜಿಸುವವರಲ್ಲಿ ದುರ್ಗುಣಗಳು ಎಂದೂ ನಿಲ್ಲಲಾರವು. ನಿನ್ನ ಆರಾಧನೆಯಿಂದಲೇ ಈ ಸರ್ಪಗಳು ಈಗ ಭಯದಿಂದ ದೂರರಾಗಿ ವಾಸಿಸುತ್ತಿರುವರು." ॥೪೧-೪೨॥

ವಾಮನನೆಂಬ ಸರ್ಪರಾಜನು ವಾಮನೇಶ್ವರವೆಂಬ ಶಿವಲಿಂಗಕ್ಕೆ ಬಿಲ್ವ, ಕಮಲ ಇವೇ ಮೊದಲಾದ ಪೂಜಾಸಾಮಗ್ರಿಗಳಿಂದ ಪೂಜೆಮಾಡಿ ಈ ರೀತಿ ಸ್ತುತಿಸಿದನು. “ ಭಯಂಕರವಾಗಿ ಧ್ವನಿಮಾಡುವವನೇ, ಆದಿಶೇಷನಿಗೆ ಭೂಭಾರವನ್ನು ಸಹಿಸುವ ಶಕ್ತಿಯನ್ನಿತ್ತವನೇ, ಸಮಸ್ತ ಲೋಕಗಳನ್ನೂ ಕಾಪಾಡುವವನೇ,

॥ ಖರ್ವಟ ಉವಾಚ ॥

ಖರ್ವಟೇಶಂ ಖರ್ವಟಾಖ್ಯೋ ನಾಗೋಽಭ್ಯರ್ಚ್ಯ ಸದಂಬುಜೈಃ ।
ಬಿಲ್ವಪತ್ರೈಸ್ಸದೇಶಾನಂ ಸದಾವಿಲಶಯೋತ್ತಮಃ ॥೪೫॥

ಸ್ತೌತಿ ವೇದಾಂತವಾಗ್ಗುಂಭೈರಂಭೋಜೈಃ ಪೂಜ್ಯ ಶಂಕರಂ ॥೪೬॥

ತ್ವದ್ಭೀಷಾ ಭೀಷಿತಾಸ್ತೇ ಸುರವರನಿಕರಾಶ್ಚಂದ್ರಸೂರ್ಯಾನಲೇಂದ್ರಾ
ಸ್ತ್ವದ್ಭಾಸಾ ಭಾಸತೇದಂ ಜಗದಿದಮಖಿಲಂ ಲೋಕಜಾಲೈರ್ಮಹೇಶ ।
ವಿಷ್ಣುಬ್ರಹ್ಮಮರುದ್ಗಣಾದಿ ಜನಕಃ ಸೋಽನೋಽಸಿ ಸರ್ವಾಂತರಃ
ಕಸ್ತ್ವಾಂ ಸ್ತೌತಿ ಮಹೇಶಸರ್ವತನುಭಾಕ್ ತ್ವಂ ನಿರ್ಗುಣೋಽಸ್ಯವ್ಯಯಃ॥೪೭॥

---

ನಾನು ನಿನ್ನ ಸೃಷ್ಟಿ, ಸ್ಥಿತಿ, ಲಯಕಾರ್ಯಗಳಲ್ಲಿ ಸಿಲುಕಿ ಅದರಿಂದ ತಪ್ಪಿಸಿಕೊಳ್ಳಲು ಅಸಮರ್ಥನಾಗಿರುವೆನು. ನಿನ್ನ ಪಾದಮಹಿಮೆಯನ್ನು ವೇದಗಳು ಕುದುರೆಗಳಂತಾಗಿ ಸರ್ವದಾ ಘೋಷಿಸುತ್ತಿರುವುವು. ಇಂತಹ ಮಹಾಮಹಿಮನಾದ ನಿನ್ನ ಪಾದ ಪ್ರಭಾವವು ನನಗೆ ಲಭಿಸಿದುದಾದರೆ, ಆಗ ನಾನು ನಿನ್ನ ನಿಜಸ್ವರೂಪವನ್ನು ತಿಳಿದು ಈ ಜಗತ್ತು ನಿನ್ನ ಒಂದು ವೇಷವೆಂದು ಭಾವಿಸುವೆನು. ಆಗಲೇ ನಿನ್ನ ಸಾಯುಜ್ಯವು ನನಗೆ ಲಭಿಸುವುದು. ॥೪೩-೪೪॥

ಖರ್ವಟೇಶ್ವರಮೂರ್ತಿಯನ್ನು ಖರ್ವಟನೆಂಬ ಸರ್ಪರಾಜನು ಕಮಲ, ಮತ್ತು ಬಿಲ್ವಾದಿಗಳಿಂದ ಪೂಜಿಸಿ, ಉಪನಿಷದರ್ಥಪ್ರತಿಪಾದಕಗಳಾದ ಮಾತುಗಳಿಂದ ಬಹಳವಾಗಿ ಸ್ತುತಿಸಿದನು. "ಸ್ವಾಮಿಯೇ, ನಿನ್ನ ಮೇಲಿನ ಭಯದಿಂದಲೇ ಸೂರ್ಯ ಚಂದ್ರಾಗ್ನಿಗಳೂ, ಹಾಗೆಯೇ ದೇವತೆಗಳೂ ತಮ್ಮ ತಮ್ಮ ಕಾರ್ಯದಲ್ಲಿ ನಿರತರಾಗಿ ಜಗತ್ತನ್ನು ರೂಪುಗೊಳಿಸುತ್ತಿರುವರು. ನಿನ್ನ ತೇಜಸ್ಸಿನಿಂದ ಈ ಜಗತ್ತೆಲ್ಲಾ ಪ್ರಕಾಶಿಸುತ್ತಿರುವುದು. ನಿನ್ನಿಂದಲೇ ವಿಷ್ಣು, ಬ್ರಹ್ಮ, ಮೊದಲಾದ ದೇವತೆಗಳೂ ಮರುದ್ಗಣಗಳೂ ಜನಿಸಿರುವರು. ನೀನು ಸ್ವಯಂ ನಿರ್ಗುಣನು. ಸರ್ವರ ಹೃದಯದಲ್ಲಿಯೂ ಅಡಗಿರುವವನು. ಇಂತಹ ನಿನ್ನನ್ನು ನಾವು ಹೊಗಳುವುದು ಹೇಗೆ? ಆದರೂ ಮಾಯಾಸಂಬಂಧದಿಂದ ಉಮಾಪತಿಯಾಗಿಯೂ, ಕೈಲಾಸ ನಿವಾಸಿಯಾಗಿಯೂ ತೋರುತ್ತಿರುವೆ. ಅಂತಹ ನಿನ್ನ ಸ್ವರೂಪವನ್ನು ಸ್ವಲ್ಪಮಟ್ಟಿಗೆ ವರ್ಣಿಸಿ ಆನಂದಪಡುವೆನು. ॥೪೫-೪೬-೪೭॥

ಕ್ಷಯದ್ವೀರ ಕಾಕೋದರಾಸಾರಹಾರ ಸ್ಫುರತ್ಸಾಸ್ಫುರ ಕರ್ಪೂರಗೌರಾವಹೀರ
ಪ್ರಭಾಕಾರ ತಾರೇಂದ್ರ ಸನ್ಮೌಳಿ ಗಂಗಾರಯೋಲ್ಲಾಸಿ ಲೀಲಾಲಕಾ ಜಾಲ-
ಮೂಲಾರ್ದ್ರ
ತಾಜೋತ್ತಮಾಂಗಾಬ್ಜನೇತ್ರಾರ್ಚಿತಾಂಘ್ರಿದ್ವಯಾನಂಗಭಂಗ ಪತಂಗ
ಸ್ಫುಲಿಂಗಾ-
ತ್ತಫಾಲ ಪ್ರಭಾಜಾಲನಿರ್ಮೂಲಿತಾಲೋಲಪಾಶಾತ್ತ
ಕಾಲತ್ರಿಲೋಕಾಕುಲಾಕಾರ ಮಾರವ್ಯಥಾಸಾರ
ಸಂಹಾರ ಉದ್ವೃತ್ತಹೃತ್ತ್ರೈಪುರಾಕಾರ ಗಂಗಾಧರಾಮೇಯ
ಮಾತಂಗ ಚರ್ಮಾಂಬರಾನೀಲದಳಾಕಾರ ಕಂಠಸ್ಫುರ
ತ್ಸಾಂದ್ರ ಗೌರೀಕುಚಾಶ್ಲೇಷ ಗಾಢಪ್ರಭಾವಾಂಗಸಂಜಾತ
ಸತ್ಕಂಠಕಾಂಕ ಪ್ರಭೋ ಪಾಹಿ ಮಾಂ ಪಾಹಿ ಮಾಂ ॥೪೯॥

---

ವಾಸುಕಿಯು ವಾಸುಕೀಶ್ವರಲಿಂಗವನ್ನು ನಾನಾರೀತಿಯಾಗಿ ಪೂಜಿಸಿ ಮಹೇಶ್ವರನನ್ನು ಹೀಗೆ ಹೊಗಳಿದನು. " ಸಕಲ ವೀರರನ್ನೂ ನಾಶಗೊಳಿಸಿದವನೇ, ನಾನಾವಿಧವಾದ ಸರ್ಪಗಳನ್ನೇ ಹಾರವನ್ನಾಗಿ ಉಳ್ಳವನೇ, ನೀನು ಕರ್ಪೂರ ರಾಶಿಯಂತೆ ಶುಭ್ರನಾಗಿರುವೆ, ಅತ್ಯಂತ ಪ್ರಕಾಶಮಾನವಾದ ಉಡುರಾಜ (ಚಂದ್ರ) ನನ್ನು ಶಿರದಲ್ಲಿ ಧರಿಸಿರುವೆ. ಗಂಗಾನದಿಯ ಅಲೆಗಳ ವೇಗದಿಂದ ನಿನ್ನ ಮುಂಗುರುಳು ಅತ್ಯಂತ ಚಂಚಲವಾಗಿರುವುದು. ಹಸಿಯದಾದ ಬ್ರಹ್ಮಕಪಾಲವನ್ನು ಸದಾ ನೀನು ಹಿಡಿದಿರುವೆ. ವಿಷ್ಣುವಿನ ನೇತ್ರಕಮಲದಿಂದ ಪೂಜಿತವಾದ ಪಾದಪದ್ಮವುಳ್ಳವನೇ, ನೀನು ಮನ್ಮಥನೆಂಬ ಚಿಟ್ಟೆಗೆ ಅಗ್ನಿಪ್ರಾಯನಾದವನು. ನಿನ್ನ ನೇತ್ರಾಗ್ನಿಯಿಂದ ಅನೇಕ ದುಷ್ಟರನ್ನೆಲ್ಲಾ ನೀನು ನಾಶಗೊಳಿಸಿರುವೆ. ನಿನ್ನ ಪಾಶದಿಂದ ಯಮನನ್ನು ಬಂಧಿಸಿದೆ. ಮೂರುಲೋಕಗಳನ್ನೂ ವ್ಯಾಕುಲಗೊಳಿಸುವ ಆಕಾರವುಳ್ಳವನೇ, ನೀನು ಮನ್ಮಥನ ಸತ್ವವನ್ನೆಲ್ಲಾ ಕ್ಷಣಕಾಲದಲ್ಲಿ ನಾಶಗೊಳಿಸಿದೆ. ಕೊಬ್ಬಿದ ತ್ರಿಪುರರನ್ನೆಲ್ಲಾ ಧ್ವಂಸಗೊಳಿಸಿದವನೇ, ಗಂಗೆಯನ್ನು ಧರಿಸಿದವನೇ, ನಿನ್ನ ದೊಡ್ಡ ದೇಹವು ಅತಿ ವಿಶಾಲವಾದ ಗಜಚರ್ಮದಿಂದ ಆವೃತವಾಗಿದೆ. ನಿನ್ನ ಕಂಠಪ್ರದೇಶವು ಅತಿಶಯ ವಾದ ಕಪ್ಪುಬಣ್ಣದಿಂದ ಹೊಳೆಯುತ್ತಿದೆ. ಪತ್ನಿಯ ಮೇಲಿನ ಪ್ರೀತಿಯಿಂದ ಕೂಡಿ ನೀನು ಪಾರ್ವತಿಯ ಕಠಿನವಾದ ಕುಚಗಳ ಆಲಿಂಗನದಿಂದ ತೃಪ್ತಿಪಡುವೆ. ಇಂತಹ ಮಹಾಮಹಿಮಾಶಾಲಿಯೇ, ನನ್ನನ್ನು ಸಲಹು. ನನ್ನನ್ನು ರಕ್ಷಿಸು. ॥೪೮-೪೯॥

ವಾಸುಕಿರ್ವಾಸುಕೀಶಾನಂ ಬಿಲ್ವೈರಭ್ಯರ್ಚ್ಯ ಶಂಕರಂ ।
ಸಂಸ್ತೌತಿ ಹೃಷ್ಟೋ ನಿಯತಂ ಕುಂಡಲೀಶೋ ಮಹೇಶ್ವರಂ ॥೪೮॥

ಏವಂ ಸಂಸ್ತುತ್ಯ ತೇ ಸರ್ಪಾಃ ಕಂದರ್ಪಹರಮೀಶ್ವರಂ ।
ಪಾತಾಲೇ ದಿವ್ಯಲಿಂಗೇಷು ಹಾಟಕೇಶಾದಿಷು ದ್ವಿಜ ॥೫೦॥

ವದಂತಿ ನಿಯತಂ ಶ್ವೇವಂ ಭುಜಂಗಾಃ ಶಾಂಭವೋತ್ತಮಾಃ ॥೫೧॥

॥ ಸರ್ಪಾ ಊಚುಃ ॥

ಅಸ್ಮಾಕಂ ಕುಲದೈವತಂ ಶಶಿಕಲಾಜೂಟಾನುಕೂಲೋದ್ಧತ
ಸ್ಫಾರಾಕಾರಭುಜಂಗಹಾರವಲಯಾಲಂಕಾರಲಿಂಗೋತ್ತಮಂ ।
ಘೋಟೀಭೂತಮಹಾಗಮಾಂತಶಿಖರಂ ಜೂಟೀಕೃತಾಹೀಶ್ವರಂ
ಪಾಟೀರದ್ರವಸಾರಚಂದನಲಸತ್ಕೋಟೀರಮೀಕ್ಷೇಮಹಿ ॥೫೨॥

॥ ಶ್ರೀ ಸ್ಕಂದ ಉವಾಚ ॥

ಏವಂ ಸರ್ಪೇಶ್ವರಾಸ್ತೇ ಸ್ವಫಣಾಮಣಿಗಣೈರಿಂದುಚೂಡೋರುಲಿಂಗಂ
ಬಿಲ್ವೈರ್ಮಂದಾರಪುಷ್ಪೈರ್ಹರಿಹರವಿಧಿಭಿಃ ಪೂಜಿತಂ ಶಂಕರಾಂಘ್ರಿಂ ।

---

ಹೀಗೆ ಪಾತಾಳಲೋಕದಲ್ಲಿರುವ ನಾಗಾಧಿಪತಿಗಳು ಮನ್ಮಥನಾಶಕನಾದ ಈಶ್ವರನನ್ನು ನಾನಾರೀತಿ ಪೂಜಿಸುತ್ತಾ, ಸ್ತುತಿಸುತ್ತಿದ್ದರು. ಮಿಕ್ಕ ಸಣ್ಣಪುಟ್ಟ ಸರ್ಪಗಳು ಈಶ್ವರಭಕ್ತಿಯುಳ್ಳವರಾಗಿ ಸರ್ವದಾ ಶಂಕರನನ್ನು ಈರೀತಿ ಸ್ತುತಿಸುತ್ತಿದ್ದುವು. ॥೫೦-೫೧॥

ಚಂದ್ರಕಲೆ, ನಾಗಾಭರಣ ಇವುಗಳಿಂದ ಅಲಂಕೃತವಾದ ಶಿರೋಭಾಗವುಳ್ಳವನೂ, ಕುದುರೆಗಳಂತಾದ ಸಮಸ್ತ ವೇದಗಳಿಂದಲೂ ನಾನಾರೀತಿಯಲ್ಲಿ ಸ್ತುತನಾದವನೂ, ಆದಿಶೇಷನನ್ನೇ ಜಟೆಗೆ ಕಟ್ಟಿ, ಶ್ರೀಗಂಧ, ಚಂದನ ಮುಂತಾದ ಸುಗಂಧದ್ರವ್ಯಗಳಿಂದ ಅಲಂಕೃತನಾದವನೂ ಆದ ಮಹೇಶ್ವರನೇ, ನಮ್ಮ ಆರಾಧ್ಯದೇವತೆಯು. ಇಂತಹ ದೇವತಾಸ್ವರೂಪವನ್ನೇ ನಾವು ಸರ್ವದಾ ದರ್ಶನಮಾಡುತ್ತಿರುವೆವು. ॥೫೨॥

ಹೀಗೆಂದು ಸದಾ ಸ್ತುತಿಸುತ್ತಾ ನಾಗಲೋಕದ ಸರ್ಪಗಳೆಲ್ಲವೂ ತಮ್ಮ ತಮ್ಮ ಫಣಾಮಣಿಗಳಿಂದ ಶಿವಲಿಂಗವನ್ನು ಅಲಂಕರಿಸುತ್ತಾ, ಬ್ರಹ್ಮವಿಷ್ಣ್ವಾದಿಗಳಿಂದಲೂ ಪೂಜಿತವಾದ ಶಿವಲಿಂಗವನ್ನು ತಾವೂ ಆರಾಧಿಸುತ್ತಾ, ತಮ್ಮ ದೇಹ

ಸ್ವೈರ್ಭೋಗೈಶ್ಚ ಭುಜಂಗಮೇಶ್ವರ ಮಹಾಲಿಂಗೋತ್ತಮಾಂಗೋಜ್ಜ್ವಲ
ತ್ಸೋಮೋತ್ತಂಸ ಸರಿದ್ವರೋದ್ಭವ ಮಹಾಶೀತಾದಿ ವಾತಾಶನಾಃ ॥೫೩॥

ಸರ್ಪಾಃ ಪರ್ವತನಂದಿನೀಸಹಚರಂ ಸಂಪೂಜ್ಯ ಬಿಲ್ವಾದ್ಯೈ
ರಚ್ಛೈಃ ಸ್ವೈರ್ಮಣಿಭಿರ್ವಿದೀಪಿತತಮಃ ಸ್ತೋಮಂ ಮಹೇಶಾಲಯಂ ।
ಕುರ್ವಂತಿ ಪ್ರಸಭಂ ಪ್ರದೋಷಸಮಯೇ ಶ್ರೀಹಾಟಕೇಶಾರ್ಚಕಾ
ಸ್ತೇನೈವ ಸ್ವಕದೇಹಜತ್ವಚಮಿಷಾತ್ಪಾಪಾದಿಭಿರ್ಮುಚ್ಯತೇ ॥೫೪॥

ತಿಷ್ಠಂತೀಶ್ವರಗಾತ್ರಭೂಷಣವರಾಃ ಸೌಖ್ಯೇನ ಪಾತಾಲಗಾಃ ॥೫೫॥

ಲೀಲಾಕಾರ ಕೃತಾನತೇಷು ಗದಜಾಪೀಡಾ ನ ಮೃತ್ಯೂದ್ಭವಾ
ನೋ ಜನ್ಮಾದಿಭಯಂ ಜರಾದಿಕಮಹೋ ಕದ್ರುದ್ರಸಂಸೇವನಾತ್ ।
ಏತೇನಾಕ್ಷಿಯುಗೇನ ದಿವ್ಯಗಿರಿಶಾಲಂಕಾರಲಿಂಗೋತ್ತಮಂ
ವೀಕ್ಷಂತಿ ಶ್ರುತಿಸಾರಶಂಕರಕಥಾಂ ಶೃಣ್ವಂತಿ ತೇ ಕದ್ರುಜಾಃ ॥೫೬॥

---

ವನ್ನು ಶಿವಲಿಂಗಕ್ಕೆ ಸುತ್ತಿ ಹೆಡೆಯನ್ನು ಮೇಲಿಟ್ಟು, ಈಶ್ವರ ಶಿರೋಭಾಗದಲ್ಲಿರುವ ಚಂದ್ರಕಲೆಯಿಂದಲೂ, ಗಂಗಾತರಂಗದಿಂದಲೂ ಶೀತಲವಾಗಿ ಬೀಸುವ ಮಂದ ಮಾರುತವನ್ನು ಸೇವಿಸುತ್ತಾ ಆನಂದದಿಂದಿದ್ದುವು. ॥೫೩॥

ಪಾತಾಲಗತವಾದ ಸರ್ಪಗಳು ಉಮಾಪತಿಯೂ, ದೇವದೇವನೂ ಆದ ಹಾಟಕೇಶ್ವರಲಿಂಗವನ್ನೂ, ಹಾಟಕೇಶ್ವರಾಲಯವನ್ನೂ, ನಾಗರತ್ನಗಳಿಂದಲಂಕರಿಸಿ ಅದರಿಂದಲೇ ಅಲ್ಲಿನ ಕತ್ತಲೆಯನ್ನೆಲ್ಲಾ ಹೋಗಲಾಡಿಸಿ, ಪ್ರದೋಷಕಾಲದಲ್ಲಿ ತಪ್ಪದೆ ಶಿವಲಿಂಗಾರ್ಚನೆ ಮಾಡುತ್ತಾ, ತಮ್ಮ ದೇಹವನ್ನು ಶಿವಲಿಂಗಕ್ಕೆ ಉಜ್ಜುವ ನೆಪದಿಂದ ಸರ್ವಪಾಪಮುಕ್ತರಾಗುತ್ತಿದ್ದುವು. ಅಲ್ಲದೆ ಸದಾ ಶಿವಗಾತ್ರಕ್ಕೆ ಅಲಂಕಾರಪ್ರಾಯವಾಗಿದ್ದು, ತನ್ನಿಮಿತ್ತಕವಾದ ಸೌಖ್ಯದಿಂದಲೇ ಕಾಲಕಳೆಯುತ್ತಿದ್ದವು. ॥೫೪-೫೫॥

ಪರಶಿವನನ್ನು ಪೂಜಿಸಿ ಭಜಿಸಿದವರಿಗೆ ರೋಗಭಯವಾಗಲಿ, ಮೃತ್ಯುಭೀತಿಯಾಗಲಿ ಇರಲಾರದು. ಈಶ್ವರಸೇವನೆಯಿಂದ ಹುಟ್ಟುಸಾವುಗಳ ಭಯದ ಲೇಶವೂ ತೋರುವುದಿಲ್ಲ. ಇದನ್ನರಿತೇ ಸರ್ಪಗಳು ಯಾವ ಕಣ್ಣುಗಳಿಂದ ಈಶ್ವರಲಿಂಗವನ್ನು ನೋಡಿ ಆನಂದಪಡುವುವೋ ಅದೇ ಕಣ್ಣುಗಳಿಂದಲೇ ಪವಿತ್ರವಾದ ಈಶ್ವರಕಥೆ

ಪಾತಾಲೇ ನಿಗಲೋಪಮೇಽಪಿ ದಿತಿಜಾಃ ಶ್ರೀಕಾಲಕಾಲಾರ್ಚಕಾಃ
ವ್ಯಾಲೇಂದ್ರಾ ಗರಲಾಶಿಶಂಕರಮಹಾಲಿಂಗಾರ್ಚಕಾಃ ಶಾಂಕರಾಃ ।
ಫಾಲಾದ್ಯಂಗಲಸತ್ತ್ರಿಪುಂಡ್ರಸುಮಹಾರುದ್ರಾಕ್ಷಮಾಲಾಧರಾ
ಧೀರೋದಾರಕುಮಾರ ದಾರಸಹಿತಾಃ ಕಾಕೋದರಾಃ ಶಾಂಕರಾಃ ॥೫೭॥

ಪಾತಾಲೇಪ್ಯುರಗೇಶ್ವರಪ್ರಭೃತಯಃ ಶೇಷಾದ್ಯಶೇಷಾಃ ಶಿವಂ
ಲಿಂಗೇಷು ಪ್ರಥಿತೇಷು ಹಾಟಕೆ ಮಹಾಲಿಂಗಂ ಸ ಕಾರ್ಕೋಟಕಃ ।
ತ್ರುಟ್ಯತ್ಪಾತಕಸಂತತಿಃ ಸ್ವಕಫಣಾಮಾಣಿಕ್ಯ ಪೂಜಾದಿಭಿಃ
ಬಿಲ್ವಾನಾಂ ಪ್ರಕರೈಃ ಸದಂಬುಜವರ್ಗೈಃ ಪುಷ್ಪೈಶ್ಚ ದೀಪಾರ್ತಿಭಿಃ ॥೫೮॥

ಕರ್ಪೂರಾಗರುಸಂಭವೈಃ ಸ ಸುರಸಾಮೌದ್ರೈಶ್ಚ(?) ನಿತ್ಯಂ ಶಿವಂ
ಸಂಪೂಜ್ಯೈವ ವಸಂತಿ ಗೂಢಪದಕಾಃ ದಾರ್ಢ್ಯೇನ ಶಂಭೋಃ ಪದಂ ।

---

ಗಳನ್ನು ಕೇಳಿ ಆನಂದಪಡುವುವು. (ಹಾವುಗಳಿಗೆ ಕಣ್ಣುಗಳೇ ಕಿವಿಗಳಂತೆ ಕೆಲಸ ಮಾಡುವುವು.) ॥೫೬॥

ಬಂಧನಗೃಹದಂತಿರುವ ಪಾತಾಳಲೋಕದಲ್ಲಿ ದೈತ್ಯರೂ, ನಾಗಶ್ರೇಷ್ಠಗಳೂ, ಮಹಾ ವಿಷಭಕ್ಷಕವಾದ ಮಹಾದೇವಲಿಂಗವನ್ನು ಪೂಜಿಸುತ್ತಾ ತಮ್ಮ ಹಣೆಯೇ ಮೊದಲಾದ ಅವಯವಗಳಲ್ಲಿ ಭಸ್ಮತ್ರಿಪುಂಡ್ರವನ್ನಿಟ್ಟು, ರುದ್ರಾಕ್ಷಮಾಲೆಗಳನ್ನು ಧರಿಸಿ, ಶಂಕರಧರ್ಮಾನುಯಾಯಿಗಳಾಗಿರುವರು. ಹಾಗೆಯೇ ಶಾಂಭವರೆನಿಸಿದ ಅವರು ಪತ್ನೀಪುತ್ರಪೌತ್ರಾದಿಗಳೊಡಗೂಡಿ ಆನಂದದಿಂದ ವಾಸಿಸುತ್ತಿರುವರು. ॥೫೭॥

ಪಾತಾಳಲೋಕದಲ್ಲಿ ಆದಿಶೇಷನೇ ಮೊದಲಾದ ಸಮಸ್ತ ಸರ್ಪಗಳೂ ಪ್ರಸಿದ್ಧಗಳಾದ ಶಿವಲಿಂಗಗಳನ್ನು ಪೂಜಿಸಿ, ತಮ್ಮ ಪಾಪರಾಶಿಯನ್ನೆಲ್ಲಾ ಕಳೆದು ಕೊಂಡು, ತಮ್ಮ ಫಣಾಮಣಿಗಳಿಂದಲೂ, ಬಿಲ್ವಪತ್ರೆಗಳಿಂದಲೂ, ಪರಿಶುದ್ಧವಾದ ಕಮಲಪುಷ್ಪಗಳಿಂದಲೂ, ಪ್ರಕಾಶಮಾನವಾದ ದೀಪಾದಿಗಳಿಂದಲೂ ಪೂಜಿಸುತ್ತಾ ಸುಖದಲ್ಲಿರುವರು. ॥೫೮॥

ಪ್ರತಿನಿತ್ಯವೂ ಆ ಲೋಕದ ಸರ್ಪಗಳು ಕರ್ಪೂರ, ಅಗರು ಮೊದಲಾದ ಸುಗಂಧದ್ರವ್ಯಗಳಿಂದ ನಿರ್ಮಿತವಾದ ಗಂಧದಿಂದ ಶಿವನ ಪದಗಳನ್ನು ಪೂಜಿಸುತ್ತಾ, ಸರ್ವದಾ ಶಿವನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ, ಉಳಿದ ವಿಷಯಗಳಲ್ಲಿ ಆಸೆಯನ್ನು

ಧ್ಯಾಯಂತ್ಯೇವ ಸದಾನುರಕ್ತಹೃದಯಾಃ ಸಾರ್ಪಾ ವಿರಕ್ತಾಃ ಸದಾ
ಲಿಂಗಂ ತದ್ವರಹಾಟಕೇಶಮುಮಯಾ ಪಶ್ಯಂತಿ ಚಕ್ಷುಶ್ರ್ರವಾಃ ॥೫೯॥

ಇತಿ ಶ್ರೀಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ಪಾತಾಲಲೋಕೇ
ಸರ್ವನಾಗಕೃತ ಲಿಂಗಪೂಜಾವರ್ಣನಂ ನಾಮ
ಏಕೋನತ್ರಿಂಶೋಽಧ್ಯಾಯಃ

---

ಬಿಟ್ಟು ಸರ್ವದಾ ಪಾರ್ವತೀಸಮೇತನಾದ ಪರಶಿವನ ದರ್ಶನದಲ್ಲಿಯೇ ಮಗ್ನರಾಗಿರುವರು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು. ॥೫೯॥

ಇಲ್ಲಿಗೆ ಶ್ರೀ ಶಿವರಹಸ್ಯದ ಭೀಮನಾಮಕವಾದ ಎಂಟನೆಯ ಅಂಶದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಭೀಮಾಖ್ಯೇ

## ಅಷ್ಟಮಾಂಶೇ

## ತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ದಿಗ್ಗಜಾ ಅಪಿ ತೇ ಚಾಷ್ಟೌ ಅಷ್ಟಮೂರ್ತಿಂ ಕೃಪಾಕರಂ ।
ಸ್ವನಾಮ್ನಾ ಸ್ಥಾಪ್ಯ ಲಿಂಗಾನಿ ಸ್ವಪುಷ್ಕರಜಲಾಂಬುಜೈಃ ॥೧॥

ಸ್ನಾತ್ವಾ ಪಾತಾಲಗಂಗಾಯಾಂ ಸ್ವಶುಂಡಾವಲಯೋದ್ಧೃತೈಃ ।
ಸ್ವರ್ಣಕುಂಭೋದ್ಧೃತಾಂಭೋಭಿರ್ಧೃತಗಂಡ ತ್ರಿಪುಂಡ್ರಕಾಃ ॥೨॥

ಧೃತರುದ್ರಾಕ್ಷಕವಚಾಃ ಕಕ್ಷ್ಯಾರೂಪೇಣ ತೇ ಗಜಾಃ ।
ಪೂಜಯಂತಿ ಚ ಲಿಂಗಾನಿ ಸ್ವಸ್ಯಾಂ ದಿಶಿ ಗಜೋತ್ತಮಾಃ ॥೩॥

---

## ಮೂವತ್ತನೆಯ ಅಧ್ಯಾಯ

ಸರ್ಪಗಳು ಪರಶಿವನನ್ನು ಅರ್ಚಿಸಿದಂತೆಯೇ, ಭೂಮಿಯನ್ನು ಎಂಟುದಿಕ್ಕುಗಳಲ್ಲಿಯೂ ಧರಿಸಿರುವ ಅಷ್ಟದಿಗ್ಗಜಗಳೂ ಸಹ ತಾವಿರುವ ದಿಕ್ಕಿನಲ್ಲಿಯೇ ತಮ್ಮ ತಮ್ಮ ಹೆಸರಿನಿಂದ ಬೇರೆ ಬೇರೆ ಶಿವಲಿಂಗಗಳನ್ನು ಪ್ರತಿಷ್ಠೆಮಾಡಿಕೊಂಡು ಪೂಜೆ ಮಾಡುತ್ತಿದ್ದುವು. ಅವು ಪಾತಾಲಗಂಗಾನದಿಯಲ್ಲಿ ಸ್ನಾನಮಾಡಿ, ಭಸ್ಮರುದ್ರಾಕ್ಷಿಗಳನ್ನು ತಮ್ಮ ತಮ್ಮ ಅವಯವಗಳಲ್ಲಿ ಧರಿಸಿಕೊಂಡು, ತಮ್ಮ ಸೊಂಡಲಿನಲ್ಲಿಯೂ, ಹಾಗೆಯೇ ಸುವರ್ಣಮಯವಾದ ಕಲಶದಲ್ಲಿಯೂ ನೀರನ್ನು ತುಂಬಿಕೊಂಡು, ಆ ಶಿವಲಿಂಗಗಳಿಗೆ ಅಭಿಷೇಕ ಮಾಡುತ್ತಾ ಪೂಜಾರಂಭಮಾಡುತ್ತಿದ್ದುವು. ॥೧-೨-೩॥

ಗಜಚರ್ಮಾಂಬರಧರಾ ತಾನಿ ವಕ್ಷ್ಯಾಮ್ಯನುಕ್ರಮಾತ್ ।
ಐರಾವತಃ ಪುಂಡರೀಕೋ ವಾಮನಃ ಕುಮುದೋಂಜನಃ ॥೪॥

ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕೋಥ ದಿಗ್ಗಜಾಃ ।
ಪೂರ್ವತ್ಯೈರಾವತೋ ಭಾತಿ ಶ್ವೇತಾದ್ರಿರಿವ ಜಂಗಮಃ ॥೫॥

ಚತುರ್ದಂತೋ ಮಹಾಕಾಯಃ ಕರೇಣುಕಲಭಾವೃತಃ ।
ಮದಧಾರಾಕಟೋಲ್ಲಾಸಿ ಭ್ರಮದ್ಭೃಂಗ ಶತಾವೃತಃ ॥೬॥

ಮಣಿಧಾಮಗತಂ ಕೃತ್ವಾ ಲಿಂಗಮೈರಾವತೇಶ್ವರಂ ।
ಸಂಪೂಜ್ಯ ಬಿಲ್ವಮಂದಾರೈರ್ಧೂಪದೀಪನಿವೇದನೈಃ ॥೭॥

ಸ್ತೌತಿ ಚೋದ್ಧೃತ್ಯ ಶುಂಡಾಗ್ರಂ ಮುಂಡಮಾಲಾಧರಂ ಹರಂ ॥೮॥

॥ ಐರಾವತ ಉವಾಚ ॥

ಶಾಂತಂ ಶಂಕರಮಂತಕಾಂತಕಮುಮಾಕಾಂತಂ ಭಜಾಮ್ಯಂತಿಕಂ
ಸ್ವಾಂತಾನಂತ ಮಹಾಂತಕೋದ್ಭವ ಭಯಂ ಕಿಂ ಕೋಪಲಕ್ಷ್ಯಂ ಮಮ ।

---

ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕಗಳೆಂಬ ಎಂಟು ದಿಗ್ಗಜಗಳಲ್ಲಿ ಐರಾವತವೇ ಮೊದಲನೆಯದು. ಅದು ಪೂರ್ವದಿಕ್ಕಿನಲ್ಲಿ ಚಲಿಸುವ ಶ್ವೇತಾದ್ರಿಯಂತೆ ಶುಭ್ರವರ್ಣದಿಂದ ಶೋಭಿಸುತ್ತಿರುವುದು. ಅದಕ್ಕೆ ನಾಲ್ಕು ದಂತಗಳೂ, ದೊಡ್ಡ ದೇಹವೂ ಇರುವುದು. ಅನೇಕ ಹೆಣ್ಣಾನೆ, ಮರಿಯಾನೆಗಳಿಂದ ಕೂಡಿ, ಮದೋದಕವನ್ನು ಸುರಿಸುತ್ತಾ ಮದೋದಕದ ಸುವಾಸನೆಗಾಗಿ ಮುತ್ತುವ ಭ್ರಮರಗಳಿಂದ ಕೂಡಿ ಅಲ್ಲಲ್ಲಿ ಚಲಿಸುತ್ತಿದ್ದಿತು. ಆ ಐರಾವತವು ಐರಾವತೇಶ್ವರಲಿಂಗವನ್ನು ರತ್ನಮಂದಿರದಲ್ಲಿ ಸ್ಥಾಪಿಸಿ, ನಿತ್ಯವೂ ಬಿಲ್ವ, ಮಂದಾರ ಮುಂತಾದ ಪುಷ್ಪಗಳಿಂದಲೂ, ಧೂಪದೀಪನೈವೇದ್ಯಾದಿಗಳಿಂದಲೂ ಪೂಜಿಸುತ್ತಾ, ರುಂಡಮಾಲಾಲಂಕೃತನಾದ ಪರಶಿವನನ್ನು ತನ್ನ ಸೊಂಡಲಿನಿಂದ ಅರ್ಚಿಸುತ್ತಿದ್ದಿತು ಮತ್ತು ಈರೀತಿ ಸ್ತುತಿಸುತ್ತಿದ್ದಿತು. ॥೪-೫-೬-೭-೮॥

" ಪರಮಶಾಂತನೂ, ಕಾಲಕಾಲನೂ ಆದ ಪರಶಿವನ ಸಮೀಪದಲ್ಲಿ ನಿಂತಿರುವ ನನಗೆ ಯಾವ ಯಮನಿಂದಲೂ ಎಂತಹ ಭಯವೂ ಜನಿಸಲಾರದು. ಲೋಕೈಕ

ವಿಶ್ವಾಧೀಶ್ವರ ಶಾಶ್ವತಾಂಧಕೆ ಪರಾಪಾರವ್ಯಥಾಂ ಸಂಹರ
ಘೋರಾಪಾರಭವೋರುಸಾಗರ ಗದಾಪಾರಾದಿ ದುಃಖಂ ಹರ ॥೯॥

ಏವಂ ಸಂಸ್ತೌತಿ ಹೃಷ್ಟಾತ್ಮಾ ಸದೈವಾಭ್ರಮುವಲ್ಲಭಃ ।
ಪುಂಡರೀಕಸ್ತಥಾಗ್ನೇಯ್ಯಾಂ ಕಿಂಜಲ್ಕಸದೃಶ ಛವಿಃ ॥೧೦॥

ಊರ್ಣಯಾಥ ಕರಿಣ್ಯಾನ್ಯೈ ಕಲಭೈರಪಿ ಸಂವೃತಃ ।
ಚತುರ್ದಂತೋ ಮಹಾಕಾಯೋ ಮದಪ್ರಸ್ರವಣಾಂಧದೃಕ್ ॥೧೧॥

ಪುಂಡರೀಕೇಶ್ವರಾಖ್ಯಂ ತದಾಗ್ನೇಯ್ಯಾಂ ಮಣಿಧಾಮಗಂ ।
ಪ್ರತಿಷ್ಠಾಪ್ಯ ಮಹಾಲಿಂಗಮಿಭೇಂದ್ರೋ ಭೀಮವಿಕ್ರಮಂ ॥೧೨॥

ಪುಂಡರೀಕೈಶ್ಚ ಬಿಲ್ವೈಶ್ಚ ಸ್ವಶುಂಡಾವಲಯೋದ್ಧೃತೈಃ ।
ಸಮರ್ಚಯಿತ್ವಾ ಸಂಸ್ತೌತಿ ಬೃಂಹಿತೈರ್ಘೋಷಯನ್ ಸದಾ ॥೧೩॥

---

ಶರಣನೇ, ಅಂಧಕಾಸುರನಾಶಕನೇ, ನನ್ನ ಸಮಸ್ತವಾದ ದುಃಖವನ್ನೂ ಪರಿಹರಿಸು. ಆಕಸ್ಮಿಕವಾಗಿ ಒದಗುವ ಸಾಂಸಾರಿಕವಾದ ಅನೇಕ ಮನೋದುಃಖಗಳನ್ನು ನಾಶಗೊಳಿಸಿ ನನ್ನನ್ನುದ್ಧರಿಸು." ॥೯॥

ಎಂದು ಐರಾವತವು ಸದಾ ಪರಶಿವನನ್ನು ಪ್ರಾರ್ಥಿಸುವುದು. ಇನ್ನು ಪರಾಗದಂತೆ ಮಾಸಲು ಕೆಂಪುಬಣ್ಣದ ಪುಂಡರೀಕವೆಂಬ ಎರಡನೆಯ ದಿಗ್ಗಜವು ಆಗ್ನೇಯದಿಕ್ಕಿನಲ್ಲಿ ಊರ್ಣಾನಾಮಕವಾದ ಹೆಣ್ಣಾನೆಯೊಂದಿಗೂ, ಮರಿಯಾನೆಗಳೊಡನೆಯೂ ವಾಸಿಸುತ್ತಿರುವುದು. ಅದಕ್ಕೂ ನಾಲ್ಕು ದಂತಗಳು, ದೊಡ್ಡ ದೇಹ, ಮದೋದಕಧಾರೆ ಇವು ಶೋಭಿಸುತ್ತಿರುವುವು. ಪುಂಡರೀಕೇಶ್ವರಲಿಂಗವೇ ಅದರ ಆರಾಧ್ಯದೇವರು. ಆ ಶಿವಲಿಂಗವನ್ನು ಮಣಿಮಯವಾದ ಆಲಯದಲ್ಲಿರಿಸಿ, ವಿಧಿವತ್ತಾಗಿ ಪ್ರತಿಷ್ಠೆಮಾಡಿಸಿ, ಪ್ರತಿನಿತ್ಯವೂ, ತನ್ನ ಸೊಂಡಲಿನಿಂದ ಜಲ, ಬಿಲ್ವ, ಕಮಲ ಇವುಗಳನ್ನು ತಂದು ಪೂಜಿಸುತ್ತಾ, ಗರ್ಜಿಸುತ್ತಾ ಶಂಕರನನ್ನು ಈ ರೀತಿ ಪ್ರಾರ್ಥಿಸುವುದು. ॥೧೦-೧೧-೧೨-೧೩॥

॥ ಪುಂಡರೀಕ ಉವಾಚ ॥

ಪಾಹಿ ತ್ರಿನೇತ್ರ ಸುಚರಿತ್ರ ಪವಿತ್ರಪಾತ್ರಂ
ಪಾಹ್ಯಬ್ಜಮಿತ್ರನಯನಾಸುಲಭೂತಿಗಾತ್ರ
ಮಾಮಿಾಶಶಂಖಧವಲೇಂದುಕಲಾಲಲಾಮ ।
ಪಾಹೀಶ ಮಾಮಖಿಲಧಿಯಾ ಸಕಲೇಷುಮಿತ್ರ ॥೧೪॥

ಏವಂ ಸಂಸ್ತೌತಿ ಭುವಂ ಧಾರಯನ್ ಸ ಮಹಾಗಜಃ ।
ವಾಮನೋ ದಕ್ಷಿಣೇ ತಿಷ್ಠನ್ ಉದ್ಯತ್ಕುಂಭೋ ಮಹೇಶ್ವರಂ ॥೧೫॥

ಕರ್ಣಾಗ್ರಚಾಮರೋಲ್ಲಾಸಮದಗಂಧಾಂಧದಿಕ್ತಟಃ ।
ವರ್ಣೇನ ಕರ್ಬುರೋ ವಿಪ್ರ ವ್ಯಗ್ಯ್ರಾ ಸ ಕಲಭ್ಯೈರ್ವೃತಃ ॥೧೬॥

ವಾಮನೇಶಾಭಿಧಂ ಲಿಂಗಂ ಮಣಿಧಾಮಗತಂ ತದಾ ।
ಕೃತ್ವಾ ಬಿಲ್ವಾಂಬುಜೈಃ ಪೂಜ್ಯ ವಾರಣಃ ಪಾಪವಾರಣಂ ॥೧೭॥

ಶುಂಡಾಮಾವೃತ್ಯ ದಂತಾಗ್ರೇ ಸ್ತೌತಿ ದೇವಂ ಸ ದಿಗ್ಗಜಃ ॥೧೮॥

---

" ತ್ರಿನಯನನೇ, ಶುದ್ಧವಾದ ನಡತೆಯುಳ್ಳವನೇ, ರಕ್ಷಣೆಗೆ ಯೋಗ್ಯನಾದ ನನ್ನನ್ನು ಕಾಪಾಡು. ಸೂರ್ಯನನ್ನೇ ನೇತ್ರವನ್ನಾಗಿ ಮಾಡಿಕೊಂಡು, ವಿಭೂತಿಯಿಂದ ಶುದ್ಧವಾದ ಗಾತ್ರವುಳ್ಳವನಾಗಿ, ಶಂಖದಂತೆ ಶುಭ್ರವಾದ ಚಂದ್ರಕಲೆಯಿಂದ ಶೋಭಿಸುವ ಸಮಸ್ತ ಬಾಣಗಳ ನಿಧಿಯೇ, ನನ್ನನ್ನು ನಿನ್ನವನೆಂಬ ಭಾವನೆಯಿಂದ ಕಾಪಾಡು." ॥೧೪॥

ಎಂದು ಪುಂಡರೀಕವು ಪ್ರಾರ್ಥಿಸುತ್ತಿರುವಾಗ, ದಕ್ಷಿಣದಿಕ್ಕಿನಲ್ಲಿ ಚಿತ್ರವರ್ಣದ ವಾಮನವೆಂಬ ದಿಗ್ಗಜವು, ಕಿವಿಯ ತುದಿಗಳಿಗೆ ಚಾಮರಗಳನ್ನು ಕಟ್ಟಿಸಿಕೊಂಡು, ಹೆಣ್ಣಾನೆಯೊಡಗೂಡಿ, ವಾಮನೇಶ್ವರಲಿಂಗವನ್ನು ರತ್ನಮಯವಾದ ಶಿವಾಲಯದಲ್ಲಿ ಪೂಜಿಸುತ್ತಿದ್ದಿತು. ಸೊಂಡಲಿನಲ್ಲಿ ಗಡಿಗೆಯನ್ನು ಹಿಡಿದು ಅಭಿಷೇಕ ಮಾಡಿ, ಬಿಲ್ವಕಮಲಾದಿಗಳಿಂದ ಅಲಂಕರಿಸಿ, ತನ್ನ ಸೊಂಡಿಲನ್ನು ದಂತದ ಮೇಲಿಟ್ಟು ಈ ರೀತಿ ಸ್ತುತಿಸುತ್ತಿದ್ದಿತು. ॥೧೫-೧೬-೧೭-೧೮॥

॥ ವಾಮನ ಉವಾಚ ॥

ಪಾಹೀಂದಿರಾರಮಣಕಾರಣಶಾರಣೇಡ್ಯ
ಚಕ್ಷುಶ್ಶ್ರವಾಭರಣಹಾರಣಕಾತ್ತಕರ್ಣ।
ನಾರಾಂಗಸಂಹಾರಣ ಪಾಪನಿವಾರಣೇಶ
ಪಾಹೀಂದುಭೂಷಣ ಮಹೇಶಗಣಾಗ್ರಗಣ್ಯ ॥೧೯॥

ಏವಂ ಸಂಸ್ತೌತಿ ನಿಯತಂ ದಿಶಸ್ತಂಬೇರಮೋ ಹರಂ।
ನೈಋತ್ಯಾಂ ಕುಮುದೋಪೀಶಂ ಕುಮುದೋತ್ಪಲಭಾಸುರಃ ॥೨೦॥

ವರ್ಣಯಾ ಕಲಭೈರ್ಯುಕ್ತಂ ಕುಮುದೇಶಂ ಮಹೇಶ್ವರಂ।
ಮಣಿಧಾಮಗತಂ ಕೃತ್ವಾ ಪೂಜ್ಯ ಬಿಲ್ವೋತ್ಪಲೈರ್ಗಜಃ ॥೨೧॥

ವಿವೃತ್ಯ ನಯನೇ ಕರ್ಣೇ ಭಕ್ತ್ಯಾ ಸ್ತೌತಿ ಮಹೇಶ್ವರಂ ॥೨೨॥

॥ ಕುಮುದ ಉವಾಚ ॥

ಹೇ ದೇವದೇವ ಜಗದೀಶ್ವರ ಪಂಚವಕ್ತ್ರ
ವಿಶ್ವಂಭರಾಧರಣ ಭೂಷಣ ಭೀಷಣೇಶ।

---

ಚಂದ್ರಶೇಖರನೆನಿಸಿದ ಮಹೇಶ್ವರನೇ, ನೀನು ಲಕ್ಷ್ಮೀಪತಿಯಾದ ಮಹಾವಿಷ್ಣುವನ್ನು ಚಕ್ರದಾನಾದಿಗಳಿಂದ ಉದ್ಧರಿಸಿ ಅವನಿಗೂ ಪೂಜ್ಯನಾಗಿರುವೆ. ನಾಗದೇವತೆಗಳನ್ನೇ ಆಭರಣವನ್ನಾಗಿ ಮಾಡಿಕೊಂಡಿರುವೆ. ಮನ್ಮಥನನ್ನು ನಾಶಗೊಳಿಸಿ ಭಕ್ತರ ಪಾಪರಾಶಿಯನ್ನೆಲ್ಲಾ ಧ್ವಂಸಮಾಡುವ ಪರಶಿವನೇ, ನನ್ನನ್ನು ಕಾಪಾಡು. ॥೧೯॥

ಇದೇ ರೀತಿ ನೈಋತ್ಯದಿಕ್ಕಿನಲ್ಲಿರುವ ಕುಮುದನೆಂಬ ದಿಗ್ಗಜವು ಶುಭ್ರವರ್ಣದಿಂದ ರಂಜಿಸುತ್ತಾ ಮರಿಯಾನೆಯೊಡಗೂಡಿ ಮಣಿಗೃಹಗತವಾದ ಕುಮುದೇಶ್ವರನನ್ನು ಭಕ್ತಿಯಿಂದ ಬಿಲ್ವಾದಿಗಳಿಂದ ಪೂಜಿಸಿ, ಕಣ್ಣನ್ನು ತೆರೆದುಕೊಂಡು ಭಕ್ತಿಯಿಂದ ಈ ರೀತಿ ಪ್ರಾರ್ಥಿಸಿತು. ॥೨೦-೨೧-೨೨॥

"ದೇವದೇವನೇ, ಲೋಕೇಶ್ವರನೇ, ಪಂಚಮುಖಗಳಿಂದಲೂ, ಆದಿಶೇಷನಿಂದಲೂ, ಅಲಂಕೃತನಾದವನೇ, ಭಯಂಕರಸ್ವರೂಪನೇ, ಗೌರೀಪತಿಯೇ, ಸರ್ವ

ಗೌರೀಮನೋರಮಣ ಶರ್ವ ಶರಣ್ಯ ಶಂಭೋ
ಆತಾರ್ಯತಾರಣವಿಭೋ ಚರಣಂ ನತೋಽಸ್ಮಿ ॥೨೩॥

ಅಂಜನಃ ಪಶ್ಚಿಮೇ ಭಾತಿ ಪದ್ಮೇಶೋ ಪದ್ಮಸಂನಿಭಃ ।
ವಾರಣಾ ಕಲಭೈರ್ಯುಕ್ತೋ ಚತುರ್ದಂತೋ ಮದಸ್ರವಃ ॥೨೪॥

ಅಂಜನೇಶಾಭಿಧಂ ಲಿಂಗಂ ಮಣಿಧಾಮಗತಂ ಗಜಃ ।
ಪದ್ಮೈರ್ಬಿಲ್ವೋತ್ಪಲೈರ್ಭಕ್ತ್ಯಾ ಮಂದಾರಾರ್ಜುನಚಂಪಕೈಃ ॥೨೫॥

ನಿವೇದ್ಯ ಫಲಮೂಲಾನಿ ಅಂಜನಃ ಸ್ತೌತಿ ಶಂಕರಂ ॥೨೬॥

॥ ಅಂಜನ ಉವಾಚ ॥

ಸರಸೀರುಹನಾಭನೇತ್ರವಂದ್ಯಂ
ಸ್ಫುರತ್ ಶಂಬರವೈರಿಲಾಂಛನಾಂಗಂ ।
ಭಜ ಭಜ ಶಿವದಂ ಶಿವಾಧವಂ ತ್ವಾಂ
ಭವ ಭವಮಭಯಾಯ ಚೇತಸಾ ತ್ವಂ ॥೨೭॥

---

ಜನರಕ್ಷಕನೇ, ಆಪದ್ಬಾಂಧವನೇ, ಭಕ್ತಜನೋದ್ಧಾರಕನೇ ನನ್ನನ್ನು ಸಲಹು." ಎಂದು ಕುಮುದ ದಿಗ್ಗಜವು ಮೊರೆಯಿಟ್ಟಿತು. ॥೨೩॥

ಪಶ್ಚಿಮದಿಕ್ಕಿನಲ್ಲಿ ಕಮಲದ ಬಣ್ಣದಂತೆ ವರ್ಣವುಳ್ಳ ಅಂಜನವೆಂಬ ದಿಗ್ಗಜವು ಪತ್ನೀಪುತ್ರರೊಡಗೂಡಿ, ನಾಲ್ಕು ದಂತಗಳಿಂದಲೂ, ಮದದಿಂದಲೂ ಶೋಭಿಸುತ್ತಾ ಮಣಿಧಾಮಗತವಾದ ಅಂಜನೇಶ್ವರಲಿಂಗವನ್ನು ಬಿಲ್ವಕಮಲಾದಿಗಳಿಂದ ಪೂಜಿಸಿ, ಕಂದಮೂಲ ಫಲಗಳನ್ನು ನಿವೇದನಮಾಡಿ ಈ ರೀತಿ ಪ್ರಾರ್ಥಿಸಿತು. ॥೨೫-೨೬॥

" ಮಹಾದೇವನೇ, ವಿಷ್ಣುವಿನ ನೇತ್ರದಿಂದ ಪೂಜಿತನಾದವನೇ, ಶಂಬರಾರಿಯೆನಿಸಿದ ಮನ್ಮಥನನ್ನು ಸುಟ್ಟು ಬೂದಿಮಾಡಿದವನೇ, ಮಂಗಳಪ್ರದನೇ, ಗೌರೀಪತಿಯೇ, ನಿನ್ನನ್ನು ಸರ್ವದಾ ಭಜಿಸುವೆನು. ಎಲೈ ಮನಸ್ಸೇ, ಅಭಯಪ್ರದನಾದ ಶಂಕರನನ್ನು ಭಜಿಸು, ಎಂದು ನಾನು ಸರ್ವದಾ ಧ್ಯಾನಮಾಡುತ್ತಿರುವೆನು." ಎನ್ನುತ್ತಾ ಅಂಜನವು ಶಂಕರನನ್ನು ಹೊಗಳುವುದು. ॥೨೭॥

ಪುಷ್ಪದಂತೋಥ ವಾಯವ್ಯಾಂ ಧಾರಯಂಭಿರಸಾ ಭುವಂ ।
ಅತಸೀಪುಷ್ಪಸಂಕಾಶಃ ಪುಷ್ಪಿಣ್ಯಾ ಕಲಭೈರ್ಯುತಃ ॥೨೮॥

ಪುಷ್ಪದಂತೇಶ್ವರಂ ಲಿಂಗಂ ಮಣಿಧಾಮಗತಂ ತದಾ ।
ಬಿಲ್ವಮಂದಾರಪುನ್ನಾಗಚಂಪಕೈರರ್ಚ್ಯ ದಂತಿರಾಟ್ ॥೨೯॥

ಸಂಸ್ತೌತಿ ನಿಯತಂ ಭಕ್ತ್ಯಾ ಕುಂಭಸಂಸ್ಪೃಷ್ಟಭೂತಲಃ ॥೩೦॥

॥ ಪುಷ್ಪದಂತ ಉವಾಚ ॥

ಕುರುಕುರು ಕರುಣಾಂ ಶಶಿದ್ಯುತೀಡ್ಯ
ಪ್ರಥಿತಾನಂಗಮತಂಗಭಂಗಮೀಶಂ ।
ಸುಪತಂಗದೃಗಂಗತುಂಗಗಂಗಾ
ಸುತರಂಗೌಘಜಟಂ ಭಜಾಮಿ ಶಂಗಂ ॥೩೧॥

ಏವಂ ಸಂಸ್ತೌತಿ ನಿಯತಂ ದ್ವಿರದಃ ಸುರಸತ್ತಮಂ ।
ಸಾರ್ವಭೌಮೋ ಗಜೇಂದ್ರೋsಸೌ ಪಾಟಲೀಪಟಲಾರುಣಃ ॥೩೨॥

---

ವಾಯುವ್ಯದಿಕ್ಕಿನಲ್ಲಿರುವ ಪುಷ್ಪದಂತವೆಂಬ ದಿಗ್ಗಜವು ಅಗಸೆಯ ಹೂವಿನಂತೆ ಶುಭ್ರವಾಗಿ ಹೊಳೆಯುತ್ತಾ ಪುಷ್ಪಿಣಿಯೆಂಬ ಹೆಣ್ಣಾನೆಯೊಂದಿಗೂ, ಮರಿಯಾನೆಗಳೊಡನೆಯೂ ಕೂಡಿಕೊಂಡು ದಿವ್ಯಗೃಹದಲ್ಲಿರುವ ಪುಷ್ಪದಂತೇಶ್ವರಲಿಂಗವನ್ನು ಬಿಲ್ವಮಂದಾರ, ಪುನ್ನಾಗ, ಸಂಪಿಗೆ ಮೊದಲಾದ ಸುಗಂಧಮಯಪುಷ್ಪಗಳಿಂದ ಅರ್ಚಿಸುತ್ತಾ, ಕುಂಭಸ್ಥಳವನ್ನು ಶಿವಲಿಂಗದ ಎದುರಿನಲ್ಲಿ ಭೂಮಿಯಲ್ಲಿಟ್ಟು ಭಕ್ತಿಯಿಂದ ಈ ರೀತಿ ಸ್ತೋತ್ರಮಾಡಿತು. ॥೨೮-೨೯॥

ಚಂದ್ರಕಾಂತಿಯಿಂದ ಪ್ರಕಾಶಿಸುವವನೇ, ಪ್ರಸಿದ್ಧನಾದ ಮನ್ಮಥನೆಂಬ ಮದ್ದಾನೆಯನ್ನು ನಾಶಗೊಳಿಸಿದವನೇ, ಸೂರ್ಯಚಂದ್ರರನ್ನೂ ಗಂಗಾನದಿಯ ಅಲೆಗಳನ್ನೂ ಶಿರಸ್ಸಿನಲ್ಲಿ ಧರಿಸಿ ಮೆರೆಯುತ್ತಿರುವ ಮಹಾದೇವನೇ, ನನ್ನಲ್ಲಿ ಕರುಣೆಯನ್ನಿಡು. ನಮ್ಮನ್ನುದ್ಧರಿಸು. ॥೩೧॥

ಹಾಗೆಯೇ ಉತ್ತರದಿಕ್ಕಿನಲ್ಲಿರುವ ಸಾರ್ವಭೌಮನೆಂಬ ದಿಗ್ಗಜವು ಪಾದರೀ ಹೂವಿನ ಬಣ್ಣದಲ್ಲಿ ಶೋಭಿಸುತ್ತಾ, ಪಾಟಲೀನಾಮಕ ಪತ್ನಿಯೊಡನೆಯೂ, ಮರಿಗಳೊಡನೆಯೂ ಕೂಡಿ, ಸಾರ್ವಭೌಮೇಶ್ವರಲಿಂಗವನ್ನು ಕಮಲವೇ ಮೊದಲಾದ

ಪಾಟಲ್ಯಾ ಕಲಭ್ಯೈರ್ಯುಕ್ತೈಃ ಸಾರ್ವಭೌಮೇಶ್ವರಾಭಿಧಂ ।
ಮಣಿಧಾಮಗತಂ ಲಿಂಗಂ ಬಿಲ್ವಾಬ್ಜೈಃ ಸರ್ವದಾರ್ಚಯನ್ ॥೩೩॥

ಸಂಸ್ತೌತಿ ಶುಂಡಾಮುದ್ಧೃತ್ಯ ವೇತಂಡಹರಮೀಶ್ವರಂ ।
ಉತ್ತರೇ ಧಾರಯನ್ ಪೃಥ್ವೀಂ ಕರ್ಣತಾಲೈರ್ಮದೋದ್ಧತೈಃ ॥೩೪॥

॥ ಸಾರ್ವಭೌಮ ಉವಾಚ ॥

ಶಂಗಂ ಸಂಗಹರಂ ಮಹೇಶಮನಘಂ ಮಾತಂಗಚರ್ಮಾಂಬರಂ ।
ಗಂಗಾತುಂಗತರಂಗರಂಜಿತ ಜಟಾಭಾರಂ ಭುಜಂಗಾಂಗದಂ ॥೩೫॥

ಮಧುಮಥನಾರ್ಚಿತಪಾದಾಂಬುಜಂ ಮಹೇಶಂ
ಭಜ ಶಂಭುಂ ಸಕಲಾಢ್ಯವಿಶ್ವನಾಥಂ ।
ಪ್ರಮಥಾನಾಂ ಶಿವಮೇಕನಾಥಮೀಶಂ ॥೩೬॥

ಸುಪ್ರತೀಕಸ್ತಥೇಶಾನ್ಯಾಂ ಸುಪ್ರತೀಕೇಶ್ವರಾಭಿಧಂ ।
ಲಿಂಗಂ ಮಣೀಂದ್ರಸಂಕ್ಲುಪ್ತ ದಿವ್ಯಧಾಮಗತಂ ಗಜಃ ॥೩೭॥

ಪ್ರತೀಕ್ಯಾ ಕಲಭ್ಯೈರ್ಯುಕ್ತೋ ಗೌರವರ್ಣೋ ಮಹಾಬಲಃ ।
ಸಂಪೂಜ್ಯ ಬಿಲ್ವಕಮಲೈಸ್ತಥಾ ನೀಲೋತ್ಪಲೈರಪಿ ॥೩೮॥

---

ಸಾಮಗ್ರಿಗಳಿಂದ ಪೂಜಿಸುತ್ತಾ ತನ್ನ ವಿಶಾಲವಾದ ಕಿವಿಗಳನ್ನು ಅಲ್ಲಾಡಿಸುತ್ತಾ ಭೂಮಿಯನ್ನು ಹೊತ್ತುಕೊಂಡೇ ಪರಮೇಶ್ವರನನ್ನು ಮುಂದೆ ಹೇಳುವಂತೆ ಪ್ರಾರ್ಥಿಸಿತು. ॥೩೨-೩೩-೩೪॥

"ಮಹಾದೇವನೇ, ನೀನು ಸಂಸಾರಸಂಬಂಧವನ್ನು ತಪ್ಪಿಸುವವನು, ಪಾಪರಹಿತನು, ಗಜಚರ್ಮಾಂಬರಧಾರಿಯು, ಗಂಗಾನದಿಯ ಅಲೆಗಳಿಂದ ತುಂಬಿದ ಜಟಾಜೂಟವುಳ್ಳವನು, ಸರ್ಪವನ್ನೇ ತೋಳು ಬಳೆಯನ್ನಾಗಿ ಹೊಂದಿದವನು. ನಿನ್ನ ಪಾದಕಮಲವನ್ನು ಸಾಕ್ಷಾದ್ವಿಷ್ಣುವೂ ಸಹ ಪೂಜಿಸಿರುವನು. ನೀನು ಸಮಸ್ತ ಪ್ರಮಥಗಣಗಳಿಗೂ ಒಡೆಯನು. ಸುಖಪ್ರದನಾದ ಪರಶಿವನೇ, ನಿನ್ನನ್ನು ನಾನು ಮೊರೆಹೊಕ್ಕಿರುವೆನು. ಆದರದಿಂದ ನಮ್ಮನ್ನು ಸಲಹು. ॥೩೫-೩೬॥

ಕೊನೆಯದಾದ ಸುಪ್ರತೀಕವೆಂಬ ದಿಗ್ಗಜವು ಈಶಾನ್ಯದಿಕ್ಕಿನಲ್ಲಿ ನಿಂತು, ಮಣಿಮಯವಾದ ಶಿವಾಲಯದಲ್ಲಿ ಸುಪ್ರತೀಕೇಶ್ವರಲಿಂಗವನ್ನು ಸ್ಥಾಪಿಸಿ, ಪ್ರತೀಕೆ

ನಿವೇದ್ಯ ಫಲಮೂಲಾದಿ ದಂತಾವಲವರೋ ಹರಂ ।
ಸಂಸ್ತೌತಿ ಭರಿತಾನಂದೋ ಮದಧಾರಾಕಟಶ್ರವಾಃ ॥೩೯॥

॥ ಸುಪ್ರತೀಕ ಉವಾಚ ॥

ಶ್ರೀಕಾಲಕಾಲ ಜಿತಸರ್ವದಿತಿಪ್ರಸೂತ
ಪಾತಾಳಮೂಲಪದಖೇಲನ ವಿಶ್ವಲೀಲ ।
ಪದ್ಮಾಬ್ಜಜಾಚ್ಯುತಶಚೀಧರಪೂಜಿತಾಂಘ್ರೇ
ಗೌರೀಮನೋಹರ ವಿಲಾಸನಿಧಾನಶೀಲ ॥೪೦॥

ಏವಂ ದಿಗ್ಗಜವರ್ಯಪೂಜಿತಮಹಾಲಿಂಗಾನಿ ತುಂಗಾನಿ ತೇ
ಪ್ರೋಕ್ತಾನ್ಯುತ್ತಮಭೋಗಿಲೋಕತಿಲಕಾಲಂಕಾರಸದ್ಧಾಟಕಂ ।
ಲಿಂಗಂ ಶಾಂಗಮುಮಾಪತೇಃ ಪ್ರಿಯತಮಂ ಸಂಪೂಜಿತಂ ವಾ ಸ್ಮೃತಂ
ಚಿತ್ತೇ ಚಿಂತಿತಕಾಮದಂ ಕಿಲ ಮಹಾಪಾಪೌಘಸಂಘೈಕಭಿತ್ ॥೪೧॥

---

ಯೆಂಬ ಪತ್ನಿಯೊಡನೆಯೂ, ಮರಿಯಾನೆಗಳೊಡನೆಯೂ ಕೂಡಿ, ಬಿಲ್ವಕಮಲ, ನೀಲೋತ್ಪಲ ಇವುಗಳಿಂದ ಪೂಜೆಮಾಡುತ್ತಾ, ಫಲಮೂಲಾದಿಗಳನ್ನು ಸಮರ್ಪಿಸಿ ಮದೋದಕವನ್ನು ಸುರಿಸುತ್ತಾ ಈ ರೀತಿ ಸ್ತೋತ್ರಮಾಡಿತು. ॥೩೭-೩೮-೩೯॥

" ಯಮನಿಗೂ ಯಮನೆನಿಸಿದ ದೇವದೇವನೇ, ನೀನು ಸಕಲ ರಾಕ್ಷಸರನ್ನೂ ಗೆದ್ದಿರುವೆ. ಪಾತಾಲಲೋಕದಲ್ಲಿ ನಿನ್ನ ಪಾದವನ್ನಿಟ್ಟು ಪ್ರಪಂಚವನ್ನೇ ವ್ಯಾಪಿಸಿರುವೆ. ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳಿಂದಲೂ ಪೂಜಿತನಾಗಿರುವೆ. ಗೌರೀದೇವಿಯ ಮನಸ್ಸನ್ನು ಆನಂದಗೊಳಿಸುತ್ತಾ ಜಗತ್ತನ್ನೇ ಪಾಲಿಸುತ್ತಿರುವೆ. ಮಹಾದೇವನೇ, ನಮ್ಮನ್ನು ಕಾಪಾಡು " ॥೪೦॥

ಎಲೈ ಜೈಗೀಷವ್ಯನೇ, ನಿನಗೆ ಅಷ್ಟದಿಗ್ಗಜಗಳಿಂದಲೂ ಪೂಜಿಸಲ್ಪಡುವ ಶಿವಲಿಂಗಗಳ ಹೆಸರನ್ನು ತಿಳಿಸಿರುವೆನು. ಆದರೆ ಈ ಎಲ್ಲಾ ಶಿವಲಿಂಗಗಳಿಗಿಂತ ಪಾತಾಲ ಮಧ್ಯಗತವಾಗಿ, ಸರ್ವಕ್ಕೂ ತಿಲಕಪ್ರಾಯವಾಗಿರುವ ಹಾಟಕೇಶ್ವರ ಲಿಂಗವೇ ಪರಶಿವನಿಗೆ ಬಹುಪ್ರಿಯವಾದುದು. ಆ ಹಾಟಕೇಶ್ವರಲಿಂಗವನ್ನು ಪೂಜಿಸುವುದರಿಂದಲೂ ಸ್ಮರಿಸುವುದರಿಂದಲೂ ಸಮಸ್ತ ಪಾಪಗಳೂ ನಿವಾರಣೆಯಾಗಿ ಭಕ್ತರ ಇಷ್ಟಾರ್ಥಗಳೆಲ್ಲಾ ಸಿದ್ಧಿಸುವುವು. ಇದು ನಿಜ. ॥೪೧॥

॥ ಸೂತ ಉವಾಚ ॥

ನೈತಚ್ಚಿತ್ರಮಹೋ ತ್ರಿಣೇತ್ರ ಚರಣಾಂಭೋಜಪ್ರಭಾಭಾವತ
ಶ್ಚಿತ್ರಂ ಚಾಪಿ ಜಗತ್ಪವಿತ್ರಿತಮಿದಂ ಭಾತ್ಯಂತರಂಗೋ ಮಮ ।
ಕಿಂ ಸತ್ರಾವಭೃಥಾಪ್ಲವೈರ್ವರಗವಾಂ ದಾನೈರ್ಮಹೀದಾನತ
ಸ್ತುಂಗಾಶ್ವೇಭವರಾನ್ನರಾಶಿಸುಮಹಾದಾನೈರ್ವ್ರತೈಶ್ಚಾಪಿ ಕಿಂ ॥೪೨॥

ಯೋ ವಾ ಕೋವಾಪಿ ಶಂಭುಂ ಭಜತಿ ಭುವಿ ನರಃ ಕಿನ್ನರೋ ವಾ ಸುರೋವಾ
ಮಾರಾಪಾರಶರಾಭಿಘಾತಸಹಿತೋ ಭೂಭಾರರೂಪಾಃ ಪರೇ ।
ಧನ್ಯೋ ಮಾನ್ಯೋ ಹಿ ಮುಖ್ಯಪ್ರಭೃತಿಗುಣಗಣಶ್ರೇಷ್ಠತಾಮಾಪ್ನುಯಾತ್ಸ
ವಿದ್ಯೋತದ್ಯುತಿರಿಂದು ಕುಂದ ಧವಲಪ್ರೇಮಾಸ್ಪದಾಂಗೋ ಭವೇತ್ ॥೪೩॥

---

ಹೀಗೆ ನಡೆದ ಸ್ಕಂದ ಜೈಗೀಷವ್ಯಾದಿಗಳ ಸಂವಾದವನ್ನು ತಿಳಿಸುತ್ತಾ ಸೂತ ಮಹರ್ಷಿಗಳು ಆಶ್ಚರ್ಯಪಡುತ್ತಾ, ಶಿವಮಹಿಮೆಯ ವಿಷಯವಾಗಿ ಕೆಲವು ಮಾತುಗಳನ್ನಾಡಿದರು —ಮಹೇಶ್ವರನ ಪಾದಕಮಲಗಳ ಪ್ರಭಾವದಿಂದ ಈ ವಿಚಿತ್ರವಾದ ಪ್ರಪಂಚವೆಲ್ಲವೂ ಪವಿತ್ರವಾಗಿ ನನಗೆ ಕಾಣುತ್ತಿದೆ. ಸರ್ವವೂ ಶಿವಮಯವೆಂಬ ಭಾವನೆಯು ನನಗೆ ಒದಗಿ ಅಂತರಂಗದಲ್ಲಿ ವಿಶೇಷ ಆನಂದವುಂಟಾಗುತ್ತಿರುವುದು. ಈಗ ಮತ್ತಾವ ಯಾಗಗಳಾಗಲಿ, ಗೋದಾನ, ಭೂದಾನ, ಗಜಾಶ್ವದಾನ, ಅನ್ನದಾನ, ಮೊದಲಾದ ಮಹಾದಾನಗಳಾಗಲಿ, ವ್ರತಾಚರಣೆಗಳಾಗಲಿ ನನಗೆ ಅನವಶ್ಯಕ. ಅವೆಲ್ಲವುಗಳ ಫಲವೂ ನನಗೆ ಈ ಶಿವಕಥಾ ಕಥನದಿಂದಲೇ ಲಭಿಸುವುದು. ॥೪೨॥

ಪ್ರಪಂಚದಲ್ಲಿ ಕಿನ್ನರನಾಗಲಿ, ಸುರನಾಗಲಿ, ನರನೇ ಆಗಲಿ, ಭಕ್ತಿಯಿಂದ ಪರಶಿವನನ್ನು ಭಜಿಸಿ ಪೂಜಿಸಿದರೆ, ಅವನು ಕಾಮಶರಪೀಡಿತನಾಗಿ ಪಾಪಿಯೆನಿಸಿದ್ದರೂ, ಧನ್ಯನೂ ಮಾನ್ಯನೂ ಎನಿಸುವನು. ಯಾಗಾಚರಣೆಯಿಂದ ಲಭಿಸುವ ಫಲವೆಲ್ಲವೂ ಆತನಿಗೆ ಲಭಿಸುವುದು. ಆತನು ಮಹಾತೇಜಸ್ವಿಯಾಗಿ, ಚಂದ್ರ ಮತ್ತು ಕುಂದಪುಷ್ಪಗಳಂತೆ ಪರಶಿವನ ಪ್ರೀತಿಗೆ ಮುಖ್ಯ ಕಾರಣನೆನಿಸುವನು. ಶಿವಧ್ಯಾನವಿಮುಖರಾದವರು ಭೂಭಾರವೆನಿಸುವರು. ಅಂಥವರು ಎಂದೂ ಮಾನ್ಯರಾಗುವುದಿಲ್ಲ. ॥೪೩॥

ವರಂ ರಾಸಭೋ ವಾ ವರಂ ಸೂಕರೋ ವಾ
ವರಂ ಜಾರಚಂಡಾಲಕನ್ಯಾಸಮೇತಃ ।
ವರಂ ಪಾಮರೋ ವಾ ನರೋ ವಾ ಸುರೋ ವಾ
ಹರಾಪಾರಲಿಂಗಾರ್ಚನಾವರ್ಜಿತೋ ನ ॥೪೪॥

ಉದ್ಭಿಜ್ಜಾನಿ ಚ ಜಾರುಜಾನಿ ಚ ಮಹಾಭೂತಾನಿ ಚಾಂಡೋದ್ಭವಾ
ನ್ಯಾದೃತ್ಯಾನ್ಯಸಕೃನ್ಮಹೇಶ್ವರ ಮಹಾಧಾಮ್ನ್ಯೇವ ತಾನಿ ದ್ರುತಂ ।
ಸಂಸ್ಥಾನ್ಯಪ್ರತಿಮಪ್ರಭಾವವಿಹಿತೇ ವೇದಾಂತವೇದ್ಯೇ ಹರೇ
ಹಾರಾ ಏವ ವಿಲೀಯಸಪ್ರತಿಭವಂ ಯಾಂತ್ಯೇವ ಸರ್ವಾಶ್ರಯಾಃ ॥೪೫॥

ಉತ್ಕ್ರಾಂತಿಕ್ರಾಂತ ದೇಹಾಕ್ರಮಭ್ರಮಣಮಹಾಘೋರಸಂಸಾರಚಕ್ರೇ
ನಕ್ರಪ್ರಾಯೋರುದಾರಾಧನಸುತವದನಭ್ರಾಂತಿಸಂಶ್ರಾಂತದೇಹಾಃ ।
ಈಹಾಮೋಹೇರ್ಷ್ಯಯಾ ಯೇ ದ್ರುತಗತಿಭೃತಿಭಿರ್ನಾಶಜನ್ಮಾದ್ಯವಸ್ಥಾಃ
ಸಂಸ್ಥಾತುಂ ಮನ್ವತೇ ಯೇ ಭ್ರಮದುದರದರೀಪೂರ್ತಯೇ ನಿಪ್ರಮೂಢಾಃ
॥೪೬॥

---

ಲೋಕದಲ್ಲಿ ಕತ್ತೆ, ಹಂದಿ, ಜಾರಪುರುಷ, ಚಂಡಾಲಕನ್ಯಾಪತಿ ಇಂತಹ ಜನ್ಮಗಳೂ ಒಂದುವೇಳೆ ಪ್ರಶಸ್ತವೆನಿಸಿಯಾವು! ಅಜ್ಞಾನಿಯಾಗಿಯೋ, ಸಾಮಾನ್ಯ ಮನುಷ್ಯನಾಗಿಯೋ, ದೇವತಾಭೇದದಿಂದಲೋ ಜನಿಸಿ ಶಿವಾರಾಧನೆ ಮಾಡುವ ಯೋಗವು ದೊರೆತರೆ ಸಾಕು. ಎಂದಿಗೂ ಶಿವಾರ್ಚನವಿಮುಖವಾದ ಜನ್ಮವು ನಮಗೆ ಬೇಡ. ಇದೇ ನನ್ನ ಹಾರೈಕೆ. ॥೪೪॥

ನೆಲದಲ್ಲಿ ಹುಟ್ಟಿದವುಗಳು, ಜನ್ಮದಿಂದ ಜನಿಸಿದವುಗಳು, ಪಾಂಚಭೌತಿಕವಾದ ದೇಹಗಳು, ಇತರ ಪ್ರಪಂಚದ ವಸ್ತುಗಳು, ಇವೆಲ್ಲವೂ ಪರಶಿವನಿಗೆ ಆಶ್ರಯವಿತ್ತವುಗಳೇ. ಹೀಗೆ ಸರ್ವವಸ್ತುಗಳಲ್ಲಿಯೂ ಅಡಗಿ ಉಪನಿಷತ್ಪ್ರತಿಪಾದ್ಯಮಾನನೆನಿಸಿದ ಪರಶಿವನಲ್ಲಿ ಹರಭಕ್ತರಾಗಿ ಹರಸೇವೆಯಿಂದ ಮುಂದುವರಿದವರು ಮಾತ್ರ ಐಕ್ಯವನ್ನು ಪಡೆಯುವರು. ಮತ್ತಾರಿಗೂ ಶಿವಸಾಯುಜ್ಯವು ಲಭಿಸಲಾರದು. ॥೪೫॥

ಎಂದೋ ಒಂದು ನಾಶವಾಗಿ ಹೋಗುವ ಈ ಮಾನವ ದೇಹವನ್ನು ಹೊಂದಿ, ಘೋರಸಂಸಾರ ಚಕ್ರಕ್ಕೆ ಸಿಕ್ಕಿ ಮಾನವರು, ಮೊಸಳೆಗಳಂತೆ ಕಾಡಿ

॥ ಸ್ಕಂದ ಉವಾಚ ॥

ಏವಂ ದಿಗ್ಗಜಮೌಲಿಧಾರಿತಮಹೀಮೀಶಾರ್ಚನಾಯೋದ್ಯತಾಃ
ಶುಂಡಾದಂಡವಿಮರ್ದಿತಾಂಡಕಟಿಭಿದ್ಘೋರೋರುಸದ್ಬೃಂಹಿತೈಃ ।
ಉಚ್ಚೈರ್ಘೋಷಪರಾಯಣಾಃ ಗಜವರಾ ದಂತಿತ್ವಗಾಶಾಂಬರಂ
ಸಂಪೂಜ್ಯ ಪ್ರಮಥಾಧಿನಾಥಮಗಜಾಕಾಂತಂ ಗಜಾಸ್ತೇ ಸದಾ ॥೪೭॥

ಭೀಮಾಂಶಃ ಕಥಿತೋಷ್ಟಮೋಸ್ಮತನುಕ ಶ್ರೀಪಾದಪದ್ಮಾರ್ಚಕೈಃ
ಶ್ರೋತವ್ಯಃ ಸಕಲಾಘಶೈಲಭಿದುರೋ ಮಾರಾರಿಭಕ್ತಿಪ್ರದಃ ।
ಶ್ರೀದೇವ್ಯೈ ಕಥಿತೋ ಮಹೇಶವದನಾತ್ತತ್ತುಭ್ಯಮುಕ್ತೋ ಮಯಾ
ಕಿಂ ಭೂಯಃ ಪರಿಪೃಚ್ಛಸೇ ತವ ಮುದಾ ತದ್ವಚ್ಮಿ ಶೈವಾಗ್ರಣೇ ॥೪೮॥

---

ಬೇಡುವ ಹೆಂಡತಿ, ಮಕ್ಕಳು, ಧನ, ಧಾನ್ಯ ಇವುಗಳನ್ನು ಸಂಪಾದಿಸಲು ಅಹೋರಾತ್ರಿ ಬಳಲಿ ಬೆಂಡಾಗುವರು. ದುರಾಸೆ, ದುರ್ಮೋಹ ಇವುಗಳಿಂದ ನಾಶವಾಗುವ ದೇಹಸುಖಕ್ಕಾಗಿ ಪರಸೇವೆಗಾಗಿ ಓಡಿ ಓಡಿ ಬಳಲಿ ಹೋಗುವರು. ಉರಿದುಬಿದ್ದು ಹೋಗುವ ಈ ಹೊಟ್ಟೆಯ ಪಾಡಿಗಾಗಿ ಮೂಢರಾದವರು ಆಮರಣಾಂತ ಪರಸೇವೆಯಲ್ಲಿ ಕಾಲಕಳೆಯುವರು. ಆದರೂ ಶಿವಧ್ಯಾನಾಸಕ್ತರಾಗುವುದಿಲ್ಲ. ಎಂದು ಹೇಳುತ್ತಾ ಸೂತರು ಕುಮಾರಸ್ವಾಮಿಯ ಮಾತನ್ನು ಮುಂದಿನ ಶ್ಲೋಕದಿಂದ ಪೂರ್ತಿಗೊಳಿಸುವರು. ॥೪೬॥

ಎಲೈ ಜೈಗೀಷವ್ಯನೇ, ಹಿಂದೆ ಹೇಳಿದಂತೆ ಅಷ್ಟದಿಗ್ಗಜಗಳೂ ಭೂಮಿಯನ್ನು ಹೊತ್ತು, ಸರ್ವದಾ ಶಿವಾರ್ಚನೆಯಿಂದ ಕಾಲಕಳೆಯುತ್ತಾ ಆನಂದದಿಂದಿರುವುವು. ದಿಗಂಬರನೂ ಗಜಚರ್ಮಧಾರಿಯೂ ಆದ ಪ್ರಮಥಾಧಿಪನಾದ ಪರಶಿವನನ್ನು ತಮ್ಮ ನೀಳವಾದ ಸೊಂಡಲುಗಳಿಂದ ಪೂಜಿಸುತ್ತಾ, ಬ್ರಹ್ಮಾಂಡವನ್ನೇ ನಡುಗಿಸುವಂತಹ ಘೀಂಕಾರವನ್ನೆಸಗುತ್ತಾ ದೊಡ್ಡ ಧ್ವನಿಯಿಂದ ಪರಶಿವನನ್ನೇ ಹೊಗಳುತ್ತಾ ಪರಶಿವನ ಆಜ್ಞೆಯನ್ನು ಪಾಲಿಸುತ್ತಿರುವುವು. ॥೪೭॥

ಶಾಂಭವವರ್ಯನಾದ ಜೈಗೀಷವ್ಯನೇ, ನಿನ್ನ ಮೇಲಿನ ಮಮತೆಯಿಂದ ನಾನು ಇಲ್ಲಿನ ವರೆಗೂ ಭೀಮನಾಮಕವಾದ ಈ ಎಂಟನೆಯ ಅಂಶವನ್ನು ವಿಸ್ತಾರವಾಗಿ ಹೇಳಿರುವೆನು. ಇದು ಸಮಸ್ತ ಪಾಪಪರ್ವತವನ್ನೂ ಭೇದಿಸಬಲ್ಲುದು. ಮತ್ತು

ಇತಿ ಶ್ರೀ ಶಿವರಹಸ್ಯೇ ಭೀಮಾಖ್ಯೇ ಅಷ್ಟಮಾಂಶೇ ದಿಗ್ಗಜಾವಳಿಕೃತ
ಶಿವಾರಾಧನವರ್ಣನಂ ನಾಮ ತ್ರಿಂಶೋಽಧ್ಯಾಯಃ

## ಅಷ್ಟಮಾಂಶಃ ಸಮಾಪ್ತಃ

॥ ಓಂ ತತ್ಸತ್ ॥

---

ಈಶ್ವರನಲ್ಲಿ ಭಕ್ತಿಯನ್ನುಂಟುಮಾಡುವುದು. ಇಷ್ಟನ್ನೂ ಹಿಂದೆ ಪರಶಿವನೇ ಸಾಕ್ಷಾತ್ತಾಗಿ ಪಾರ್ವತೀದೇವಿಗೆ ತಿಳಿಯಪಡಿಸಿರುವನು. ನಿನ್ನ ಮೇಲಿನ ವಿಶ್ವಾಸ ದಿಂದ ನಾನು ಅದನ್ನು ತಿಳಿದು ನಿನಗೆ ಈಗ ಹೇಳಿರುವೆನು. ಇನ್ನು ನೀನು ಅಪೇಕ್ಷಿಸುವ ವಿಷಯವಾವುದು ? ಈಶ್ವರವಿಷಯಕವಾದ ಪ್ರಶ್ನೆಗಳಿದ್ದರೆ ಕೇಳುವವ ನಾಗು. ನಿನ್ನ ಸಂದೇಹಾಂಶಗಳನ್ನು ನಾನು ಈಗಲೇ ನಿವಾರಣೆಮಾಡುವೆನು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನೆಂದು ಸೂತಮಹರ್ಷಿಗಳು ಶಿವಮಹಿಮಾಶುಶ್ರೂಷುಗಳಾದ ಋಷಿಗಳಿಗೆ ತಿಳಿಸಿದರು. ॥೪೮॥

### ಅಷ್ಟಮಾಂಶದ ಸಾರಾಂಶ

ಈ ಎಂಟನೆಯ ಅಂಶವು ಚಿತ್ರರಥನೆಂಬ ಗಂಧರ್ವನ ಇತಿಹಾಸದಿಂದ ಆರಂಭ ವಾಗುವುದು. ಚಿತ್ರರಥನು ಮುನಿಕನ್ನಿಕೆಯೊಬ್ಬಳನ್ನು ಮೋಹಿಸಿ, ಋಷಿಶಾಪದಿಂದ ಅಪಸ್ಮಾರರೋಗಪೀಡಿತನಾಗುವನು. ಕಿನ್ನರನೊಬ್ಬನ ಉಪದೇಶದಂತೆ ಚಿತ್ರರಥನು ಶಿವನಾಮಸ್ಮರಣೆಮಾಡಿ ಶಾಪಮುಕ್ತನಾಗುವನು. ನಂದಿ ಮತ್ತು ಭೃಂಗಿ ಇವರಿಬ್ಬರೂ ಶಂಕರಾರಾಧನೆಯಿಂದ ಗಣಶ್ರೇಷ್ಠರಾಗುವರು. ಕಶ್ಯಪಪತ್ನಿಯರಾದ ಕದ್ರೂ, ಸುಪರ್ಣೀ ಇವರಿಬ್ಬರ ಜಗಳದ ಫಲವಾಗಿ ಸುಪರ್ಣಾಪುತ್ರನಾದ ಗರುಡನು ಅಮೃತವನ್ನು ತರಬೇಕಾಗುವುದು. ಆ ಕಾರ್ಯಸಾಧನೆಗಾಗಿ, ಗರುಡನು ತಂದೆಯಾದ ಕಶ್ಯಪನಿಂದ ಶಿವಮಂತ್ರೋಪದೇಶವನ್ನು ಪಡೆದು, ಶಿವಾರಾಧನೆಮಾಡುವನು. ಆದರಿಂದ ಗರುಡನು ವಿಜಯಿಯಾಗಿ ಅಮೃತವನ್ನು ಅಪಹರಿಸಿ ತರಲು, ಕೂಡಲೇ ಖಿನ್ನರಾದ ದೇವತೆಗಳು ವಿಷ್ಣುವಿನ ಮೂಲಕ ಗರುಡನ ಸಮೀಪಕ್ಕೆ ಬಂದು ಗರುಡ ನನ್ನು ಸ್ತುತಿಸಿ ಮತ್ತೆ ಅಮೃತವನ್ನು ಪಡೆಯುವರು. ಇದನ್ನರಿತ ಕದ್ರೂಪುತ್ರರಾದ ನಾಗಗಳೂ ತಮ್ಮ ತಂದೆಯ ಅಪ್ಪಣೆಯಂತೆ ತಾವೂ ಶಿವಾರಾಧನೆಗೆ ತೊಡಗುವರು.

ಆದಿಶೇಷನೇ ಮೊದಲಾದ ಸಕಲ ನಾಗದೇವತೆಗಳು ಪ್ರತ್ಯೇಕವಾದ ಶಿವಲಿಂಗಗಳನ್ನು ತಮ್ಮ ಹೆಸರಿನ ಮೇಲೆ ಪ್ರತಿಷ್ಠಾಪಿಸಿ ಸ್ತೋತ್ರಮಾಡುವುವು. ಹೀಗೆ ಪಾತಾಳ ಲೋಕವೆಲ್ಲಾ ಶಿವಲಿಂಗಮಯವಾಗುವುದು. ಭೂಮಿಯನ್ನು ಎಂಟು ದಿಕ್ಕಿನಲ್ಲಿಯೂ ಹೊತ್ತಿರುವ ಅಷ್ಟದಿಗ್ಗಜಗಳು ಬೇರೆ ಬೇರೆಯಾಗಿ ಶಿವಲಿಂಗಗಳನ್ನು ನಿರ್ಮಿಸಿ ಧ್ಯಾನಾದಿಗಳಿಂದ ಶಿವಾರಾಧನೆಮಾಡಿ ಸರ್ವಸಿದ್ಧಿಯನ್ನೂ ಪಡೆಯುವುವು.

ಇಲ್ಲಿಗೆ ಭೀಮನಾಮಕವಾದ ಶ್ರೀಶಿವರಹಸ್ಯದ ಎಂಟನೆಯ ಅಂಶದಲ್ಲಿ ಅಷ್ಟದಿಗ್ಗಜಗಳು ಶಿವಾರಾಧನೆಮಾಡಿದ ಕ್ರಮವನ್ನು ತಿಳಿಸುವ ಮೂವತ್ತನೆಯ ಅಧ್ಯಾಯವು ಮುಗಿದುದು.

ಎಂಟನೆಯ ಅಂಶವು ಸಮಾಪ್ತವಾದುದು.